# ಕರ್ನಾಟಕ ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಹಾಗೂ ಭದ್ರತೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸಿದ
ಮಹಾಪ್ರಬಂಧ

ಸಂಶೋಧಕರು
ಶ್ರೀಮತಿ ಗೀತಾ ಎಂ. ಯಂಕಂಚಿ

ಮಾರ್ಗದರ್ಶಕರು
ಡಾ. ಚೆಲುವರಾಜು





ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ
ಡಿಸೆಂಬರ್–2011

# ಕರ್ನಾಟಕ ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಹಾಗೂ ಭದ್ರತೆ

ಕನ್ನಡ ವಿಶ್ವವಿದ್ಯಾಲಯಕ್ಕೆ ಪಿ.ಎಚ್.ಡಿ. ಪದವಿಗಾಗಿ ಸಲ್ಲಿಸಿದ
ಮಹಾಪ್ರಬಂಧ

ಸಂಶೋಧಕರು
ಶ್ರೀಮತಿ ಗೀತಾ ಎಂ. ಯಂಕಂಚಿ

ಮಾರ್ಗದರ್ಶಕರು
ಡಾ. ಚೆಲುವರಾಜು



ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ,
ಹಂಪಿ, ವಿದ್ಯಾರಣ್ಯ
ಡಿಸೆಂಬರ್–2011

**ಡಾ. ಚೆಲುವರಾಜು**
ಪ್ರವಾಚಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ
ಹಂಪಿ

# ಪ್ರಮಾಣ ಪತ್ರ

**ಶ್ರೀಮತಿ ಗೀತಾ ಎಂ. ಯಂಕಂಚಿರವರು** ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ಪಿ.ಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ **ಕರ್ನಾಟಕ ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಹಾಗೂ ಭದ್ರತೆ** ಮಹಾಪ್ರಬಂಧವು ಅವರ ಸ್ವತಂತ್ರ ಹಾಗೂ ಮೂಲ ಸಂಶೋಧನಾ ಕಾರ್ಯ. ಈ ಸಂಶೋಧನೆಯನ್ನು 2008 ರಿಂದ 2011ರ ಅವಧಿಯಲ್ಲಿ ನನ್ನ ಮೇಲ್ವಿಚಾರಣೆ ಮತ್ತು ಮಾರ್ಗದರ್ಶನದಲ್ಲಿ ಕೈಗೊಂಡಿರುವರು. ಸಂಶೋಧನೆಯ ವಿಷಯ ಹಾಗೂ ಫಲಿತಾಂಶಗಳನ್ನು ಬೇರೆಲ್ಲೂ, ಯಾವುದೇ ಪದವಿ ಅಥವಾ ಡಿಪ್ಲೋಮಾ ಪಡೆಯಲು ಸಲ್ಲಿಸಿರುವುದಿಲ್ಲ.

ದಿನಾಂಕ ೨೨.೧೨.೨೦೧೧.
ಹಂಪಿ : ವಿದ್ಯಾರಣ್ಯ

(ಡಾ. ಚೆಲುವರಾಜು)
ಮಾರ್ಗದರ್ಶಕರು

# ಘೋಷಣಾ ಪತ್ರ

**ಕರ್ನಾಟಕ ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಹಾಗೂ ಭದ್ರತೆ** ಮಹಾಪ್ರಬಂಧವು ನನ್ನ ಸ್ವತಂತ್ರ ಹಾಗೂ ಮೂಲ ಸಂಶೋಧನಾ ಕಾರ್ಯ. ಈ ಸಂಶೋಧನೆಯನ್ನು ಡಾ. ಚೆಲುವರಾಜು, ಪ್ರವಾಚಕರು, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ,ಹಂಪಿ. ಇವರ ಮಾರ್ಗದರ್ಶನದಲ್ಲಿ 2008 ರಿಂದ 2011ರ ಅವಧಿಯಲ್ಲಿ ಕೈಗೊಂಡಿದ್ದೇನೆ. ಈ ಸಂಶೋಧನೆಯ ವಿಷಯ ಹಾಗೂ ಫಲಿತಾಂಶಗಳನ್ನು ಬೇರೆಲ್ಲೂ, ಯಾವುದೇ ಪದವಿ ಅಥವಾ ಡಿಪ್ಲೋಮಾ ಪಡೆಯಲು ಸಲ್ಲಿಸಿರುವುದಿಲ್ಲ ಎಂದು ಪ್ರಮಾಣಿಸುತ್ತೇನೆ.

ದಿನಾಂಕ 23.12.2011

ಚಿಂತಾಮಣಿ

(ಗೀತಾ ಎಂ. ಯಂಕಂಚಿ)

# ಪರಿವಿಡಿ

# ಕೋಷ್ಟಕಗಳು

# ಚಿತ್ರಗಳು

# ಅಧ್ಯಾಯ 1. ಪರಿಚಯ

*"ಭೂಮಿಯ ಮೇಲಿರುವುದಾವುದೂ ಕೊನೆಯಾಗದು, ಬದಲಾವಣೆಯಾಗುತ್ತದೆ. ಮುಂಡಾರಿ ನಾಡು, ಮುಂಡಾರಿ ಭೂಮಿ, ಬಂಡೆಗಳು, ಬೆಟ್ಟಗಳು, ನದಿಗಳು, ಕಾಡು, ಬರುತ್ತಾ ಹೋಗುತ್ತಾ ಇರುವ ಋತುಗಳು, ಘರ್ಷಣೆ, ಇವು ಮುಗಿಯುವುದಿಲ್ಲ. ಕೊನೆಯಾಗುವುದಿಲ್ಲ. ಮನುಷ್ಯರೂ ಇದ್ದು ಹೋಗುತ್ತಾರೆ. . . . . . . . . . . . . ."*

**– ಮಹಾಶ್ವೇತಾದೇವಿ**

**'ಅರಣ್ಯೇರ್ ಅಧಿಕಾರ್'** ಕೃತಿಯಲ್ಲಿ

ನಿಸರ್ಗದ ಜತೆಯಲ್ಲಿ ಬದುಕನ್ನು ಸಮೀಕರಿಸಿಕೊಂಡ ಅರಣ್ಯವಾಸಿ ಬುಡಕಟ್ಟು ಸಮುದಾಯದ ಜನರು ತಮ್ಮ ನೆಲೆಯಲ್ಲಿನ ನೆಮ್ಮದಿಯ ಹುಡುಕಾಟದ ಮನಸ್ಸನ್ನು ಖ್ಯಾತ ಬರಹಗಾರ್ತಿ ಹೀಗೆಂದಿದ್ದಾರೆ. ನೆಲೆಯಲ್ಲಿ ನೆಮ್ಮದಿಯೆಂದರೆ ನಿರಂತರ ಸಂಘರ್ಷದ ಬದುಕು! ಈ ಸಂಘರ್ಷಕ್ಕೂ ಕೊನೆಯೆಂಬುದಿಲ್ಲ. ನಿಸರ್ಗದ ಒಡಲೊಳಗಿನ ಅನಂತತೆಯಲ್ಲಿ ಒಂದಾದ, ಅದರಲ್ಲೇ ತಮ್ಮನ್ನು ಅರ್ಪಿಸಿಕೊಂಡ ಅರಣ್ಯವಾಸಿ ಬುಡಕಟ್ಟಿನ ಸಮುದಾಯ ಕುರಿತಂತೆ, ನಾಗರೀಕ ಸಮಾಜದ ಅರಿವು ತುಂಬಾ ಕಡಿಮೆಯೆ. ಎಷ್ಟೆಂದರೂ, ನಾಗರೀಕ ಅರಿವು ಹಾಗೂ ಗ್ರಹಿಕೆಯಲ್ಲೇ ಅವರನ್ನು ಅರ್ಥೈಸುವುದರಿಂದ – ಆ ಸಮುದಾಯದ ಕುರಿತಂತೆ ತಿಳುವಳಿಕೆಯು ಕಡಿಮೆ. ಆದಾಗ್ಯೂ ವರಿಯರ್ ಎಲ್ವಿನ್ (1990) ಅವರ ಗಿರಿಜನ ಪ್ರಪಂಚವು ತಮ್ಮನ್ನು ಮುಡುಪಾಗಿಟ್ಟು ಅರ್ಥೈಸುವ ಪ್ರಯತ್ನ ಬುಡಕಟ್ಟು ಅಧ್ಯಯನಕ್ಕೆ ಅದ್ಭುತವಾದ ಮಾದರಿ. ಜಾಗತಿಕ ಜನಸಂಖ್ಯೆಯಲ್ಲಿ ಶೇಕಡ 5ರಷ್ಟಿರುವ ಹಾಗೂ ಬಡವರಲ್ಲಿ ಶೇಕಡ 15ರಷ್ಟಿರುವ ಬುಡಕಟ್ಟು ಸಮುದಾಯಗಳ ರಚನೆಯು ವಿಶಿಷ್ಟವಾದದ್ದು. ಮಾನವ ಸಂಸ್ಕೃತಿಯ ಮೂಲಗಳ ಹುಡುಕಾಟದಲ್ಲಿ ಆಸಕ್ತಿಯ ಬೇರುಗಳನ್ನು ಹೊಂದಿರುವ ಸಮಾಜವು ಇದಾಗಿದೆ (UNESC, 2006). ಮೂಲತಃ ಹಸಿವು ಮತ್ತು ಆಹಾರ ಭದ್ರತೆಗಳ ನಡುವಣ ಸಂಬಂಧ ಹಾಗೂ ಸಂಕೀರ್ಣತೆಗಳ ಅರ್ಥೈಸುವ ಪ್ರಯತ್ನದಲ್ಲಿ ಜಾಗತಿಕ ನಿಲುವುಗಳು ಎಲ್ಲಾ ಸಮುದಾಯಗಳ, ಅದರಲ್ಲೂ ಪ್ರಮುಖವಾಗಿ ಬುಡಕಟ್ಟುಗಳ ಕುರಿತ ಅರಿವಿನ ಹುಡುಕಾಟ ನಡೆದೇ ಇದೆ.

ಹಸಿವು ಮಾನವರ ಸಂಗಾತಿ, ದುರಾದೃಷ್ಟವೆಂದರೆ, ಬಡತನವೂ ಇವರನ್ನೇ ಕಾಡುವುದು. ಹಸಿವಿಗೆ ಊಟ ಹೊಂಚುವ ಮಾತು ಬಂದಾಗಲೆಲ್ಲಾ ಜಗತ್ತಿನ ಎಲ್ಲರ ಆಲೋಚನೆಗಳೂ ಆಹಾರದ ಉತ್ಪಾದನೆಯ ಬಗ್ಗೆ ಅಷ್ಟೆ ಚರ್ಚಿತವಾಗುತ್ತವೆ. ಆದರೆ, ಆಹಾರದ ಹಂಚುವಿಕೆಯು ಅರ್ಥವಾಗುವುದಿಲ್ಲ. ಬಹುಪಾಲು ಹಸಿವಿನ ಅನಾಹುತಗಳು ತೀಕ್ಷ್ಣ ಉಪಾಯಗಳ ಜಾರಿಯಿಂದ ತಪ್ಪುವುದಲ್ಲದೆ, ದೊಡ್ಡ, ದೊಡ್ಡ ಅಂತರ ರಾಷ್ಟ್ರೀಯ ಸಂಸ್ಥೆಗಳ, ಬಹುರಾಷ್ಟ್ರೀಯ ಕಂಪನಿಗಳ ಯೋಜನೆಗಳಿಂದ ಖಂಡಿತಾ ಅಲ್ಲ ಎಂದು ಖ್ಯಾತ ವಿಜ್ಞಾನಿ ಸೂಸನ್ ಜಾರ್ಜ್ ಅವರ ವಾದ (ಸೂಸನ್ ಜಾರ್ಜ್, 1976). ವಿಶ್ವ ಆಹಾರ ಮತ್ತು ಕೃಷಿ ಸಂಸ್ಥೆಯ ಬುಡಕಟ್ಟು ಸಮುದಾಯದ ಆಹಾರ ಭದ್ರತೆಯ ನಿಲುವಿನ ವರದಿಯಂತೆ (FAO, 2011) ಬುಡಕಟ್ಟು ಸಮುದಾಯಗಳ ಆಹಾರ

ಭದ್ರತೆಯು ತಮ್ಮ ಆಯ್ಕೆಯ ಆಹಾರ ಹಾಗೂ ತಮ್ಮ ಸಂಪ್ರದಾಯದಂತೆ ಆಹಾರ ತಯಾರಿಯನ್ನು ಒಳಗೊಂಡಿದೆ.

ಬುಡಕಟ್ಟುಗಳು ಸಮಾಜ ಹಾಗೂ ಜೀವನದ ಅರಿವಿನ ಹುಡುಕಾಟಕ್ಕೆ ಸಧ್ಯದ ಪರಿಸ್ಥಿತಿಯಲ್ಲಿ ಪ್ರಮುಖವಾದ ಸಾಹಿತ್ಯಿಕ ಪ್ರಯತ್ನಗಳಲ್ಲಿ ಶಿವರಾಮ ಕಾರಂತರ (1951) ಕುಡಿಯರ ಕೂಸು, ಮಹಾಶ್ವೇತಾದೇವಿಯವರ (1975) ಅರಣ್ಯೇರ್ ಅಧಿಕಾರ್‌ನಲ್ಲಿ ಬಿರ್ಸಾ ಮುಂಡಾ ಬದುಕಿನ ಸಂಘರ್ಷದ ದಾಖಲೆಗಳು ಬುಡಕಟ್ಟು ಅಧ್ಯಯನಕ್ಕೆ ಅತ್ಯುತ್ತಮ ಮಾರ್ಗದರ್ಶನಗಳಾಗಿವೆ. ಇವರಲ್ಲೂ ಒಂದು ಸುಸ್ಥಿರ ಬದುಕನ್ನು ಕಾಣುವ ಹಂಬಲವಂತೂ ಆಧುನಿಕ ಸಮಾಜಕ್ಕೆ ಅದರಲ್ಲೂ ಅವರನ್ನು ಮುಖ್ಯವಾಹಿನಿಯತ್ತ ತರುವ ಪ್ರಯತ್ನದ ಹಿನ್ನೆಲೆಗೆ ಖಂಡಿತಾ ಇದೆ. ಸುಸ್ಥಿರ ಸಮಾಜದ ಸಾಧ್ಯತೆಗೆ ವಿಜ್ಞಾನ ಮತ್ತು ತಂತ್ರಜ್ಞಾನದ ಮೂಲಕ ಆಹಾರ ಭದ್ರತೆಯ ವಿಸ್ತೃತ ಚರ್ಚೆಯ ಅನಿವಾರ್ಯವನ್ನು ತಂದಿದೆ (ರಾವ್, 1996). ಇದಾಗಿ ನಮ್ಮ ದೇಶದ ವಿಜ್ಞಾನ ಕಾಂಗ್ರೆಸ್ಸಿನ ತಮ್ಮ ಅಧ್ಯಕ್ಷೀಯ ಭಾಷಣವನ್ನು ಇಂತಹ ಅನಿವಾರ್ಯಗಳ ಕುರಿತೆ ಮುಡುಪಾಗಿರಿಸಿ ತಮ್ಮ ವೈಜ್ಞಾನಿಕ ಹಾಗೂ ನಿಷ್ಠೂರ ನಡೆಗಳನ್ನು ಪ್ರೊಫೆಸರ್ ಯು. ಆರ್. ರಾವ್ ದಾಖಲಿಸಿದ್ದಾರೆ.

ಆಹಾರ ಭದ್ರತೆಯು ಒಂದು ಜೀವಿ ತನ್ನ ಬದುಕನ್ನು ಸಂಪೂರ್ಣಗೊಳಿಸಲಿಕ್ಕಾಗಿ ಹಸಿವು ನೀಗಿಸಲು ಅತ್ಯವಶ್ಯಕವಾಗಿ ಬೇಕಾಗುವ ಒಂದು ಸ್ಥಿತಿ. ಅಲೆಮಾರಿಯಾಗಿದ್ದ ಮಾನವ ನಾಗರೀಕತೆ ಎಡೆಗೆ ಸಾಗುವ ಹಾದಿಯಲ್ಲಿ ಮೊದಲ ಆರಂಭವೇ ಒಂದೆಡೆ ನೆಲೆ ಕಂಡದ್ದು. ವಸತಿಗೆ ಅನುವಾದ ಮನುಷ್ಯ ಆ ಸ್ಥಳದಲ್ಲೇ ಅವಶ್ಯಕತೆಗಳ ಪೂರೈಕೆಗೂ ಅವಕಾಶಗಳನ್ನು ಸೃಷ್ಟಿಸುವುದು ಅನಿವಾರ್ಯವಾಯಿತು.

ಸರಳವಾಗಿ ಹೇಳುವುದಾದಲ್ಲಿ ಆಹಾರಕ್ಕೆಂದು ಕೃಷಿ ಮಾಡತೊಡಗಿದ ಅದರ ಸಮಾನಾಂತರವಾಗಿಯೇ ಪಶುಪಾಲನೆಯು ಸೇರಿಕೊಂಡಿತು. ಕೃಷಿ ಮತ್ತು ಪಶುಪಾಲನೆಗಳು ಒಂದಕ್ಕೊಂದು ಪೂರಕವಾಗುವಂತೆ ಬೆಳೆದು ಎರಡರ ನಡುವಿನ ಅನ್ಯೋನ್ಯತೆ ಹೆಚ್ಚಾಯಿತು. ಕೃಷಿ ಎನ್ನುವುದು ಉತ್ಪಾದಕತೆಯ ಬದುಕಾಗಿ ಅನೇಕ ಅಗತ್ಯಗಳು ಅನಿವಾರ್ಯವಾಗತೊಡಗಿದವು. ಈ ಅಗತ್ಯಗಳನ್ನು ಪೂರೈಸುವ ಸಲುವಾಗಿ ವಿವಿಧ ಕುಶಲತೆಗಳು ವಿಕಾಸಗೊಂಡವು ವಸತಿ ನಿರ್ಮಾಣ, ಕೃಷಿ ಪರಿಕರಗಳು, ಕೃಷಿ ಉತ್ಪನ್ನಗಳ ಸಂಸ್ಕರಣೆಗಳನ್ನು ನಿಭಾಯಿಸಲು ಬಡಗಿ, ಕಮ್ಮಾರಿಕೆ, ಕುಂಬಾರಿಕೆ ಇತ್ಯಾದಿ ಹಲವು ವೃತ್ತಿಗಳು ಕೃಷಿ ಸಮಾಜದ ಭಾಗವಾಗಿ ವಿಕಾಸಗೊಂಡವು. ಈ ರೀತಿಯಾಗಿ ಇಂತಹ ಅನಿವಾರ್ಯ ವಿಕಸನಗಳು ಕೂಡ ಜೀವನೋಪಾಯಗಳಾಗಿ ನಂತರ ವೃತ್ತಿಯಾಗಿ ಕುಲಸಕಸುಬುಗಳಾಗಿ ತಮ್ಮತನವನ್ನು ಉಳಿಸಿಕೊಂಡು ಬಂದಿವೆ. ಈ ಪ್ರಕಾರಗಳು ಬದುಕಿನ ಭಾಗವಾಗಿ ಆಹಾರ ಭದ್ರತೆಯ ನಿರ್ವಹಣೆಗೂ ಕಾರಣಗಳಾಗಿವೆ. ಈ ಮಾರ್ಗೋಪಾಯಗಳಂತೆ, ಭಿಕ್ಷೆ ಸ್ವೀಕರಿಸುವುದು ಕೂಡ ಇಂತಹ ನಿರ್ವಹಣೆಯ ಭಾಗವೇ ಆಗಿದೆ.

ಯಾವುದೇ ವೃತ್ತಿ ವಿಕಾಸವು ಅದರ ಬೆಳವಣಿಗೆಯ ಹಾದಿಯಲ್ಲಿ ಅಗತ್ಯವಾದ ರೂಪುರೇಷೆಗಳು, ರೀತಿರಿವಾಜುಗಳನ್ನು ಒಳಗೊಂಡಿರುತ್ತವೆ. ಒಂದು ವೃತ್ತಿಯ ಬೆಳವಣಿಗೆಯು

ಶ್ರೇಷ್ಠತೆ ಎಡೆಗೆ ಸಾಗುವಾಗ ಅವುಗಳ ರೀತಿ ನೀತಿಗಳು ಗಟ್ಟಿಗೊಳ್ಳುತ್ತಾ ಸಾಗುತ್ತವೆ. ಇವೇ ಮುಂದೆ ಆ ವೃತ್ತಿಯ ಸೇವೆಯನ್ನು ಪರಿಪೂರ್ಣವಾಗಿ ಹಾಗೂ ಆ ವೃತ್ತಿಯ ಅನಿವಾರ್ಯವನ್ನು ಸಮಾಜದ ಅವಕಾಶವಾಗಿ ಕಲ್ಪಿಸುತ್ತವೆ. ಸಮಾಜವು ವೃತ್ತಿಯ ಅನಿವಾರ್ಯತೆಯನ್ನು ಕಲ್ಪಿಸದ ಹೊರತು ವೃತ್ತಿಗೆ ಅವಕಾಶವಿರುವುದಿಲ್ಲ.

ಹೀಗೆ ಸಮಾಜದ ಅನಿವಾರ್ಯಗಳು ವೃತ್ತಿಗೆ ಅವಕಾಶ ಬೆಳೆಸುತ್ತಾ ಬಂದಿದೆ. ಈ ಅನಿವಾರ್ಯ ಮತ್ತು ಅವಶ್ಯಕತೆಗಳ ಹಿಂದೆ ಆಹಾರ ಪೂರೈಕೆಯ ಆಶಯವಿದೆ/ಜವಾಬ್ದಾರಿಯಿದೆ. ಏಕೆಂದರೆ ಈ ಸ್ಥಿತಿಯು ಮಾನವ ನಿರ್ಮಿತ ಆಗಿರುವುದರಿಂದ ಎಲ್ಲ ಮಾನವರ ಆಹಾರ ಭದ್ರತೆಯ ಜವಾಬ್ದಾರಿಗಳು ಕೂಡ ಇವುಗಳನ್ನೊಳಗೊಂಡಿದೆ. ಬಹುಷಃ ಇಂತಹ ನಿಲುವೇ ಯಾರೂ ಹಸಿವಿನಿಂದ ಜೀವ ಕಳೆದುಕೊಳ್ಳಬಾರದು ಎನ್ನುವ ನಿಯಮಾವಳಿಗಳು ವಿಕಾಸಗೊಂಡಿರುತ್ತವೆ. ಹಸಿವನ್ನು ನಿಭಾಯಿಸುವುದು ಸಮಾಜದ ಬಹುಮುಖ್ಯ ಜವಾಬ್ದಾರಿಯಾಗಿದೆ. ನಿಸರ್ಗದಲ್ಲೂ ಕೂಡ ಹಸಿವಿನ ನಿರ್ವಹಣೆಗೆ ಸಾಕಷ್ಟು ಸಂಘರ್ಷ ಹಾಗೂ ಹಲವು ರೀತಿಯ ಸಹಭಾಗಿತ್ವಗಳು ನಡೆದೇ ಇವೆ. ಇವುಗಳ ವಿಕಾಸ ಕೂಡ ನಿರಂತರವಾಗಿದೆ. ಈ ಸಂಘರ್ಷಗಳ ಮತ್ತು ಸಹಭಾಗಿತ್ವಗಳನ್ನು ಆಹಾರ ಸರಪಳಿ ಮಾದರಿಯಲ್ಲಿಯೋ ಅಥವಾ ಜೀವ ಪರಿಸ್ಥಿಯ ವೈಧಾನಿಕತೆಗಳಲ್ಲಿಯೋ ನಿರೂಪಿಸಿ ಅರ್ಥೈಸಲು ಪ್ರಯತ್ನಿಸಿದ್ದೇವೆ. ಈ ಎಲ್ಲಾ ಪ್ರಯತ್ನಗಳು ಕೂಡ ಸಧ್ಯದ ಪರಸ್ಥಿತಿಯಲ್ಲಿ ಹಸಿವನ್ನು ನಿಭಾಯಿಸುವ ತಂತ್ರಗಳಾಗಿ ಬಳಸುತ್ತಿದ್ದೇವೆ.

ಆಹಾರ ಭದ್ರತೆ ಎನ್ನುವುದು ಜೈವಿಕ ಪರಂಪರೆಗಳನ್ನೊಳಗೊಂಡ ಹಾಗೂ ಅದನ್ನೇ ಕುರಿತಾದ ಅತ್ಯಂತ ಸಂಕೀರ್ಣವಾದ ಒಂದು ಪರಿಕಲ್ಪನೆಯಾಗಿದೆ. ಆದರೆ ನಿಸರ್ಗದ ನಿಯಮವು ಒಂದಿದೆ. ಎಲ್ಲ ದಾರ್ಶನಿಕರು, ಅಧ್ಯಯನಶೀಲರು ಕಂಡುಕೊಂಡಂತೆ ಜೀವಿಗಳು ಬದುಕಲು ಬೇಕಾದಷ್ಟು ಅವಶ್ಯಕತೆಯನ್ನು ಪೂರೈಸುವ ಸಾಮರ್ಥ್ಯ ನಿಸರ್ಗಕ್ಕೆ ಇದೆ. ಹೀಗಿದ್ದು ವಾಸ್ತವ ಪರಿಸ್ಥಿತಿ ಬೇರೆಯೆ ಆಗಿರುವುದನ್ನು ಕಾಣುತ್ತಿದ್ದೇವೆ. ಅನೇಕ ವೈಜ್ಞಾನಿಕ ಅಧ್ಯಯನಗಳು, ವಿಶ್ಲೇಷಣೆಗಳು ರೂಪಿಸಿರುವ ರೀತಿಯಲ್ಲಿ ಉತ್ಪಾದನೆಯ ಏರುಪೇರು, ನ್ಯೂನ್ಯಪೋಷಣೆ, ಹಂಚಿಕೆಯ ವ್ಯತ್ಯಯ ಇತ್ಯಾದಿಗಳು ಸಮಂಜಸವಾದ ವಿವರಣೆಯನ್ನು ಕೊಡಲು ಸಾಧ್ಯವಾಗಿಲ್ಲವೇನೊ. ಕಾರಣ ಮನುಷ್ಯನ ಹೊರತಾದ ಜೈವಿಕ ಆಹಾರ ಭದ್ರತೆ ಎನ್ನುವುದು ನಿಸರ್ಗ ನಿಯಮಕ್ಕೆ ಒಳಪಟ್ಟಿದೆ. ಅಲ್ಲಿನ ಆಗು ಹೋಗುಗಳಿಗೆ ನಿಸರ್ಗವೆ ಜವಾಬ್ದಾರಿಯನ್ನು ಹೊರುತ್ತಿದೆ. ನಿಸರ್ಗದ ಜವಾಬ್ದಾರಿಯು ಜೈವಿಕ ವಿಕಾಸದ ಮೂಲಕ ಇವುಗಳನ್ನು ನಿಭಾಯಿಸುವ ಕಲಿಕೆಯನ್ನು ಒದಗಿಸುತ್ತದೆ.

### ನಾಗರಿಕ ಸಮಾಜ ಮತ್ತು ಆಹಾರ ಭದ್ರತೆ

ಆಹಾರ ಭದ್ರತೆಯ ಪರಿಕಲ್ಪನೆಗಳ ಕುರಿತಾಗಿ ಕೆಲವು ದಶಕಗಳಿಂದ ಚರ್ಚೆ, ಚಿಂತನೆ, ಅಧ್ಯಯನ, ಕಾರ್ಯಯೋಜನೆ ಮುಂತಾದ ವಿವಿಧ ಆಯಾಮಗಳ ಪ್ರಕ್ರಿಯೆಗಳು ನಡೆಯುತ್ತಲೇ ಇವೆ. ಇಲ್ಲಿ ಗಮನಿಸಬೇಕಾದ ಪ್ರಮುಖ ಸಂಗತಿಯೊಂದಿದೆ. ಆಯಾ ಕಾಲಕ್ಕೆ ಕಂಡುಬಂದ ಸಮಸ್ಯೆಗಳಿಗೆ ಅನುಗುಣವಾಗಿ, ಪರಿಹಾರೋಪಾಯವಾಗಿ ಉತ್ಪಾದನೆ, ಹಂಚಿಕೆ, ಆಹಾರ ಕೊಳ್ಳಲು

ಆರ್ಥಿಕ ಸ್ಥಿತಿಗತಿ ಮುಂತಾದ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಕಾರ್ಯಕ್ರಮಗಳನ್ನು ರೂಪಿಸಲಾಗಿದೆ. ಎಲ್ಲಾ ಹಂತದಲ್ಲೂ ಆಯಾ ಸಾಂದರ್ಭಿಕವಾದ ಸಮಸ್ಯೆಯನ್ನೇ ಮುಖ್ಯವಾಹಿನಿಯಲ್ಲಿಟ್ಟು ಪರಿಹಾರದ ಅಥವಾ ಪರಿಹಾರದ ಕಡೆಗೆ ಕೊಂಡೊಯ್ಯುವ ಮಾರ್ಗಗಳ ಕಡೆಗೆ ಕಂಡುಕೊಳ್ಳುವ ಪ್ರಯತ್ನಗಳು ನಡೆದಿವೆ. ಪ್ರತೀ ಸಂದರ್ಭದಲ್ಲೂ ಹೊಸ ಹೊಸ ಪ್ರಕ್ರಿಯೆಗಳು ತಂತ್ರಜ್ಞಾನಗಳು ಇತ್ಯಾದಿ ರೂಪದಲ್ಲಿ ಆಲೋಚನೆಗಳ ಬದಲಾವಣೆ, ಹಾಗೂ ಒಂದರಿಂದ ಮತ್ತೊಂದಕ್ಕೆ ಜಾರುತ್ತ ಯೋಜಿತವಾಗಿರುವುದು ಗಮನಾರ್ಹ. ಎಲ್ಲಕ್ಕೂ ಮುಖ್ಯವಾಗಿ ಈ ಎಲ್ಲಾ ಆಲೋಚನೆಗಳೂ ಒಂದು ಗೊತ್ತಾದ ಜ್ಞಾನ ವಿಕಾಸದ ಹಿನ್ನೆಲೆಯಿಂದ ವಿಕಾಸಗೊಂಡಂತೆ ಸ್ಪಷ್ಟವಾಗುತ್ತವೆ. ಹಲವಾರು ಅಧ್ಯಯನಗಳು ಇದಕ್ಕೆ ಸಾಮಗ್ರಿಯನ್ನು ಒದಗಿಸುತ್ತವೆ.

ಪಾರಂಪರಿಕ ಜ್ಞಾನದ ವಿಕಾಸದ ಹಿನ್ನೆಲೆಯಲ್ಲಿ ಅದರ ಆಶಯಗಳು ಅಭಿವೃದ್ಧಿಯ ಉದ್ದೇಶಗಳನ್ನು ಹೊಂದಿರಲೇಬೇಕಾಗುತ್ತದೆ. ಪಾರಂಪರಿಕ ಜ್ಞಾನಗಳು ಜೀವನದ ಅವಶ್ಯಕತೆಗಳ ಮೂಲಭೂತ ಬೇಕು-ಬೇಡಗಳ ಪರಿಕಲ್ಪನೆಯ ಪರಿಧಿಯ ಹಿನ್ನೆಲೆಯಲ್ಲಿ ಹುಟ್ಟನ್ನು ಕಂಡಿವೆ. ಜೀವನೋಪಾಯದ ತಂತ್ರಗಳು ವಿಕಾಸವಾಗುವ ಆಯಾ ಜೀವನ ಕ್ರಮದ ಅಭಿವೃದ್ಧಿಯ ಉದ್ದೇಶಗಳನ್ನು ಮುಂದಿಟ್ಟುಕೊಂಡೇ ವಿಕಾಸಗೊಂಡಿವೆ. ಅಭಿವೃದ್ಧಿಯ ಆಶಯಗಳಲ್ಲಿ ಸ್ಥಳೀಯ ಚಿಂತನೆಗಳು, ಸರ್ವಕಾಲಿಕ ಸಂಪನ್ಮೂಲ ನಿರ್ವಹಣೆ, ನಿಸರ್ಗದ ಸಹಯೋಗ, ಜೀವನೋಪಾಯದ ಸರಳೀಕರಣ, ನೈಸರ್ಗಿಕ ವಿಕೋಪಗಳಿಂದ ಸಂರಕ್ಷಣೆ, ವಿವಿಧ ಸಂಘರ್ಷಗಳನ್ನು ತಡೆದುಕೊಳ್ಳುವ ಜವಾಬ್ದಾರಿ ಇವೇ ಮೊದಲಾದ ವಿಚಾರಗಳು ಹಾಸು ಹೊಕ್ಕಾಗಿರುತ್ತವೆ. ಸ್ಥಳೀಯ ಚಿಂತನೆಗಳು ಒಂದು ಪ್ರಾದೇಶಿಕ ಅವಶ್ಯಕತೆಯ ಅನ್ಯೋನ್ಯತೆಯನ್ನೂ ಅರ್ಥಪೂರ್ಣವಾಗಿ ಒಳಗೊಂಡಿರಬೇಕಾಗಿರುತ್ತದೆ. ಎಲ್ಲಾ ಸಂದರ್ಭಗಳಲ್ಲೂ ಇವು ಆಯಾ ಪ್ರದೇಶದ ನೈಜ ವಿಚಾರಗಳನ್ನು ಒಳಗೊಂಡಿರುತ್ತವೆ. ಅನೇಕ ಸಮುದಾಯಗಳ ಅಧ್ಯಯನಗಳು ಇವನ್ನು ಸಾಬೀತು ಪಡಿಸುತ್ತವೆ. ಬಹುಪಾಲು ಬುಡಕಟ್ಟು ಸಮುದಾಯಗಳ ಅಧ್ಯಯನಗಳು ಇಂತಹ ನೆಲೆಯನ್ನು ಒದಗಿಸುವಲ್ಲಿ ಸಹಕಾರಿಯಾಗಿವೆ. ಆ ಮೂಲಕ ಆಹಾರ ಭದ್ರತೆಯ ಆಯಾಮಗಳ ಹುಡುಕಾಟಕ್ಕೆ ನೆರವನ್ನು ಒದಗಿಸಿವೆ.

ಪ್ರಾಯಶಃ ಕುತೂಹಲಗೊಂಡ ಮಾನವನ ಮನಸ್ಸೇ, ಪಾರಂಪರಿಕ ಜ್ಞಾನ ಮೂಲ ವಿಕಾಸದ ಸೆಲೆಯಾಗಿರಬಹುದು. ನೈಸರ್ಗಿಕ ವಿಕೋಪಗಳಿಂದ ರಕ್ಷಿಸಿಕೊಳ್ಳಲು ಬಿಸಿಲು-ಗಾಳಿ ಮಳೆಯ ಲೆಕ್ಕಾಚಾರಕ್ಕೆ ಮೊದಲ್ಗೊಂಡ ಮಾನವ ಅದರ, ಅರಿವನ್ನು ವಿಸ್ತರಿಸುವಲ್ಲಿ, ವಿಕಾಸಗೊಳಿಸುವಲ್ಲಿ ಬಹು ಮುಖ್ಯ ಕಾಣಿಕೆಯನ್ನು ನೀಡಿದ್ದಾನೆ. ಹಲವು ಅಲೆಮಾರಿ ಸಮುದಾಯಗಳಂತೂ ನಿಸರ್ಗದ ಈ ಧೋರಣೆಯನ್ನು ಅರಿತೇ ತಮ್ಮ ಜೀವನವನ್ನೂ ದಿನಗಳನ್ನು ನಡೆಸಬೇಕಾದ್ದರಿಂದ ಅದರ ಮಹತ್ವವನ್ನು ಅರ್ಥಪೂರ್ಣವಾಗಿ ಕಾಪಾಡಿಕೊಂಡು ಬಂದವರಾಗಿದ್ದಾರೆ. ಮುಖ್ಯವಾಗಿ ಅಲೆಮಾರಿಗಳು ಬರ ಮತ್ತು ಮಳೆಗಳ ನಡುವೆ ಹಸಿವನ್ನು ನಿಯಂತ್ರಿಸುವ ಜಾಣ್ಮೆಯನ್ನು ಅರಿಯಬೇಕಾದ ಅನಿವಾರ್ಯದಿಂದ ಈ ಬಗೆಯ ಅರಿವನ್ನು ರೂಢಿಸಿಕೊಂಡಿದ್ದಾರೆ. ನಿರಂತರ ಬರದಲ್ಲಿ ಮುಂಬರುವ ಸಮೃದ್ಧ ದಿನಗಳನ್ನು ಲೆಕ್ಕಹಾಕುವ ತಿಳುವಳಿಕೆಗಳಿಗೆ ನಿದರ್ಶನಗಳಿವೆ.

ಭೌಗೋಳಿಕ ಅರಿವಿನಿಂದ ದಾರಿಯ ನಿಸರ್ಗದ ಜೀವ ವೈವಿಧ್ಯದ ಪರಿಚಯವನ್ನು ಜೀವನದ ತಿಳುವಳಿಕೆಯ ಭಾಗವಾಗಿ ನೋಡಿದ ದಾಖಲೆಗಳಿವೆ.

ಆಫ್ರಿಕಾದ ಕೀನ್ಯಾದಲ್ಲಿ ವಾಸಿಸುವ 'ಸಂಬಾರು' ಜನಾಂಗವು ಒಂದು ಅಲೆಮಾರಿ ಸಮುದಾಯ. ಇವರ ಕುರಿತ ಅನೇಕ ಅಧ್ಯಯನಗಳು ಅವರ ನಿಸರ್ಗದ ತಿಳುವಳಿಕೆಯನ್ನು ದಾಖಲು ಮಾಡಿವೆ. ಮೈಖಲ್ ರೈನಿ ಎಂಬ ಅಮೇರಿಕಾದ ಜೀವ ಶಾಸ್ತ್ರಜ್ಞರು ಸುಮಾರು 20 ವರ್ಷಗಳ ಕಾಲ ಈ ಜನಾಂಗದ ಬದುಕಿನ ಮೇಲೆ, ಅವರ ಪಾರಂಪರಿಕ ನಿಸರ್ಗದ ನಡುವೆ ಬದುಕುವ ಜಾಣ್ಮೆಯನ್ನು ಅವರು ಕಂಡುಕೊಂಡಿದ್ದಾರೆ. ಉದಾಹರಣೆಗೆ ಸುಮಾರು 150 ಮಿ.ಮಿ. ನಿಂದ 800 ಮಿ.ಮಿ. ವ್ಯತ್ಯಾಸವುಳ್ಳ ಮಳೆ ಬೀಳುವ ಪ್ರದೇಶದಲ್ಲಿ ನಿರಂತರವಾಗಿ ಬದುಕನ್ನು ಸಾಗಿಸಿದ್ದಾರೆ (ಜಾನ್ ರೀಡರ್, 1990).

ಪಾಲ್ ಸ್ಪೆನ್ಸರ್ ಎಂಬ ಮತ್ತೋರ್ವ ಮಾನವಶಾಸ್ತ್ರಜ್ಞ ಇದೇ 'ಸಂಬಾರು' ಜನಾಂಗದ ಹಿರಿಯರ ಕುರಿತು ಅವರ ಪರಿಸರದ ತಿಳುವಳಿಕೆಯನ್ನು ಕೊಂಡಾಡಿದ್ದಾನೆ. ಈ ಜನಾಂಗದ ಹಿರಿಯರು ಬರ ಮತ್ತು ಮಳೆಯ ದಿನಗಳ ಆವರ್ತವನ್ನು ಹವಾಮಾನ ಶಾಸ್ತ್ರಜ್ಞರಂತೆ ಅರ್ಥೈಸುವ ಪರಿಣಿತಿ ಸಾಧಿಸಿದ್ದಾರೆ. ಪರಿಸರದ ಸಸ್ಯವರ್ಗದ ಜೀವಂತಿಕೆ, ಅಲ್ಲಿನ ಜಾನುವಾರಗಳ ಆರೋಗ್ಯ ಮುಂತಾದ ಮಾಹಿತಿಯಿಂದ ನಿಸರ್ಗದ ಹವಾಮಾನವನ್ನು ಅರಿಯುವ ಕುರಿತು ದಾಖಲೆಗಳು ಕಾಣಬರುತ್ತವೆ. ಇವೆಲ್ಲವೂ ನಮಗೆ ಜೀವನದ ಅವಶ್ಯಕತೆಗಳ ಹುಡುಕಾಟದಲ್ಲಿ ಅರಿವಿನ ವಿಕಾಸದ ಅನುಭವಗಳು ಮತ್ತು ಆ ದೆಸೆಯಲ್ಲಿ ಸಮುದಾಯಗಳ ಪರಿಶ್ರಮಗಳೂ ಅರ್ಥವಾಗುತ್ತವೆ(ಜಾನ್ ರೀಡರ್, 1990).

ಮನುಷ್ಯ ತನ್ನ ಆಹಾರ ಅನ್ವೇಷಣೆಗಾಗಿ ಸ್ಥಳದಿಂದ ಸ್ಥಳಕ್ಕೆ ಅಲೆಯುತ್ತಿದ್ದು ನವಶಿಲಾಯುಗದ ಕಾಲದಲ್ಲಿ ಮೊದಲ ಬಾರಿಗೆ ಮನುಷ್ಯ ಒಂದೆಡೆ ನೆಲೆಸುವುದನ್ನು ರೂಡಿಸಿಕೊಳ್ಳುತ್ತಾ ಮುಂದೆ ಇದು ಸಮುದಾಯ ಜೀವನಕ್ಕೆ ನಾಂದಿಯಾಯಿತು. ವಿಶೇಷವಾಗಿ ಬೆಟ್ಟಗುಡ್ಡಗಳ ಕಲ್ಲಾಸರೆ ಮತ್ತು ಗುಹೆಗಳಲ್ಲಿ ವಸತಿ ವ್ಯವಸ್ಥೆಯನ್ನು ಕಂಡುಕೊಂಡನು. ಅಲ್ಲಿ ಬೆಟ್ಟದ ತಪ್ಪಲಿನ ಬಯಲಿನಲ್ಲಿ ಕೃಷಿಯನ್ನು ಆರಂಭಿಸಿದನು ಹಾಗೂ ಪಶುಪಾಲನೆಯನ್ನು ಮೈಗೂಡಿಸಿಕೊಂಡನು. ಚಕ್ರದ ಉಪಯೋಗವನ್ನು ಅರಿತು ತನ್ನ ಬಳಕೆಗೆ ಬೇಕಾದ ಮಣ್ಣಿನ ಪಾತ್ರೆ ತಯಾರಿಸಿದನು. ಹೀಗೆ ತನ್ನ ಬದುಕಿನ ಉನ್ನತೀಕರಣಕ್ಕೆ ಅಗತ್ಯವಾದ ತಂತ್ರಗಳನ್ನು ಕಂಡುಕೊಂಡಂತೆ ಒಂದಡೆ ಸ್ಥಿರವಾಗಿ ನೆಲೆಸುವಲ್ಲಿ ಮಗ್ನನಾದನೆಂದು ಗ್ರಹಿಸಬಹುದು. ಕಾಲಾನಂತರ ಲೋಹದ ಬಳಕೆಯನ್ನು ಕಂಡುಕೊಂಡನು. ಹೀಗೆ ಅನೇಕ ಆಯಾಮಗಳನ್ನು ಒಳಗೊಂಡ ಸ್ಥಿರ ಜೀವನವನ್ನು ವ್ಯವಸ್ಥೆಗೊಳಿಸಲು ಮುಂದಾದನು. ತಾನು ಇರುವಲ್ಲೇ ಎಲ್ಲವನ್ನು ಪಡೆದುಕೊಳ್ಳುತ್ತಾ ಕ್ರಿಯಾಶೀಲನಾದನು. ಶತಮಾನಗಳ ಅಂತರದಲ್ಲಿ ಮಾನವನ ತಾಂತ್ರಿಕ ಕೌಶಲ್ಯ ಅಭಿವೃದ್ಧಿಗೊಳ್ಳುತ್ತಿದಂತೆ ಕೃಷಿಯೇತರ ಚಟುವಟಿಕೆಗಳು ಸಹ ಬಿರುಸಿನಿಂದ ಸಾಗತೊಡಗಿ ಕೈಗಾರಿಕಾ ಘಟಕಗಳು, ಜವಳಿ ಉದ್ದಿಮೆ ಮುಂತಾದವುಗಳಿಂದ ನಗರಗಳು ಬೆಳೆಯತೊಡಗಿದವು. ಹೀಗೆ

ಬೆಳೆಯುತ್ತಿರುವ ಜನಸಂಖ್ಯೆಗನುಗುಣವಾಗಿ ಆಹಾರದ ಭದ್ರತೆ ಒದಗಿಸುವುದು ಆಡಳಿತ ವ್ಯವಸ್ಥೆಗೆ ಪ್ರಮುಖ ವಿಷಯವಾಯಿತು.

**ಆಹಾರ ಕೊರತೆಯ ಪರಿಣಾಮಗಳು ಮತ್ತು ಪರಿಹಾರ ಪ್ರಯೋಗಗಳು**

ಜಗತ್ತಿನಲ್ಲಿ ಪ್ರತಿಶತಃ 50ರಷ್ಟು ಜನರು ನ್ಯೂನ್ಯಪೋಷಣೆಗೆ ತುತ್ತಾಗುತ್ತಿದ್ದಾರೆ ಎಂದು ವಿಶ್ವ ಸಂಸ್ಥೆ ವರದಿ ಮಾಡಿದೆ. ಈ ವರದಿಯಂತೆ ಪ್ರತಿ ಸೆಕೆಂಡಿಗೆ ಒಬ್ಬರು ಆಹಾರ ಸಂಬಂಧಿತ ಕಾಯಿಲೆಯಿಂದ ಮರಣವನ್ನಪ್ಪುತ್ತಿದ್ದಾರೆ. ನ್ಯೂನ್ಯಪೋಷಣೆ ಪರಿಣಾಮವಾಗಿ ಜನರಲ್ಲಿ ಕೆಲಸದಲ್ಲಿ ನಿರಾಸಕ್ತಿ, ನಿರುತ್ಸಾಹ, ಪದೇ ಪದೇ ಕಾಯಿಲೆ ಬೀಳುವುದು, ಮಾನಸಿಕ ಅಸ್ಥಿರತೆ ಮುಂತಾದವು ಕಾಣಬರುತ್ತವೆ. ಇವೆಲ್ಲಾ ಒಟ್ಟಾರೆಯಾಗಿ ದೇಶದ ಅಭಿವೃದ್ಧಿಗೆ ಅಡ್ಡಗೋಡೆಯಂತೆ ಪರಿಣಮಿಸಿದೆ. ನ್ಯೂನ್ಯಪೋಷಣೆ ನಿವಾರಣೆಗೆ ಒತ್ತು ಕೊಟ್ಟು ಪರಿಣಾಮಕಾರಿ ಮಾರ್ಗ ಅನುಸರಿಸುವುದರಿಂದ ನ್ಯೂನ್ಯಪೋಷಣೆಯಿಂದ ಸಂಭವಿಸುವ ಸಾವಿನ ಸಂಖ್ಯೆಯಲ್ಲಿ ಇಳುಮುಖ ಮಾಡಬಹುದು (ಗ್ರಾಹಂ, 2007).

ಭಾರತದಲ್ಲಿ ಆಹಾರ ಅಭದ್ರತೆಯ ಸಮಸ್ಯೆಯ ಪರಿಹಾರಕ್ಕಾಗಿ ಉತ್ಪಾದನೆಗೆ ಹೆಚ್ಚು ಒತ್ತು ಕೊಡಲಾಯಿತು. ಕೃಷಿಯಲ್ಲಿ ಹೊಸ ಹೊಸ ಸಂಶೋಧನೆ ಮತ್ತು ತಂತ್ರಜ್ಞಾನಗಳ ಬಳಕೆ ಮತ್ತು 1960 ರ ದಶಕದಲ್ಲಿ ಕೃಷಿಯಲ್ಲಿ ಹಸಿರು ಕ್ರಾಂತಿಯ ಪರಿಣಾಮವಾಗಿ ಮಿಶ್ರ ಬೆಳೆ ಪದ್ಧತಿಯಿಂದ ಏಕದಳ ಧಾನ್ಯಗಳಾದ ಭತ್ತ, ಗೋಧಿ, ಮೆಕ್ಕೆ ಜೋಳ ಉತ್ಪಾದನೆ ಹೆಚ್ಚಿದ್ದು ಇದರಿಂದ ಹಸಿವಿನಿಂದ ಬಳಲುವವರಿಗೆ ಆಹಾರ ದೊರೆಯಿತೆ ವಿನಃ ಪೋಷಣೆಗೆ ಅವಶ್ಯಕವಾದ ಪೌಷ್ಟಿಕ ಆಹಾರ ಒದಗಿಸುವಂತಾಗಲಿಲ್ಲ. ಅಲ್ಲದೇ ಹೀಗೆ ಹೊಸ ಹೊಸ ಕೃಷಿ ತಂತ್ರಜ್ಞಾನಗಳ ಅವಿಷ್ಕಾರದಿಂದ ಕೃಷಿಕರು ಅದರಲ್ಲಿಯೂ ಮುಖ್ಯವಾಗಿ ಕರ್ನಾಟಕ, ಕೇರಳ, ತಮಿಳುನಾಡು ಕೃಷಿಕರು ಲಾಭದಾಯಕ ಬೆಳೆಗಳಾದ ಸಂಬಾರ ಪದಾರ್ಥ, ರಬ್ಬರ್, ಟೀ ಮುಂತಾದುವುಗಳಿಗೆ ಹೆಚ್ಚಿನ ಭೂಮಿಯನ್ನು ಉಪಯೋಗಿಸಿದರ ಫಲವಾಗಿ ಆಹಾರ ಧಾನ್ಯಗಳು ಅದರಲ್ಲಿಯೂ ದ್ವಿದಳ ಧಾನ್ಯಗಳು, ತೃಣ ಧಾನ್ಯಗಳ ಉತ್ಪಾದನೆಯಲ್ಲಿ ಅಸಮತೋಲನ ಉಂಟಾಯಿತು (ಸುಜಯ್, 2005).

ಬದಲಾಗುತ್ತಿರುವ ಜೀವನ ಶೈಲಿ, ನಗರೀಕರಣ ಸಂಕುಚಿತಗೊಂಡ ಕೃಷಿ ಪದ್ಧತಿ, ಸಂಸ್ಕರಿಸಿದ ಆಹಾರ ಪದಾರ್ಥಗಳ ಲಭ್ಯತೆ, ಸಮಯದ ಅಭಾವ ಅಸಮಂಜಸ ಆಹಾರ ಪದಾರ್ಥಗಳ ಆಯ್ಕೆ ಮುಂತಾದವುಗಳು ಸಹ ಆಹಾರ ಭದ್ರತೆಯನ್ನು ಒದಗಿಸುವಲ್ಲಿ ವಿಫಲವಾಗಿವೆ. ಬದಲಾಗುತ್ತಿರುವ ಜೀವನ ಶೈಲಿ ಮತ್ತು ಅಸಮತೋಲನ ಆಹಾರ ಪದ್ಧತಿಯಿಂದಾಗಿ ನಗರ ವಾಸಿಗಳು ದೀರ್ಘಕಾಲದ ಆರೋಗ್ಯ ತೊಂದರೆಗಳಿಗೆ ಹೆಚ್ಚಾಗಿ ಈಡಾಗುತ್ತಿದ್ದಾರೆ (WHO, 2004). ಒಟ್ಟಾರೆಯಾಗಿ ಹೇಳುವುದಾದರೆ, ಆಹಾರ ಭದ್ರತೆಯನ್ನು ನೀಡುವಲ್ಲಿ ರೂಪಿಸಿರುವ ಯೋಜನೆಗಳು ಹೊಸ ಹೊಸ ಸಮಸ್ಯೆಗಳಿಗೆ ದಾರಿ ಮಾಡಿಕೊಡುತ್ತಿದ್ದು ಈ ಸಮಸ್ಯೆಗಳ ನಿವಾರಣೆಗೆ ಮತ್ತೆ ಹೊಸ ಹೊಸ ಯೋಜನೆಗಳನ್ನು ರೂಪಿಸುತ್ತಿದ್ದು ಇಂದಿಗೂ ಅಭದ್ರತೆಯ ಸಮಸ್ಯೆಯು ಸಮಸ್ಯೆಯಾಗಿಯೇ ಉಳಿದಿದೆ.

## ಬುಡಕಟ್ಟು ಸಮುದಾಯಗಳ ಆಹಾರ ಭದ್ರತೆ

ಕೃಷಿ ಸಂಸ್ಕೃತಿ, ಆಹಾರ ಉತ್ಪಾದನೆ, ಆಹಾರ ಸಾಮಗ್ರಿಗಳ ಶೇಖರಣೆ ಇತ್ಯಾದಿಗಳೊಂದಿಗೆ ವಿಕಾಸದಲ್ಲಿ ವಿವಿಧ ಹಂತಗಳನ್ನು ಗುರುತಿಸಿಕೊಂಡು ಸಾಗುತ್ತಿರುವ ನಾಗರೀಕ ಸಮಾಜ ಒಂದೆಡೆಯಾದರೆ, ನಾಗರೀಕ ಸಮಾಜದಿಂದ ದೂರವೇ ಉಳಿದು ನಿಸರ್ಗಕ್ಕೆ ತುಂಬ ಹತ್ತಿರವಾಗಿ ಬದುಕುತ್ತಾ ಜೀವನ ಸಾಗಿಸುತ್ತಿರುವ ಬುಡಕಟ್ಟು ಸಮುದಾಯವು ಆಹಾರದ ಭದ್ರತೆಗಾಗಿ ತಮ್ಮದೇ ಆದ ಪರಂಪರೆ, ಜ್ಞಾನ, ವಿಶೇಷ ವಿಧಾನಗಳನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಬಹುದು.

ಕೃಷಿಯಲ್ಲಿ ಬಹುಬೆಳೆ ಪದ್ಧತಿ ಅಳವಡಿಸಿಕೊಂಡು ಬುಡಕಟ್ಟು ಜನರು ನಿಸರ್ಗದಲ್ಲಿ ದೊರೆಯುವ ಸುಮಾರು 1000–1500 ವಿಧದ ಆಹಾರಗಳನ್ನು ಉಪಯೋಗಿಸುತ್ತಿದ್ದಾರೆ. ಆದರೆ, ನಾಗರೀಕ ಸಮಾಜ ಮಾತ್ರ ಆಹಾರ ಆಯ್ಕೆಯನ್ನು ಸಂಕುಚಿತಗೊಳಿಸುತ್ತಾ ಬಹುಬೆಳೆ ಪದ್ಧತಿಯಿಂದ ಏಕಬೆಳೆ ಕೃಷಿಗೆ ಪ್ರಾಶಸ್ತ್ಯ ನೀಡುತ್ತಾ 100–150 ವಿವಿಧ ಆಹಾರಗಳ ಮೇಲೆ ಅವಲಂಬಿತರಾಗಿದ್ದಾರೆ. ಬುಡಕಟ್ಟು ಜನರ ಬಹು ಆಹಾರಗಳ ಆಯ್ಕೆ ಮತ್ತು ಬಹು ಬೆಳೆ ಪದ್ದತಿಯು ಆಹಾರದ ವೈವಿಧ್ಯತೆಯನ್ನು ಹೆಚ್ಚಿಸುವುದಲ್ಲದೆ, ಏಕಬೆಳೆ ಪದ್ದತಿಯಿಂದ ಉಂಟಾಗುವ ಭೂಮಿಯ ಮೇಲಿನ ಶೋಷಣೆಯನ್ನು ತಡೆಗಟ್ಟುತ್ತದೆ. ಬುಡಕಟ್ಟು ಜನರು ಆಹಾರಗಳಿಗಾಗಿ ಉಪಯೋಗಿಸುವ ಸುಮಾರು ಹತ್ತು ವಿಧದ ತಳಿಗಳು ನಾಗರಿಕ ಜನರಿಗೆ ತಿಳಿದಿರಲಿಲ್ಲವೆಂದು ರವಿಶಂಕರ್‌ರವರು (2005) ಬುಡಕಟ್ಟುಗಳ ಅಧ್ಯಯನದ ವರದಿಯಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ನೈಸರ್ಗಿಕ ಸಂಪನ್ಮೂಲಗಳ ಸದ್ಬಳಕೆಯ ಜ್ಞಾನವನ್ನು ಬುಡಕಟ್ಟು ಜನರು ಹೊಂದಿದ್ದಾರೆ ಎಂದು ಸಹ ಅವರು ಅಭಿಪ್ರಾಯ ಪಟ್ಟಿದ್ದಾರೆ. ಅವರ ಅಧ್ಯಯನದಿಂದ ತಿಳಿದುಬಂದ ಮಾಹಿತಿಯಂತೆ ತಮಿಳು ನಾಡಿನ ಕಾದರ ಎಂಬ ಬುಡಕಟ್ಟು ಜನರು ಆಹಾರಕ್ಕಾಗಿ ಗೆಡ್ಡೆಗೆಣಸುಗಳನ್ನು ಕೊಯ್ಲು ಮಾಡುವಾಗ ಬಲಿತ ಗಡ್ಡೆಗಳನ್ನು ಮಾತ್ರ ಆಯ್ದುಕೊಂಡು ಮುಂದಿನ ಋತುಮಾನಕ್ಕೆ ಇತರರು ಉಪಯೋಗಿಸಲೆಂದು ಸಸ್ಯದ ಕಾಂಡದ ಭಾಗವನ್ನು ಭೂಮಿಯಲ್ಲಿ ಹೂಳುತ್ತಾರೆ. ಅಲ್ಲದೆ, ತಾವು ಸಂಗ್ರಹಿಸಿದ ಆಹಾರ ಪದಾರ್ಥಗಳನ್ನು ಹಂಚಿಕೊಂಡು ಸೇವಿಸುವ ಪದ್ಧತಿಯನ್ನು ರೂಢಿಸಿಕೊಂಡಿರುತ್ತಾರೆ. ಮತ್ತು ಸಂಗ್ರಹಿಸಿದ ಆಹಾರದಲ್ಲಿ ಸ್ವಲ್ಪ ಭಾಗವನ್ನು ಮುಂದಿನ ದಿನಕ್ಕಾಗಿ ಸಂಗ್ರಹಿಸಿಡುವ ಪದ್ಧತಿಯನ್ನು ಸಹ ರೂಢಿಸಿಕೊಂಡಿದ್ದಾರೆ. ಈ ಅಭ್ಯಾಸಗಳಿಂದ ಸ್ವಾಭಾವಿಕ ಸಂಪನ್ಮೂಲಗಳ ಜೋಪಾನವಾಗಿ ಕಾಯ್ದುಕೊಳ್ಳುವುದನ್ನು ಗಮನಿಸಬಹುದಾಗಿದೆ. ಇವರು ಪರಿಸರಕ್ಕೆ ಹೊಂದಿಕೊಳ್ಳುವ ಹೆಚ್ಚು ಆರ್ಥಿಕ ಮೌಲ್ಯ ಪಡೆದಿರುವ ಸೋಂಕು ರೋಗಗಳನ್ನು ತಡೆಗಟ್ಟುವ ಗುಣಹೊಂದಿರುವ ಮತ್ತು ರಸಾಯನಿಕ ಗೊಬ್ಬರಗಳ ಅವಶ್ಯಕತೆ ಇಲ್ಲದಿರುವ ಸಂಪ್ರದಾಯಕ ತಳಿಗಳನ್ನು ಬೆಳೆಯುವ ಅಭ್ಯಾಸವನ್ನು ರೂಢಿಸಿಕೊಂಡಿದ್ದಾರೆ. ಇಂತಹ ಆಹಾರಗಳ ಸೇವನೆ ಆರೋಗ್ಯ ರಕ್ಷಣೆಗೆ ಸಹಕಾರಿಯಾಗಿವೆ.

ಇಂದಿನ ಪರಿಸ್ಥಿತಿಯಲ್ಲಿ ಅನೇಕ ಬುಡಕಟ್ಟು ಸಮುದಾಯಗಳು ತಮ್ಮ ಜೀವನ ನಿರ್ವಹಣೆಗಾಗಿ ತಲೆಮಾರುಗಳಿಂದ ರೂಢಿಸಿಕೊಂಡು ಬಂದಿರುವ ವೃತ್ತಿಗಳಿಂದ ಸಂಪೂರ್ಣವಾಗಿ ಹೊರ ಬರಲಾಗದ ಮತ್ತು ನಾಗರಿಕ ಸಮಾಜದ ಜೊತೆ ಸಂಪೂರ್ಣ ಒಗ್ಗಿಕೊಳ್ಳದೆ ಒಂದು ರೀತಿಯ ಗೊಂದಲಕ್ಕೆ ಸಿಲುಕಿಕೊಂಡಿದ್ದಾರೆ. ರೆಡ್ಡಿ (2003)ರವರ ಅಧ್ಯಯನದ ವರದಿಯಂತೆ ಬಡಗ

ಬುಡಕಟ್ಟು ಬದಲಾಗುತ್ತಿರುವ ತಾಂತ್ರಿಕತೆ ರೂಢಿಸಿಕೊಂಡು ಮುಖ್ಯವಾಹಿನಿ ತಲುಪಿದ್ದಾರೆ. ಆದರೆ ಇರುಳರು ಕುರುಂಬಾ ಮತ್ತು ಟಾಡ ಬುಡಕಟ್ಟು ಹೊಸ ತಾಂತ್ರಿಕತೆಗಳಿಗೆ ಅಳವಡಿಸಿಕೊಳ್ಳದೆ ಹಳೇ ಸಂಪ್ರದಾಯಗಳನ್ನು ಮುಂದುವರಿಸಿಕೊಂಡಿದ್ದಾರೆ.

ಅನಾದಿಕಾಲದಿಂದಲೂ ಮನುಷ್ಯ ತನ್ನ ಆಹಾರಕ್ಕಾಗಿ ಜೈವಿಕ ಸಂಪತ್ತಿನ ಮೇಲೆ ಅವಲಂಬಿತನಾಗಿದ್ದಾನೆ ಆದ್ದರಿಂದ ಜೈವಿಕ ಜಗತ್ತಿನೊಂದಿಗೆ ಅವಿನಾಭಾವ ಸಂಬಂಧ ಬೆಳೆಸಿಕೊಂಡು ಬಂದಿದ್ದಾನೆ. ಇಂತಹ ಒಂದು ಅನ್ಯೋನ್ಯ ಸಂಬಂಧವನ್ನು ಇಂದಿಗೂ ಸಹ ನಿಸರ್ಗಕ್ಕೆ ಹತ್ತಿರವಾಗಿ ಬದುಕುತ್ತಿರುವ ಬುಡಕಟ್ಟು ಕುಟುಂಬಗಳಲ್ಲಿ ಕಾಣಬಹುದಾಗಿದೆ. ನಿಸರ್ಗದ ಮಡಿಲಲ್ಲಿ ಹುಟ್ಟಿ ನಿಸರ್ಗದ ಜತೆ ಆಡಿ ಬೆಳೆದು ನಿಸರ್ಗವನ್ನೇ ಪೂಜಿಸಿ ಬದುಕುತ್ತಿರುವ ಬುಡಕಟ್ಟು ಸಮುದಾಯವು ಸಸ್ಯ ಸಂಪತ್ತಿನ ಬಳಕೆ ಮತ್ತು ಸಂರಕ್ಷಣೆ ವಿಧಾನಗಳನ್ನು ಕಂಡುಕೊಂಡಿದ್ದಾನೆ. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳು ತಮ್ಮ ಆಹಾರ ಭದ್ರತೆಗಾಗಿ ಕಂಡುಕೊಂಡ ವಿವಿಧ ಆಯಾಮಗಳ ಕುರಿತು ಅಭ್ಯಸಿಸಲು ಕೆಳಕಂಡ ಉದ್ದೇಶಗಳೊಂದಿಗೆ, ಕರ್ನಾಟಕದಲ್ಲಿ ವಾಸಿಸುತ್ತಿರುವ ಬುಡಕಟ್ಟು ಜನರ ಜೀವನ ಶೈಲಿ, ಸಾಮಾಜಿಕ, ಆರ್ಥಿಕ, ಪೌಷ್ಟಿಕ ಸ್ಥಿತಿಗತಿ ಆಹಾರದ ಬಗೆಗಿನ ಪಾರಂಪರಿಕ ಜ್ಞಾನ, ಆಹಾರದ ಭದ್ರತೆಗಾಗಿ ಅವರು ರೂಢಿಸಿಕೊಂಡು ಬಂದಿರುವ ಸಂಪ್ರದಾಯಗಳು, ಆಚಾರ ವಿಚಾರಗಳು ಆಚರಣೆಗಳು ಅನುಸರಿಸುತ್ತಿರುವ ವಿಧಾನಗಳು ಮುಂತಾದುವುಗಳನ್ನು ಕುರಿತು ಅಧ್ಯಯನವನ್ನು ನಡೆಸಲಾಗಿದೆ.

**ಅಧ್ಯಯನದ ಉದ್ದೇಶಗಳು**

- ಆಹಾರ ಭದ್ರತೆಯ ನಿಸರ್ಗ ದೃಷ್ಟಿಯ ಅಧ್ಯಯನ
- ಆಹಾರ ಭದ್ರತೆಯ ಪಾರಂಪರಿಕ ದೃಷ್ಟಿಯ ಅಧ್ಯಯನ
- ಆಹಾರ ಭದ್ರತೆಯ ಲೋಕ ದೃಷ್ಟಿಯ ಅಧ್ಯಯನ
- ಸಮಕಾಲೀನ ಸಂದರ್ಭದಲ್ಲಿ ಆಹಾರ ಭದ್ರತೆಯ ಪೂರ್ವಾಪರಗಳ ಸಮೀಕರಣ

**ಅಧ್ಯಯನದ ವ್ಯಾಪ್ತಿ**

ಈಗಾಗಲೆ ಅನೇಕ ಸಂಶೋಧನೆಗಳಲ್ಲಿ ಕಂಡುಕೊಂಡ ಪರಿಕಲ್ಪನೆಗಳನ್ನು ಒಟ್ಟುಗೂಡಿಸಿ ನೋಡುವುದು. ಅಂದರೆ ಆಹಾರ ಉತ್ಪಾದನೆಯಿಂದ ಹಿಡಿದು ಆಹಾರ ಸಂಗ್ರಹಣೆ, ಸಂಸ್ಕರಣೆ, ಸರಬರಾಜು, ಹಂಚಿಕೆಗಾಗಿ ರೂಪಿಸಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಯೋಜನೆಗಳು, ಕಾರ್ಯಕ್ರಮಗಳು, ಪಾರಂಪರಿಕ ವಿಧಾನಗಳ (ದಾನ, ಭಿಕ್ಷೆ, ಚೆರುಪು) ಕುರಿತಾದ ಲಭ್ಯವಿರುವ ಆಕರಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು. ಜೊತೆಗೆ ಸಮಕಾಲೀನ ಸಂದರ್ಭದ ಆಹಾರ ಭದ್ರತೆಯ ಅವಲೋಕನ.

ನಿಸರ್ಗಕಟ್ಟಿಕೊಟ್ಟ ಭದ್ರತೆಯಲ್ಲಿ ನಾಗರೀಕ ಸಮಾಜಕ್ಕಾಗಬಹುದಾದ ಅನುಕೂಲಗಳ ಪರಾಮರ್ಶೆ. ಮನುಷ್ಯರು ಆಹಾರ ಭದ್ರತೆಗಾಗಿ ಅನುಸರಿಸುತ್ತಿರುವ ಅನೇಕ ವಿಧಾನಗಳಂತೆ ನಿಸರ್ಗದಲ್ಲಿಯೂ ಸಹ ಆಹಾರ ಭದ್ರತೆಗಾಗಿ ನಡೆಯುತ್ತಿರುವ ವಿವಿಧ ವಿಧಾನಗಳನ್ನು ನಾವು ಕಾಣುತ್ತಿದ್ದೇವೆ. ಇಂತಹ ವಿಧಾನಗಳ ಮತ್ತು ತಂತ್ರಗಳ ಕುರಿತಾಗಿ ಉದಾಹರಣೆಗಾಗಿ ಆಹಾರ ಚಕ್ರ, ನಿಸರ್ಗದ ಚಟುವಟಿಕೆಗಳು ಮುಂತಾದವುಗಳ ಆಕರಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು ಮತ್ತು ಇಂತಹ ಒಂದು ಸಾಧ್ಯತೆಗೆ ನಿಸರ್ಗದ ಭಾಗವಾಗಿ ಜೀವಿಸುವ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಮತ್ತು ಭದ್ರತೆಯ ಅಧ್ಯಯನ.

**❖ ಆಹಾರ ಭದ್ರತೆಯ ನಿಸರ್ಗದೃಷ್ಟಿಯ ಅಧ್ಯಯನ**

ಜೈವಿಕ ಪರಂಪರೆಯು ನಿರಂತರವಾಗಿ ಚಲನಶೀಲವಾಗಿದೆ. ಎಲ್ಲ ಜೀವಿಗಳೂ ಕಾರ್ಯಶೀಲವಾಗಿರುವುದೇ ಆಹಾರದ ನಿರಂತರ ಹುಡುಕಾಟದಿಂದ. ಆಹಾರದ ತಲುಪುವಿಕೆ ಎಲ್ಲಾ ಜೀವಿಗೂ ಏಕಮಾತ್ರ ಕಡ್ಡಾಯ ಕಾರ್ಯಯೋಜನೆ. ಆಹಾರಕ್ಕಾಗಿ ವಿವಿಧ ಅವಲಂಬನೆಗಳು ನಿಸರ್ಗದಲ್ಲಿ ಕಾಣಬರುತ್ತವೆ. ಸಸ್ಯಗಳಲ್ಲಿ ಪ್ರಾಣಿಗಳಲ್ಲಿ ಒಂದನ್ನೊಂದು ಅವಲಂಬಿಸಿರುವ ಈ ನಿಸರ್ಗ ಪ್ರಕ್ರಿಯೆ ಆಹಾರದ ಬಲೆಗೆ ಕಾರಣವಾಗಿವೆ. ಹಲವಾರು ಮೇಲುವರ್ಗದ ಜೀವಿಗಳು ಇತರೆ ಜೀವಿಗಳ/ಪೋಷಕರನ್ನು ಅವಲಂಬಿಸಿದ್ದರೆ ಹಲವು ಸ್ವತಂತ್ರವಾಗಿವೆ. ಜೀವಿಗಳಲ್ಲಿ ಮೂಲಭೂತ ಅವಶ್ಯಕತೆಗಳಲ್ಲಿ ಆಹಾರವನ್ನು ಪಡೆಯಲು ಸಾಕಷ್ಟು ಕಾರ್ಯತಂತ್ರಗಳು ವಿಕಾಸಗೊಂಡಿವೆ.

ನೈಸರ್ಗಿಕ ಕ್ರಿಯೆಗಳಲ್ಲಿ, ಹಸಿರು ಸಸ್ಯಗಳಲ್ಲಾಗುವ ದ್ಯುತಿಸಂಶ್ಲೇಷಣೆ ಅಥವಾ ಬೆಳಕನ್ನು ಶಕ್ತಿಯನ್ನಾಗಿ ಉಪಯೋಗಿಸಿ ಹಸಿರು ಸಸ್ಯಗಳಲ್ಲಿ ನಡೆವ ಆಹಾರ ಉತ್ಪಾದನೆಯನ್ನು ಅದ್ವಿತೀಯ ಎನ್ನಲಾಗುತ್ತದೆ. ಇದನ್ನೇ ಪ್ರಮುಖ ಟೂಲ್/ಪರಿಕರವಾಗಿ ಬಳಸುವ ಪ್ರಕ್ರಿಯೆ ಆಹಾರೋತ್ಪಾದನೆ. ಆಹಾರದ ಹುಡುಕಾಟದ ಪರಿಯನ್ನು ಆದಿ ಜೀವಿಗಳಿಂದ ಮಾನವರವರೆಗೂ ವಿವೇಚಿಸಿದರೆ ಸರಳತೆಯಿಂದ ಸಂಕೀರ್ಣತೆಗೆ ಕಾಣುವುದು. ಹಾಗೆಯೇ ಜೀವಿತಾವಧಿಯಲ್ಲೂ ಆಸರೆಯಿಂದ ಹೊರನಡೆವ ಪ್ರಕ್ರಿಯೆಯೂ ಕಾಣಬರುತ್ತದೆ. ಅಂದರೆ ತಾಯಿಯ ಆಸರೆಯಿಂದ ಹೊರನಡೆವ ಪ್ರಕ್ರಿಯೆಯೂ ಕಾಣಬರುತ್ತದೆ. ಅಂದರೆ ತಾಯಿಯ ಆಸರೆಯಲ್ಲೆ ಬೆಳೆವ ಮಗು, ಬೆಳೆದಂತೆ ಸ್ವತಂತ್ರವಾಗುತ್ತಾ ಸಂಪೂರ್ಣ ಹೊರನಡೆವ ಪ್ರಕ್ರಿಯೆ. ಇದೇ ನಿಸರ್ಗದ ನಿಯಮವೂ ಆಗಿರಬಹುದು. ಈ ಬಗೆಯ ವಿವಿಧ ಪ್ರಭೇದಗಳಲ್ಲಿ ವಿವಿಧ ಬಗೆಯಲ್ಲಿ ಕಾಣುತ್ತದೆ. ತಾಯಿಯನ್ನೇ ಆಶ್ರಯಿಸದ ಕೀಟಗಳು ಹುಟ್ಟು ಅನಾಥರು. ಜನಿಸಿದ ಮುಂದಿನ ಕ್ಷಣದಲ್ಲೆ ಆಹಾರ ಅರಸುವ ಶಕ್ತಿವಂತವಾಗಿರುತ್ತವೆ. ತಾಯಿಯನ್ನೇ ಸೀಳಿ ಹೊರಬರುವ ಚೇಳು-ಏಡಿಯ ಮರಿಗಳು ಸಂಪೂರ್ಣ ಸ್ವತಂತ್ರ ಜೀವನವನ್ನು ಆರಂಭಿಸುತ್ತವೆ.

ಹೀಗೆ ಆಹಾರದ ಪರಿಕಲ್ಪನೆ ಆದಿಜೀವಿಯಿಂದ ಮಾನವರವರೆಗೂ ವಿವಿಧ ಪ್ರಭೇದಗಳಲ್ಲಿ ವಿವಿಧ ವಯೋಮಾನದಲ್ಲಿ ಅನೇಕ ವಿಧದಲ್ಲಿ ವಿಕಾಸಗೊಂಡಿದೆ. ವಿಕಾಸಗೊಂಡ ಎಲ್ಲ ಜೀವಿಗಳ ಆಶಯ ಬದುಕು. ಬದುಕಿನ ಚಲನಶೀಲತೆಯ ಕಾರ್ಯಯೋಜನೆಗಳು. ಆಹಾರದ ಸುಸ್ಥಿರತೆಯ

ಗುರಿಯೇ ಚಲನಶೀಲ ಸಮಾಜದ ಒತ್ತಾಸೆ. ಇಂತಹ ಸಾಧ್ಯತೆಗಳನ್ನು ಕಟ್ಟಿಕೊಟ್ಟ ನಿಸರ್ಗದ ಈ ಅಪರೂಪ ವ್ಯವಸ್ಥೆಯನ್ನು ಹತ್ತಿರವಿಟ್ಟು ಜೀವಿಸುವುದು ಆರೋಗ್ಯಕರವಾದದ್ದು. ಆಹಾರದ ಎಲ್ಲಾ ಆಯಾಮಗಳನ್ನು ವಿವರವಾದ ಒಳನೋಟಗಳನ್ನೂ ಕಂಡುಕೊಳ್ಳುತ್ತಾ ಹೋದಂತೆ ಸಂಕೀರ್ಣತೆಗಳ ಪರಿಚಯವಾಗುತ್ತದೆ. ಅವುಗಳ ನಡುವೆಯೇ ಒಳಗೊಳ್ಳುತ್ತಾ ಬೆಳೆವ ಅರಿವೇ ನಿಸರ್ಗದ ದೃಷ್ಟಿಕೋನ. ಇದನ್ನು ಅಕ್ಷರರೂಪಗೊಳಿಸಿ ಅನಾವರಣ ಮಾಡುವುದೂ ಸಂಕೀರ್ಣ. ಆಹಾರದ ಹುಡುಕಾಟ, ಆಹಾರದ ಉತ್ಪಾದನೆ, ಸಂಗ್ರಹ, ಹಂಚಿಕೆ, ಇತ್ಯಾದಿ ಪರಿಕಲ್ಪನೆ ಮತ್ತು ವಾಸ್ತವಗಳ ಸಮೀಕರಿಸುತ್ತಾ ವಿಕಾಸದ ಉದ್ದಕ್ಕೂ ನಾಗರೀಕತೆಯಡೆ ಮುಖವಾಗಿದ್ದಾರೆ.

### ❖ ಆಹಾರ ಭದ್ರತೆಯ ಪಾರಂಪರಿಕ ದೃಷ್ಟಿ

ಆಹಾರದ ಪರಂಪರೆಯೆಂಬುದೊಂದಿದೆ. ಅದು ವಿವಿಧ ಸಂಸ್ಕೃತಿ, ಪ್ರದೇಶಗಳನ್ನು ಅನೇಕ ಬಗೆಗಳಿಂದ ಒಳಗೊಂಡು ಬೆಳೆದು ಬಂದಿದೆ. ಅದರಂತೆ ಇಲ್ಲಿನವರೆಗೂ ಕಾಯ್ದುಕೊಂಡು ಬಂದಿದೆ. ಮುಖ್ಯವಾಗಿ ಕಾಲ ಹಾಗೂ ಭೌಗೋಳಿಕ ಆಯಾಮಗಳಿಂದ ಅದು ಚಲನಶೀಲವಾಗಿದೆ. ಹಿಂದಿನಿಂದಲೂ ನಮ್ಮಲ್ಲಿ ಹಂಚಿ ಉಣ್ಣುವ ಪರಂಪರೆಯು ಬೆಳೆದು ಬಂದಿದೆ. ಊಟಕ್ಕೆ ಕುಳಿತ ಹೊತ್ತಲ್ಲಿ ಯಾರಾದರೂ ಬಿಕ್ಷುಕರು ಬೇಡಿದರೆ ತಿನ್ನುವ ಆಹಾರವನ್ನು ಹಂಚದೆ ತಿನ್ನದ ಪದ್ದತಿಗಳಿವೆ. ಅಲ್ಲದೆ ಊಟದ ಹಂಚಿಕೆಯು ಆತಿಥ್ಯದ ಔದಾರ್ಯ ಎಂದೇ ಪರಿಗಣಿಸಲ್ಪಟ್ಟಿದೆ.

ಬಹು ಮುಖ್ಯವಾಗಿ ನಮ್ಮಲ್ಲಿ ಅನೇಕ ಆಚರಣೆಗಳು ಆಹಾರದ ಹಂಚಿಕೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ. ಹುಟ್ಟಿದ ಹಬ್ಬದಿಂದ ಮೊದಲಾಗಿ ಮದುವೆ, ಮುಂಜಿ ಮುಂತಾಗಿ ಸಾವಿನ ತಿಥಿಯವರೆಗೂ, ಆಹಾರದ ಹಂಚಿಕೆಯು ಪರಂಪರೆಯಲ್ಲಿ ಹರಿದು ಬಂದಿದೆ. ಇದಕ್ಕೆಂದೂ ಲಿಖಿತ ನಿಯಮಗಳಿಲ್ಲ, ಇವು ಅನುಭವದಿಂದ ಸೈದ್ಧಾಂತಿಕವಾಗಿ ವಿಕಾಸಗೊಂಡಿವೆ. ಬಿಕ್ಷೆಯೂ ಕೂಡ ಒಂದು ಬಗೆಯಲ್ಲಿ ಆಹಾರದ ಹುಡುಕಾಟವಾಗಿದೆ. ಇಲ್ಲಿಯೂ ಬೇಡುವ ಪರಂಪರೆಯು ಅದನ್ನು ಒಪ್ಪುವ ಸಂಸ್ಕೃತಿಕ ಮನಸ್ಸುಗಳಿಂದ ಒಳಗೊಂಡಿದೆ.

ಬಹು ಮುಖ್ಯವಾಗಿ ಹನ್ನೆರಡನೇ ಶತಮಾನದ ದಾಸೋಹ ಪರಂಪರೆಯು ಆಹಾರ ಸಂಸ್ಕೃತಿಯಲ್ಲಿ ಅಚ್ಚರಿ ಮೂಡಿಸುವಂತಹದ್ದು. ಅಂತೆಯೇ ಇಂದು ಅನೇಕ ಮಠಗಳಲ್ಲಿನ ಆಹಾರ ಭದ್ರತೆಯ ಬೆಳವಣಿಗೆಗಳು ಸಾಮಾಜಿಕ ಅಚ್ಚರಿಗಳಲ್ಲಿ ಕೆಲವು. ಊಟಕ್ಕೆಂದೇ ಅನೇಕ ದೇವಾಲಯಗಳಲ್ಲಿ ಚಾರಿಟಿಗಳು ಬೆಳೆದಿರುವುದನ್ನು ಕಾಣಬಹುದಾಗಿದೆ. ಊಟದ ಹಂಚಿಕೆಯ ಮೂಲ ನಮ್ಮ ಪರಂಪರೆಯು ಹಸಿವನ್ನು ಗೌರವಿಸಿದ ಪರಿಯೆಂದೇ ಪರಿಭಾವಿಸಲಾಗಿದೆ. ಹಸಿದ ಮನಸ್ಸನ್ನು ಪಶ್ಚಾತ್ತಾಪಕ್ಕಾಗಿ ಬಳಸಿದ ಗಾಂಧೀಜಿಯವರು, ಅದನ್ನೇ ಸ್ವಾತಂತ್ರದ ಹೋರಾಟದ ಅಸ್ತ್ರವನ್ನಾಗಿ ಬಳಸಿ ಯಶಸ್ವಿಯಾದವರು.

ಬೇಂದ್ರೆಯವರು ಒಂದೆಡೆ ಮಾತಾಡುತ್ತಾ "ಅಯ್ಯೋ ಶಿವನೇ ಎಂಥ ಕೆಲಸಮಾಡಿಬಿಟ್ಟೆ, ಹಸಿವನ್ನು ಹೊಟ್ಟೆಯಲ್ಲಿಟ್ಟು, ಅನ್ನವನ್ನು ಹೊರಗೆ ಇಟ್ಟೆಯಲ್ಲಾ! ಹಸಿವನ್ನು ಹೊರಗಿಟ್ಟು ಅನ್ನವನ್ನು

ಹೊಟ್ಟೆಯಲ್ಲಿಡಬಾರದಿತ್ತೇ" ಎಂದು ಉದ್ಗರಿಸಿದ್ದಾರೆ. ಬೇಂದ್ರೆಯಂತಹ ದಾರ್ಶನಿಕ ಕವಿಗಳು ಹಸಿವನ್ನು ಗ್ರಹಿಸಿದ ಮಾದರಿ.

ಹಸಿವು ಸಾಮಾನ್ಯವಾದ್ದು, ನಿರಂತರವಾದದ್ದು ಹಾಗೂ ಅವಶ್ಯಕವಾಗಿ ನಿವಾರಿಸಲೇಬೇಕಾದದ್ದು. ಹಾಗಾಗಿ ಹಸಿವಿನ ನಿವಾರಣೋಪಾಯದ ಮಾರ್ಗಸೂಚನೆಗಳು ಆಹಾರ ಭದ್ರತೆಯ ಒಳಗೆ ಬೆಳಕು ಕಂಡಿವೆ. ಈ ಹಿನ್ನಲೆಯಲ್ಲಿ ಅನೇಕ ವಿಧಾನಗಳು ಮಾನವರ ಬದುಕಿನ ಲೋಕದೃಷ್ಟಿಯಲ್ಲಿ ಅರಳಿವೆ. ಇವು ಸಾಮೂಹಿಕ ಭೋಜನ ಸನ್ನಿವೇಶಗಳಾಗಿ ಹಲವು ಔತಣಕೂಟಗಳ ಮೂಲಕ ನೆಡೆಯುತ್ತಿದ್ದರೆ ಅಶ್ಚರ್ಯವಿಲ್ಲ. ಅಗತ್ಯ ಸಂದರ್ಭಗಳಲ್ಲಿ ಊಟದ ಸೇವೆಯನ್ನು ಎಲ್ಲಾ ಧಾರಾಳ ಮನಸ್ಸುಗಳು ಒಪ್ಪಿವೆ. ಈ ದಿಶೆಯಲ್ಲಿ ಉಚಿತ ಊಟದ ವ್ಯವಸ್ಥೆಗಳು ಅಗತ್ಯ ಸಂದರ್ಭಗಳಿಗೆ ತಕ್ಕಂತೆ ನಡೆಸಿಕೊಡುವ ಅನೇಕ ಸಂಸ್ಥೆ ಮತ್ತು ವ್ಯವಸ್ಥೆಗಳನ್ನು ಕಾಣುತ್ತೇವೆ. ಹಲವಾರು ಸಮಾಜಮುಖಿ ಮಠಗಳು, ದೇವಾಲಯಗಳು, ಸಂಘಸಂಸ್ಥೆಗಳು, ಉದ್ದಿಮೆಗಳು ಹಾಗೂ ಕೆಲವು ವ್ಯಕ್ತಿಗಳು ಈ ಬಗೆಯ ಲೋಕೋಪಯೋಗಿ ಕಾರ್ಯದಲ್ಲಿ ನಿರತವಾಗಿವೆ.

ಈ ವೈವಿಧ್ಯಮಯ ಸೇವಾ ಉದಾಹರಣೆಗಳನ್ನು ಬಹುಷಃ ಎಲ್ಲ ಪ್ರದೇಶಗಳಲ್ಲೂ ಕಾಣಬಹುದು ಈ ನಿಟ್ಟಿನಲ್ಲಿ ನಮ್ಮ ರಾಜ್ಯದಲ್ಲಿ ನಡೆದುಕೊಂಡು ಬಂದಿರುವ ಅನೇಕ ನಿದರ್ಶನಗಳು ಇಂತಿವೆ. ಶಿಕ್ಷಣ, ದಾಸೋಹ, ಸಾಮೂಹಿಕ ಪಂಕ್ತಿ ಭೋಜನಗಳು ಮುಂತಾದವುಗಳು.

### ❖ ಆಹಾರ ಭದ್ರತೆಯ ಲೋಕದೃಷ್ಟಿ

ನಾಗರೀಕ ಜೀವನದ ವಿಕಾಸದ ಹಾದಿಯಲ್ಲಿ ಆರಂಭಿಕ ನೆಲೆಯು ಸಾಕಷ್ಟು ಆಹಾರ ಸಮೃದ್ಧ ಅಥವಾ ಸಾಧ್ಯತೆಯ ಸ್ಥಳಗಳಿಂದ ನಾಂದಿ ಹಾಡಿವೆ. ನೆಲೆಕಂಡ ಒಂದು ಸಮುದಾಯವು ತನ್ನೆಲ್ಲ ಸದಸ್ಯರಿಗೂ ಎಲ್ಲ ರೀತಿಯ ಭದ್ರತೆ ಇರುವಂತೆ ನೋಡಿಕೊಂಡಿದೆ. ಒಂದು ಸಮಾಜದ ಸಮುದಾಯ ನೆಮ್ಮದಿಯನ್ನು ಅರಸುವ ಮೂಲ ಪ್ರಯತ್ನವೆಂದರೆ ಎಲ್ಲರಿಗೂ ಎಲ್ಲ ಕಾಲಕ್ಕೂ ಸಾಕಷ್ಟು ಆಹಾರ ದೊರೆಯುವುದೇ ಆಗಿದೆ. ಸಮಾಜ ವಿಶಾಲವಾಗುತ್ತಾ ಬೆಳೆದಂತೆ ಹಲವು ಸಮುದಾಯಗಳ ಮುಖಾಮುಖಿಯಾಗಿದೆ. ಮೂಲ ನೆಲೆಗಳಲ್ಲಿ ಆದಿವಾಸಿಗಳು ತಮ್ಮ ಭೌಗೋಳಿಕ ಮಿತಿಯಲ್ಲಿಯೇ ವೈವಿಧ್ಯಮಯ ಪಂಗಡಗಳ ಮುಖಾಮುಖಿಯನ್ನು ಒಳಗೊಂಡಿದೆ. ಮುಂದೆ ಅರಿವಿನ ಪರಿಧಿಯು ವಿಶಾಲವಾದಂತೆ ಕುತೂಹಲಗಳು ಇಡೀ ನೆಲದ ಉದ್ದಗಲಕ್ಕೂ ಹಂಚಿವೆ. ಈ ಭೌಗೋಳಿಕ ತಿಳಿವು ಸಾಹಸಮಯ ಆಸಕ್ತಿಯಿಂದ ಬೆಳೆದು ಭೂ ಜಗತ್ತಿನ ಅರಿವನ್ನು ಸಾಕಷ್ಟು ವಿಸ್ತರಿಸಿದೆ. ಅಲೆಮಾರಿ ಮಾನವ ನೆಲೆಕಂಡು ಭೌಗೋಳಿಕ ಹರಹನ್ನು ವಿಸ್ತರಿಸುತ್ತಾ ತಿಳಿವಿನ ಪ್ರಜ್ಞೆಯನ್ನು ಗಟ್ಟಿಗೊಳಿಸುತ್ತ ಬಂದಿದೆ. ನೆಲದ ಮೇಲಿನ ನಡಿಗೆಯಿಂದ ಆರಂಭದ ಯಾನ ಇಂದು ಭೂಮಿಯಿಂದ ಎತ್ತರಕ್ಕೆ ಹಾರಿ ಅಂತರಿಕ್ಷದಲ್ಲಿ ಕಣ್ಣುಗಳನ್ನಿಟ್ಟು ನಿರಂತರವಾಗಿ ಭೂಮಿಯ ಚಲನೆಯನ್ನು ಇಂಚಿಂಚೂ ಗಮನಿಸುವಷ್ಟು ಮಟ್ಟಿಗೆ ಸುಧೀರ್ಘವಾಗಿದೆ.

ಈ ಇಡೀ ಕುತೂಹಲವು ನಮ್ಮ ನೆಲೆಯನ್ನು ನಮಗಾಗಿ ನಮ್ಮೆಲ್ಲರ ಒಳಿತಿಗಾಗಿ ನೆಮ್ಮದಿಯ ತಾಣವಾಗಿಸಲು ಮತ್ತಷ್ಟು ಇನ್ನಷ್ಟು ಹೆಚ್ಚಾಗಿ ಅರ್ಥೈಸಿಕೊಳ್ಳುವ ಕುತೂಹಲದಿಂದ ಬೆಳೆಯುತ್ತಲೇ ಇದೆ.

ಭೂಮಿಯ ಮೇಲಿನ ಮೂಲವಾಸಿ ಸಮುದಾಯಗಳು ತಮ್ಮ ವೈವಿಧ್ಯಮಯ ಸಂಸ್ಕೃತಿಯನ್ನು ಒಂದನ್ನೊಂದು ಮುಖಾಮುಖಿಯಾಗಿ ಹಲವು ಸಂಸ್ಕೃತಿಯ ಮಿಶ್ರಣದ ಸಮುದಾಯಗಳಾಗಿ ಬೆಳೆದಿವೆ. ಇಂದು ಜಾಗತೀಕ ಏಕತಾನನದ ಕಡೆಗೆ ಬೆಳೆಯುತ್ತಿರುವ ಸಂದರ್ಭದಲ್ಲಿ ಸಹಸ್ರಾರು ಸಮುದಾಯಗಳು ತಮ್ಮ ಸಂಸ್ಕೃತಿಯನ್ನು ಉಳಿಸಿಕೊಂಡೇ ಇಡೀ ಜಗತ್ತಿನ ಭಾಗವಾಗಿರುವಂತಹ ಪ್ರಯತ್ನವನ್ನು ಮಾಡುವಲ್ಲಿ ನಿರತವಾಗಿವೆ. ಈ ಸಮುದಾಯಗಳ ಸಾಂಸ್ಕೃತಿಕ ಉಳಿವಿನ ಇಚ್ಛೆಯು ಜಗತ್ತಿನ ಎಲ್ಲ ಅರಿವಿನ ಸಾಧ್ಯತೆಗಳನ್ನು ಬಳಸುವುದರಿಂದ ತಮ್ಮೆಲ್ಲ ನೆಮ್ಮದಿಯನ್ನು ನಿರಂತರವಾಗಿರುವಂತೆ ನೋಡುವ ಹಂಬಲದಲ್ಲಿವೆ.

ಈ ಪ್ರಯತ್ನಗಳು ರಾಷ್ಟ್ರ-ರಾಷ್ಟ್ರಗಳ ನಡುವಿನ ಒಪ್ಪಂದಗಳಿಗೆ ಅಡಿಪಾಯ ಹಾಕಿ ಜಗತ್ತಿನ ಎಲ್ಲ ಸದಸ್ಯರಿಗೂ ಹಸಿವನ್ನು ನಿರಂತರವಾಗಿ ನಿಭಾಯಿಸುವ ಉಪಾಯದ ಹುಡುಕಾಟದಲ್ಲಿ ಇವೆ. ಆಹಾರ ಒಂದು ಮೂಲಭೂತ ದೈನಂದಿನ ಅವಶ್ಯಕತೆ. ಈ ತತ್‌ಕ್ಷಣದ ಅವಶ್ಯಕತೆಯ ಹುಡುಕಾಟ ತೀವ್ರಗತಿಯದ್ದು ಹಾಗೂ ನೈಸರ್ಗಿಕವಾಗಿಯೂ ಈ ಹುಡುಕಾಟಕ್ಕೆ / ಯೋಜನೆಗೆ ಪೂರಕ ಅಂಶಗಳು ಬೆಳೆಯುತ್ತಲೇ ಬಂದಿವೆ.

ವನ್ಯ ಜೀವನ ಕ್ರಮದಲ್ಲೂ ಕೂಡ ಆಹಾರದ ಹಚಿಚಿಕೆ, ದೊರಕುವಿಕೆ ಮತ್ತು ಅದನ್ನು ಬಳಸುವ ಹಕ್ಕು ಇವುಗಳನ್ನೆಲ್ಲ ಒಳಗೊಂಡ ಒಂದು ಆಯಾಮದ ಪರಿಸ್ಥಿತಿಗೂ ಅವಕಾಶ ಇದೆ. ಹಾಗಾಗಿಯೇ ವೈವಿಧ್ಯಮಯ ಜೀವ ಸಂಕುಲಗಳು ಒಟ್ಟಾಗಿಯೇ ಜೀವನ ನಡೆಸಲು ಸಾಧ್ಯವಾಗಿದೆ. ಈ ಒಟ್ಟಾರೆ ಜೀವನ ಸಾಧ್ಯತೆಯ ಆಶಯದ ಬೇರು ನಾಗರೀಕ ಸಮಾಜದಲ್ಲೂ ಚಿಗುರೊಡೆದು ಪಕ್ವತೆಯ ಎಡೆಗೆ ಸಾಗತೊಡಗಿದೆ.

ಈ ತರಹದ ಸೂಕ್ಷ್ಮ ಗ್ರಹಿಕೆಗಳು ವಸ್ತು ನಿಷ್ಠವಾಗಿ ಬಳಕೆಯ ಸಾಧ್ಯತೆಗಳನ್ನು ಕಂಡುಕೊಂಡು ಸ್ವಲ್ಪ ಮಟ್ಟಿಗಾದರೂ ಉತ್ತಮ ಅವಕಾಶಗಳನ್ನು ಕಲ್ಪಿಸಿದೆ. ಈ ಬಗೆಯ ಒಂದು ಸಾಮಾಜಿಕ ಪ್ರಜ್ಞೆ ಇಡೀ ಸಮುದಾಯವನ್ನು, ಸಮುದಾಯದಲ್ಲಿ ಕಾಪಾಡಿಕೊಂಡು ಬರುವಂತೆ ಪ್ರೇರೇಪಣೆಗಳನ್ನು ಒದಗಿಸಿದೆ. ಇಂತಹ ಉತ್ತಮ ಪ್ರೇರೇಪಣೆಗಳು ಉತ್ತಮ ಸಮಾಜ ಸ್ವಾಸ್ಥ್ಯದ ಕುರುಹುಗಳಾಗಿ ಅನುಕರಣೆಗೆ ಬೆಲೆ ತಂದಿವೆ. ಇದು ಅನುಸರಿಸುವರಲ್ಲಿ ಉತ್ತೇಜನವನ್ನೂ, ನೆಮ್ಮದಿಯನ್ನೂ ತಂದುಕೊಟ್ಟಿರುವ ಸಾಧ್ಯತೆಗಳಿವೆ. ಬಹಳ ಮುಖ್ಯವಾಗಿ ಇಂತಹ ಒಂದು ಸನ್ನಿವೇಶಗಳು, ನಂಬಿಕೆಗಳು ಹಲವಾರು ಆಗುವಿಕೆಯ ಸಾಧ್ಯತೆಗಳು ಸೃಜಿಸಿ ಅಲ್ಲಲ್ಲಿ ರೂಢಿಯಲ್ಲಿರುವುದನ್ನು ಕಾಣುತ್ತಿದ್ದೇವೆ. ಈ ರೂಢಿಗಳು ವೈವಿಧ್ಯಮಯವಾಗಿ ಕಾರ್ಯನಿರತವಾಗಿವೆ.

**ಸಮಕಾಲೀನ ಆಹಾರ ಭದ್ರತೆಯ ಅಧ್ಯಯನ ಹಾಗೂ ವಿಶ್ಲೇಷಣೆ**

ಸಹಸ್ರಮಾನದ ಗುರಿಯ ಪ್ರಕಾರ 2015ರ ವೇಳೆಗೆ ಹಸಿವಿನಿಂದ ಬಳಲುತ್ತಿರುವವರ ಸಂಖ್ಯೆಯನ್ನು ಈಗ ಇರುವ ಮಟ್ಟದಿಂದ ಅರ್ಧಕ್ಕೆ ಇಳಿಸಬೇಕು. ವಿಶ್ವದಲ್ಲಿ 96.3 ಕೋಟಿ ಜನ ಆಹಾರದ ಅಭಾವವನ್ನು ಎದುರಿಸುತ್ತಿದ್ದಾರೆ. ಈ ಪೈಕಿ ಪ್ರತಿ ನಾಲ್ವರಲ್ಲಿ ಒಬ್ಬ ಭಾರತೀಯ! ಅಂದರೆ

ದೇಶದಲ್ಲಿ ಶೇಕಡ 21 ಮಂದಿ ಅಪೌಷ್ಟಿಕತೆಯಿಂದ ಬಳುತ್ತಿದ್ದಾರೆ ಎನ್ನುತ್ತದೆ ವಿಶ್ವ ಸಂಸ್ಥೆಯ ವರದಿ. ಇದಕ್ಕೆ ಪರಿಹಾರೋಪಾಯವಾಗಿ ಪ್ರಮುಖವಾಗಿ ಎರಡು ವಿಧದ ಕಾರ್ಯತಂತ್ರ ಅನುಸರಿಸಬೇಕು ಅಂದರೆ ಆಹಾರ ಉತ್ಪಾದನೆ/ಪೂರೈಕೆಯನ್ನು ಹೆಚ್ಚಿಸುವುದು. ಜೊತೆಗೆ ಹಸಿವಿನಿಂದ ಬಳಲುತ್ತಿರುವವರಿಗೆ ಆಹಾರ ಕೈಗೆಟುಕುವಂತೆ ನೋಡಿಕೊಳ್ಳಬೇಕು.

ಭಾರತ ಈ ನಿಟ್ಟಿನಲ್ಲಿ ಅನೇಕ ಯೋಜನೆಗಳನ್ನು ಹಮ್ಮಿಕೊಳ್ಳತ್ತಾ ಬಂದಿದೆ. ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಕೃಷಿ ಸಂಶೋಧನೆಗಳಿಗೆ ಒತ್ತು ನೀಡಿರುವುದರ ಫಲವಾಗಿ ಅಧಿಕ ಇಳುವರಿ ನೀಡುವ ತಳಿಗಳ ಅಭಿವೃದ್ಧಿ, ಸುಧಾರಿತ ಬೇಸಾಯ ಕ್ರಮ, ನೀರಾವರಿ ಯೋಜನೆ, ಸಮಗ್ರ ಪೋಷಕಾಂಶಗಳ ನಿರ್ವಹಣೆ, ರಾಸಾಯನಿಕ ಗೊಬ್ಬರಗಳ ಬಳಕೆ ಮುಂತಾದವುಗಳು ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ರೂಪಿಸಿದ ಕಾರ್ಯ ಯೋಜನೆಗಳಾಗಿವೆ. ಉತ್ಪಾದನೆಯ ಪ್ರಾದೇಶಿಕ ಅಸಮತೋಲನ ನಿವಾರಣೆಗಾಗಿ ಸಾರ್ವಜನಿಕ ಆಹಾರ ಸಂಗ್ರಹಣೆ, ಸಂಸ್ಕರಣೆ ಮತ್ತು ಹಂಚಿಕೆಗೆ ಯೋಜನೆಗಳು ಜಾರಿಗೆ ಬಂದವು. ಕೃಷಿಕರಿಗೆ ಹೊಸ ಹೊಸ ತಂತ್ರಜ್ಞಾನಗಳ ಪರಿಚಯಕ್ಕಾಗಿ ವಿಸ್ತರಣಾ ಕಾರ್ಯಕ್ರಮಗಳ ಅನುಷ್ಠಾನ ಕೃಷಿ ಇಲಾಖೆಗಳ ಮೂಲಕ ತರಬೇತಿ ಮತ್ತು ಸೌಲಭ್ಯಗಳು ಅಲ್ಲದೆ ಉತ್ಪಾದಿಸಿದ ಪದಾರ್ಥಗಳ ಕೊಂಡುಕೊಳ್ಳುವ ಸಾಮರ್ಥ್ಯ ಹೆಚ್ಚಿಸಲು ಉದ್ಯೋಗಾವಕಾಶ ನೀಡುವ ಯೋಜನೆಗಳು ಹೀಗೆ ಆಹಾರ ಅಭದ್ರತೆ ತೊಡೆದು ಹಾಕಲು ಹತ್ತಾರು ಯೋಜನೆಗಳನ್ನು ರೂಪಿಸಿದ್ದರೂ ಈ ಯೋಜನೆಗಳು ಸಂಪೂರ್ಣವಾಗಿ ಯಶಸ್ವಿಯಾಗದೆ ಆಹಾರ ಅಭದ್ರತೆ ತೊಡೆದು ಹಾಕುವಲ್ಲಿ ವಿಫಲವಾಗುತ್ತಾ ಸಾಗಿವೆ. ಈ ನಿಟ್ಟಿನಲ್ಲಿ ಇದುವರೆಗೂ ನೆಡೆದು ಬಂದ ಪಂಚವಾರ್ಷಿಕ ಯೋಜನೆಗಳಲ್ಲಿ ಆಹಾರ ಭದ್ರತೆಯ ಯೋಜನೆಗಳ ಆಕರಗಳ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

**ಅಧ್ಯಯನದ ವಿಶ್ಲೇಷಣೆ**

ಅಧ್ಯಯನ ಮಾರ್ಗದರ್ಶಿಯ ನೆರವಿನಿಂದ ವಸ್ತುನಿಷ್ಠ ಮಾಹಿತಿಯನ್ನು ಹಾಗೂ ಪ್ರಾಥಮಿಕ ವಿವರಗಳನ್ನೂ ದಾಖಲಿಸಿ ಪುನರ್‌ವಿಮರ್ಶೆಗೆ ಒಳಪಡಿಸಿ ಪ್ರಾಮಾಣೀಕರಿಸಲಾಗಿದೆ. ಪ್ರಮಾಣೀಕರಿಸಬಹುದಾದ ಅಂಶಗಳನ್ನು ಸಂಖ್ಯಾಶಾಸ್ತ್ರದ ವಿಧಾನಗಳ ಮೂಲಕ ವಿಶ್ಲೇಷಿಸಲಾಗಿದೆ. ಪ್ರಮಾಣೀಕರಿಸಲಾಗದ ಅಂಶಗಳನ್ನು ಪರಿಕಲ್ಪನೆಗಳ ರೂಪಿಸುವುದರ ಮೂಲಕ ಹಾಗೂ ತರ್ಕಬದ್ಧತೆಯ ಸಾಧ್ಯತೆಗಳ ವಿವರಗಳಿಂದ ವಿಶ್ಲೇಷಿಸಲಾಗಿದೆ. ಪರಿಕಲ್ಪನೆಗಳ ಭೂಮಿಕೆಯನ್ನು ಪೂರಕ ಸಾಹಿತ್ಯದ ನೆರವಿನಿಂದಲೂ ಸಿದ್ದಪಡಿಸಲಾಗಿದೆ. ಉದ್ದೇಶಗಳ ಹಿನ್ನೆಲೆಯಲ್ಲಿ ಸಾಧ್ಯತೆಗಳ ನಿಷ್ಕರ್ಷೆಯಿಂದ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಬುಡಕಟ್ಟು ಸಮುದಾಯದಲ್ಲಿ ಆಹಾರ ಭದ್ರತೆಯ ಪ್ರಕ್ರಿಯೆಗಳ ಚಲನಶೀಲತೆಯನ್ನು ಅರ್ಥೈಸುವುದು. ಸಮಕಾಲೀನ ಆಹಾರ ಭದ್ರತೆಯ ವಿಶ್ಲೇಷಣೆ, ವಿಕಾಸದಲ್ಲಿ ಕಾಣಬರುವ ಆಹಾರ ಭದ್ರತೆಯ ಆಯಾಮಗಳು, ಮತ್ತು ಬುಡಕಟ್ಟು ಸಮುದಾಯದಲ್ಲಿ ಆಹಾರ ಭದ್ರತೆ ವಿಧಾನಗಳನ್ನು ಸಮೀಕರಿಸಿ ಪರಿಕಲ್ಪಿಸಿದೆ.

**ಅಧ್ಯಯನದ ನಿರೀಕ್ಷೆ**

ನಿಸರ್ಗದ ಆಹಾರ ಭದ್ರತೆಯ ಪರಿಕಲ್ಪನೆಗೂ ನಾಗರೀಕ ಸಮಾಜ ರೂಪಿಸಿರುವಂತಹ ಭದ್ರತೆಗೂ ಸಮೀಕರಿಸಿ ಆ ಮೂಲಕ ಒಂದು ಪರಿಪೂರ್ಣ ಭರಿತ ಸಾಧ್ಯತೆ ದೊರೆಯಬಹುದಾದ ನಿರೀಕ್ಷೆ. ಮನುಷ್ಯ ಸಮಾಜ ಕೊಡಮಾಡಿದ ಜೀವನೋಪಾಯದ ಆಗರಗಳ ಮೂಲಕ ಬುಡಕಟ್ಟು ಸಮುದಾಯಗಳಿಗೆ ಆಹಾರ ಭದ್ರತೆಯನ್ನು ಪುಷ್ಟೀಕರಿಸುವುದು. ಬುಡಕಟ್ಟು ಸಮುದಾಯಗಳಲ್ಲಿನ ಪರಿಸರ ಪೂರಕ ಆಹಾರ ಭದ್ರತೆ ಹಾಗೂ ಆಯ್ಕೆ ಕ್ರಮಗಳ – ಪದ್ಧತಿಗಳನ್ನು ನಾಗರೀಕ ಸಮಸ್ಯೆಗಳಿಗೆ ಪರಸ್ಪರ ವಿನಿಮಯ ಮಾಡಿಕೊಳ್ಳುವುದು ಹಾಗೆಯೇ ನಾಗರೀಕ ಸಮಾಜದ ಉಪಯೋಗಕರ ಪದ್ದತಿಗಳನ್ನು ಮತ್ತು ಆಹಾರ ಭದ್ರತೆಗಾಗಿ ಜೀವನೋಪಾಯದ ವಿಧಾನಗಳನ್ನು ತಿಳಿಪಡಿಸುವುದು.

ಹುಟ್ಟಿಸಿದ ದೇವರು ಹುಲ್ಲು ಮೇಯಿಸದೆ ಇರುವನೆ? ಎಂಬ ಗಾದೆ ನುಡಿಯಂತೆ ನಿಸರ್ಗವು ತಾನು ಸೃಷ್ಟಿಸಿದ ಜೀವಿಗೆ ತನ್ನದೆ ಆದ ರೀತಿಯಲ್ಲಿ ಆಹಾರ ಭದ್ರತೆಯನ್ನು ಒದಗಿಸುತ್ತಾ ಬಂದಿರುವುದನ್ನು ನಮ್ಮ ಸುತ್ತಮುತ್ತಲಿನ ಅನೇಕ ಜೀವ ಜಗತ್ತಿನಲ್ಲಿ ಕಾಣಬಹುದಾಗಿದೆ. ಉದಾಹರಣೆಗೆ ಮಾನವ ನಿರ್ಮಿತ ಸಮಾಜದಲ್ಲಿ ಇಂದು ನಾವು ಅನುಸರಿಸುತ್ತಿರುವ ವಿಧಾನಗಳನ್ನು ಸಸ್ಯ, ಕೀಟ ಮತ್ತು ಪ್ರಾಣಿ ಜಗತ್ತಿನಲ್ಲಿ ಕಾಣಬಹುದು. ಜೇನು, ಇರುವೆ ಆಹಾರ ಸಂಗ್ರಹಿಸುವ ವಿಧಾನ, ಗೆದ್ದಲು ಮನೆಕಟ್ಟುವ ವಿಧಾನ ಕಾಗೆ ಕೂಗಿಲೆ ಮರಿಯನ್ನು ಬೆಳೆಸುವ ವಿಧಾನ, ಮರಗಳು ತಮ್ಮ ಪೀಳಿಗೆಯನ್ನು ಮುಂದುವರಿಸಿಕೊಂಡು ಹೋಗಲು ಸಾವಿರಾರು ಬೀಜಗಳನ್ನು ಉತ್ಪಾದಿಸಿ ಜೋಪಾನವಾಗಿ ಕಾಪಾಡಿ ಬೆಳೆಸುವ ವಿಧಾನ. ಡಾರ್ವಿನ್ನರ ವಿಕಾಸದ ಥಿಯರಿ ಉಳುವಿಗಾಗಿ ಹೋರಾಟ, ಪರಿಸರದಲ್ಲಿ ಪ್ರಾಣಿ ಪಕ್ಷಿಗಳ ಸಮತೋಲನ ಕಾಪಾಡುವಲ್ಲಿ ಒಂದು ಪ್ರಾಣಿ ಇನ್ನೊಂದು ಪ್ರಾಣಿಯನ್ನು ತಿಂದು ಬದುಕುವ ಹೋರಾಟ, ಇಂತಹ ಅನೇಕ ಕಾರ್ಯಗಳು ವಿಕಾಸದಲ್ಲಿ ಬೆಳವಣಿಗೆಯಾಗುತ್ತಿದಂತೆ ಅವುಗಳಿಂದ ಕಲಿಕೆಯು ವಿಕಾಸಗೊಳ್ಳತ್ತಾ ವರ್ಗಾವಣೆಯಾಗಿ ಬಂದಿದೆ. ಹಾಗೆಯೇ ಕೂಡ ನಾವು ಅನುಸರಿಸುತ್ತಿರುವ ವಿಧಾನಗಳು ನಿಸರ್ಗದ ಅನುಕರಣೆಯಂತಿದೆ.

ಈ ಕುರಿತಾಗಿ ನಿಸರ್ಗದಲ್ಲಿ ನಡೆಯುತ್ತಿರುವ ನಿಯಮಗಳನ್ನು ಅಭ್ಯಾಸಿಸಿ ಎಲ್ಲಾ ಪ್ರಧಾನ ಉದ್ದೇಶಗಳಲ್ಲಿ ಸಮೀಕರಿಸಿ ವಾಸ್ತವದ ಬುಡಕಟ್ಟು ಸಮಾಜದ ಹಿನ್ನೆಲೆಯಿಂದ ಹಾಗೂ ನಾಗರೀಕ ಸಮಾಜದ ಕಾರ್ಯಯೋಜನೆಗಳ ಚೌಕಟ್ಟಿನಲ್ಲಿ ಅರ್ಥಮಾಡಿಕೊಳ್ಳುವುದಾಗಿದೆ. ಅರಣ್ಯವಾಸಿ ಬುಡಕಟ್ಟುಗಳ ಸಾಮಾಜಿಕ ಪರಿಸರವು, ಭಿನ್ನವಾದ ನಿರಂತರವಾದ ತೊಡಕುಗಳನ್ನು ಹೊಂದಿದ್ದು, ಮುಖ್ಯವಾಹಿನಿಗೆ ತರುತ್ತಿರುವ ಆಶಯದಲ್ಲಿ ಪರಿಸ್ಥಿತಿಯ ಅವಲೋಕನವೂ ಇಲ್ಲಿನ ಸಾಧ್ಯತೆಯ ನಿರೀಕ್ಷೆಯಾಗಿದೆ. ಆಹಾರ ಭದ್ರತೆಯ ಸಾರ್ವತ್ರಿಕ ದೃಷ್ಟಿಕೋನದಲ್ಲಿನ ವಿವಿಧ ಆಯಾಮಗಳ ದಾರ್ಶನಿಕ ವಿಶ್ಲೇಷಣೆಗೆ ವಸ್ತು ಸ್ಥಿತಿಯ ವೈಜ್ಞಾನಿಕ ಪರಿಕರಗಳನ್ನು ಮೂಲ ಸಾಮಗ್ರಿಯಗಿಟ್ಟಕೊಂಡು ಅರ್ಥೈಸುವ ಇಲ್ಲಿನ ನಿಲುವುಗಳ ಅಧ್ಯಯನವು ಅಂತಹ ಮಾದರಿಗಳ ನೆರವನ್ನೂ ಪಡೆದು ನಡೆಸಲಾಗಿದೆ.

# 2. ಪೂರಕ ಸಾಹಿತ್ಯಾವಲೋಕನ

ಆಹಾರ ಭದ್ರತೆಯ ಅಧ್ಯಯನಕ್ಕೆ ಹಿನ್ನೆಲೆಯಾಗಿ ವಿವಿಧ ಆಯಾಮಗಳಲ್ಲಿ ವಿವಿಧ ಕ್ಷೇತ್ರಗಳಲ್ಲಿ ಅಧ್ಯಯನ ಹಾಗೂ ಸಂಶೋಧನಾ ಕಾರ್ಯಗಳು ನಡೆದಿವೆ. ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಮತ್ತು ಭದ್ರತೆ ಕುರಿತಂತೆ ಕನ್ನಡ ಮತ್ತು ಇಂಗ್ಲೀಷ್ ಸಾಹಿತ್ಯದ ಅವಲೋಕನವನ್ನು ಮಾಡಲಾಗಿದೆ. ಲಭಿಸಿದ ಸಾಹಿತ್ಯವನ್ನು ಅಧ್ಯಯನದ ಉದ್ದೇಶಗಳಿಗನುಗುಣವಾಗಿ ಈ ಕೆಳಗಿನಂತೆ ವಿಂಗಡಿಸಿ ಮಂಡಿಸಲಾಗಿದೆ.

**2.1 ಮಾನವ ಸಮುದಾಯ ಮತ್ತು ಆಹಾರ ಭದ್ರತೆ**

2.1.1 ಆಹಾರ ಉತ್ಪಾದನೆ ಮತ್ತು ಲಭ್ಯತೆ

2.1.2 ಆಹಾರ ಹಂಚಿಕೆ

2.1.3 ಆಹಾರ ಸೇವನೆ ಮತ್ತು ಪೌಷ್ಟಿಕ ಸ್ಥಿತಿ

**2.2 ಆಹಾರ ಭದ್ರತೆ ಯೋಜನೆಗಳು**

2.2.1 ಸಾರ್ವಜನಿಕ ಆಹಾರ ವಿತರಣಾ ಯೋಜನೆ

2.2.2 ಸಮಗ್ರ ಶಿಶು ಅಭಿವೃದ್ಧಿ ಯೋಜನೆ

2.2.3 ಮಧ್ಯಾಹ್ನದ ಬಿಸಿಯೂಟ ಯೋಜನೆ

**2.3 ಬುಡಕಟ್ಟು ಸಮುದಾಯಗಳ ಸಾಮಾನ್ಯ ಮಾಹಿತಿ**

2.3.1 ಜನಸಂಖ್ಯೆ ವಿವರಗಳು

2.3.2 ಬುಡಕಟ್ಟು ಸಮುದಾಯಗಳ ವಾಸಸ್ಥಳ

2.3.3 ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ

2.3.4 ಬುಡಕಟ್ಟು ಸಮುದಾಯಗಳ ಜೀವನೋಪಾಯಗಳು

**2.4 ಬುಡಕಟ್ಟು ಸಮುದಾಯ ಹಾಗೂ ಆಹಾರ ಭದ್ರತೆ**

2.4.1 ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ

2.4.2 ಬುಡಕಟ್ಟುಗಳ ವಿಶೇಷ ಸಂದರ್ಭದ ಆಹಾರ ಪದಾರ್ಥಗಳು

2.4.3 ಬುಡಕಟ್ಟುಗಳಲ್ಲಿ ಆಹಾರ ಸಂಗ್ರಹಣೆ ಹಾಗೂ ಸಂಸ್ಕರಣೆ

2.4.4 ಬುಡಕಟ್ಟು ಸಮುದಾಯ ಮತ್ತು ಆರೋಗ್ಯ

## 2.1 ಮಾನವ ಸಮುದಾಯ ಮತ್ತು ಆಹಾರ ಭದ್ರತೆ

### 2.1.1 ಆಹಾರದ ಉತ್ಪಾದನೆ ಮತ್ತು ಲಭ್ಯತೆ

ಆಹಾರದ ಉತ್ಪಾದನೆ ಮತ್ತು ಭದ್ರತೆಯನ್ನು ಸಮೀಕರಣಗೊಳಿಸುವ ಅಥವಾ ಮುಖಾಮುಖಿಯಾಗಿಸಿ ದೇಶದ ಜನರ ಹಸಿವಿನ ಸ್ಥಿತಿಯನ್ನು ವಿಶ್ಲೇಷಿಸುವ ಅಧ್ಯಯನಗಳು ಸಾಕಷ್ಟಿವೆ. ಎಲ್ಲಾ ಅಧ್ಯಯನಗಳು ಸಾಂಸ್ಥಿಕ ಅಧ್ಯಯನಗಳೇ ಆಗಿದ್ದು ಬಹುಪಾಲು ಇಂತಹ ಕಾರ್ಯಯೋಜನೆಗಳ ಪ್ರಗತಿ ಪರಿಶೀಲನಾ ಅಧ್ಯಯನಗಳೇ ಆಗಿವೆ. ಅಂತರ್‌ರಾಷ್ಟ್ರೀಯ ಸಂಸ್ಥೆಗಳಾದಂತಹ ವಿಶ್ವ ಆಹಾರ ಸಂಸ್ಥೆಯಾಗಿರಬಹುದು, ದೇಶದ ಯೋಜನಾ ಸಮಿತಿಗಳೇ ಆಗಿರಬಹುದು. ಅಲ್ಲದೇ, ನ್ಯಾಯಿಕ ಸಂಸ್ಥೆಗಳಾದಿಯಾಗಿ ಈ ಅಧ್ಯಯಗಳನ್ನು ನಡೆಸಿವೆ ಅಥವಾ ಅಧ್ಯಯನಕ್ಕೆ ಕೈ ಜೋಡಿಸಿವೆ. ಆಹಾರ ಸಂಬಂಧಿ ಕಾರ್ಯಯೋಜನೆಗಳಿಗೆ ರಾಷ್ಟ್ರೀಯ-ಅಂತರ್‌ರಾಷ್ಟ್ರೀಯ ನೆರವು ನೀಡಿರುವ ಹಿನ್ನಲೆಯಲ್ಲಿನ ಇವು ಪ್ರಗತಿ ಪರಿಶೀಲನಾ ಅಧ್ಯಯನಗಳಾಗಿ ಇರುವುದರಿಂದ ಈ ವಿಶ್ಲೇಷಣೆಗಳು ದೇಶಿಯ ಹಲವಾರು ಯೋಜನೆಗಳಿಗೆ ತಾತ್ವಿಕ ನೆಲೆಯನ್ನು ಒದಗಿಸುವಲ್ಲಿ ನೆರವಾಗಲಿವೆ. ಈ ದೃಷ್ಟಿಯಲ್ಲಿ ಇಂತಹ ಅಧ್ಯಯನಗಳ ಸಾಹಿತ್ಯಾವಲೋಕನವು ಪರಿಸ್ಥಿತಿಯ ಪರಿಪೂರ್ಣ ವಾಸ್ತವ ಪರಿಚಯದ ಜೊತೆಯಲ್ಲಿ ಅಧ್ಯಯನ ಕ್ರಮ, ಸ್ಥಿತಿ-ಗತಿಗಳನ್ನು ಒದಗಿಸುವುದು.

ಆಹಾರ ಭದ್ರತೆಯು ಉತ್ಪಾದನೆಯ ಹಿನ್ನಲೆಯಲ್ಲಿನ ವಿವಿಧ ಆಯಾಮಗಳನ್ನೊಳಗೊಂಡು ಅರ್ಥೈಸಲು ಇಲ್ಲಿನ ಬಹುಪಾಲು ಅಧ್ಯಯನಗಳು ಯತ್ನಿಸುತ್ತವೆ. ಜತೆಗೆ ಇವು ಒಂದು ಅಂತರ್ ಶಿಸ್ತೀಯ ಮಾನದಂಡಗಳ ಮೂಲಕ ಆಹಾರದ ವಾಸ್ತವತೆಯನ್ನು ಅರಿಯಲು ಸಹಾಯವಾಗಿದೆ. ಬಹಳ ಮುಖ್ಯವಾಗಿ ಆಹಾರದ ಭದ್ರತೆಯ ಪರಿಕಲ್ಪನೆ ಮತ್ತು ಕಾರ್ಯಯೋಜನೆಗಳು ಮಾನವ ಸಂಬಂಧಿ ಹಿನ್ನೆಲೆಯ ಪ್ರಯತ್ನಗಳಾಗಿದ್ದು, ಜನಸಂಖ್ಯೆಯ ಬೆಳವಣಿಗೆಯೊಂದಿಗೆ ಆಹಾರ ಉತ್ಪಾದನಾ ಸಂಬಂಧಗಳನ್ನು ಚರ್ಚಿಸಿವೆ. ನಮ್ಮ ದೇಶಿಯ ಸಂದರ್ಭದಲ್ಲಿ ಸ್ವಾತಂತ್ರೋತ್ತರ ಪ್ರಯತ್ನಗಳು ಪರಿಣಾಮಕಾರಿಯಾಗಿ ದೇಶದ ಅಭಿವೃದ್ಧಿಯ ಹಿನ್ನಲೆಯಲ್ಲಿ ಅಖಂಡವಾಗಿ ಸಾಧ್ಯವಾಗಿಸುವ ನಿದರ್ಶನಗಳು ಕಾಣುತ್ತವೆ. ಇಡೀ ದೇಶದ ಸಂದರ್ಭವನ್ನು ಜನಸಂಖ್ಯೆ ಬೆಳವಣಿಗೆಯೊಂದಿಗೆ ಆಹಾರದ ಉತ್ಪಾದನಾ ಗತಿಯನ್ನು ಸಮೀಕರಿಸಿ ಚಿತ್ರಿಸುವುದನ್ನು ಕಾಣುತ್ತೇವೆ. ಆಹಾರದ ಭದ್ರತೆಯ ಹುಡುಕಾಟ ಯಾವುದೇ ದೇಶದ ಯಾವುದೇ ಅಭಿವೃದ್ಧಿ ಆಶಯದೊಂದಿಗೂ ಸಂಬಂಧ ಕಲ್ಪಿಸಲು ಸಾಧ್ಯವಿದೆ. ಎಲ್ಲ ಆಡಳಿತ ಪ್ರಕಾರದಲ್ಲೂ ಪ್ರತಿ ಪ್ರಜೆಯ ನಿರಂತರ ಹಸಿವನ್ನು ಹಿಂಗಿಸುವ ಉದ್ದೇಶವಿರವುನ್ನು ಕಾಣಬಹುದು.

ಆಹಾರ ಕುರಿತ ಅಧ್ಯಯನಗಳು ಆಹಾರ ಪಡೆಯುವಲ್ಲಿಯ ಹಕ್ಕನ್ನು ಪ್ರತಿಪಾದಿಸುವ ನಿಟ್ಟಿನಲ್ಲಿ ಆಹಾರ ಪದಾರ್ಥಗಳ ಯಥೇಚ್ಛ ಉತ್ಪಾದನೆ ಹಾಗೂ ಅದರ ಮೇಲೆ ಪ್ರಜ್ವಲಿಸುವ ನ್ಯೂನ ಪೋಷಣೆಯ ದ್ವಂದ್ವವನ್ನು ಕಂಡುಕೊಂಡಿವೆ. ಸ್ವಾತಂತ್ರ್ಯ ಪೂರ್ವದಲ್ಲಿನ ಆಹಾರದ ಸಮಸ್ಯೆ ಬರಗಾಲ ಮುಂತಾದವುಗಳ ವಿಶ್ಲೇಷಣೆಗಳು ಲಭ್ಯತೆ, ಹಂಚಿಕೆಯ ಆಚೀಚೆ ಸುಳಿದಾಡುತ್ತವೆ.

ಇತ್ತೀಚಿನ ಆಹಾರದ ಉಬ್ಬರವಿಳಿತಗಳೂ ಸಹ ನಮ್ಮ ಸಾರಿಗೆ ವ್ಯವಸ್ಥೆಯ ಆತಂಕಕಾರಿ ನಿರ್ವಹಣೆಯಿಂದ ವ್ಯತ್ಯಯಗೊಂಡಿದ್ದನ್ನು ವರದಿಗಳು ತಿಳಿಸಿವೆ. ಸ್ವಾತಂತ್ರದ ಮರು ವರ್ಷವೇ ಆಹಾರ ಚೀಲದ 'ಅಕ್ಷಯ' ಸಾಮರ್ಥ್ಯವನ್ನು ಸ್ಥಾಪಿಸುವ ನಿಟ್ಟಿನಲ್ಲಿ ಗಮನಕೊಟ್ಟಿದ್ದನ್ನು ಕಾಣಬಹುದು. ಇದರ ಫಲವಾಗಿಯೇ 50ರ ದಶಕದಲ್ಲಿಯ ಆಹಾರದ ಉತ್ಪಾದನಾ ಬೆಳವಣಿಗೆಯ ಗತಿಯು ಶೇಕಡ ಮೂರರಷ್ಟು ಆಗಿದ್ದು, ಅದು ಜನಸಂಖ್ಯಾ ಹೆಚ್ಚಳದ ಗತಿಯಾದ ಶೇಕಡ ಎರಡಕ್ಕಿಂತ ಹೆಚ್ಚಿದ್ದನ್ನು ಕಾಣುತ್ತೇವೆ. ಮೊದಲ ಹಲವು ಪಂಚವಾರ್ಷಿಕ ಯೋಜನೆಗಳು ನೀರಾವರಿ, ವಿದ್ಯುತ್, ಜಲಾಶಯ ನಿರ್ಮಾಣಗಳತ್ತ ಗಮನ ಹರಿಸಿವೆ. ಆ ಮೂಲಕ ದೇಶದ ಆಹಾರದ ಭದ್ರತೆಗೆ ಬುನಾದಿ ಹಾಕಿರುವುದು ಗಮನಾರ್ಹ. ಮೊದಲ ಈ ಬೆಳವಣಿಗೆಗಳು ಭೂ ಸುಧಾರಣೆ ಮತ್ತು ಬೆಳೆಯುವ ನೆಲದ ವಿಸ್ತೀರ್ಣದ ಹೆಚ್ಚಳದಿಂದ ಸಾಧ್ಯವಾದದ್ದು (ಚಾಂದ, ಕುಮಾರ ಮತ್ತು ಸಿನ್ಹಾ 2003). ಅರವತ್ತರ ದಶಕವು ದೇಶದಲ್ಲಿ ಹಲವಾರು ತಂತ್ರಜ್ಞಾನಗಳ ಮೌಲಿಕ ಜಾರಿಗೆ ಮತ್ತು ಪ್ರಸರಣಕ್ಕೆ ಸಾಧ್ಯವಾಯಿತು. ಆದರೆ ಇದು ಕೆಲವೇ ಸೀಮಿತ ಪ್ರದೇಶಗಳಿಗೆ ಮಿತಿಗೊಂಡಿತ್ತು. ಇದರಿಂದ ಒಟ್ಟಾರೆ ಬೆಳವಣಿಗೆಯ ಗತಿ ಕಡಿಮೆಯಾಗಿತ್ತು. ಉತ್ತಮ ಬೀಜ, ಗೊಬ್ಬರ ಹಾಗೂ ನೀರಾವರಿ ತಾಂತ್ರಿಕತೆಗಳು ಕೃಷಿಯ ಉತ್ಪಾದಕತೆಯನ್ನು ಹೆಚ್ಚಿಸಿ 70ರ ದಶಕ ಅಭಿವೃದ್ಧಿಯನ್ನು ಬೆಳಕಿಗೆ ತಂದವು. ಇದರಿಂದಾಗಿ ಉತ್ಪಾದನೆಯು ಹೆಚ್ಚಿ ನೆಮ್ಮದಿ ಕಂಡಿತು. 1950–51ರ ವಾರ್ಷಿಕ ಉತ್ಪಾದನೆಯು ಸುಮಾರು 50 ದಶಲಕ್ಷ ಟನ್ನುಗಳಾಗಿದ್ದು, 1980–81ರ ವೇಳೆಗೆ 130 ದಶಲಕ್ಷ ಟನ್ನ್ ತಲುಪಿತ್ತು. ಮೂರು ದಶಕಗಳಲ್ಲಿ ಆಹಾರದ ಉತ್ಪಾದನೆಯು ಸುಮಾರು ಎರಡೂವರೆ ಪಟ್ಟು ಹೆಚ್ಚಾಗಿ ಭಾರತದ ಆಹಾರ ಭದ್ರತೆಯು ಮೇಲುನೋಟಕ್ಕಾದರೂ ನಿಟ್ಟುಸಿರು ಬಿಡುವಂತಾಯಿತು. ಇದು 70ರ ದಶಕದ ಪ್ರಮುಖ ಸಾಧನೆ ಎಂಬಂತೆಯೇ ಬಿಂಬಿತವಾಯಿತು. 80ರ ದಶಕದ ಬೆಳವಣಿಗೆಗಳು 70ರ ದಶಕದ ಮುಂದುವರಿಕೆಗಳೇ ಆಗಿ ಆ ದಶಕದ ಲಾಭವನ್ನು ಹಿಗ್ಗಿಸುವ ನಿಟ್ಟಿನಲ್ಲಿ ದುಡಿದವು. ದೇಶದ ಆಹಾರ ಉತ್ಪಾದನಾ ಬೆಳವಣಿಗೆಯು ಶೇಕಡ 3.8ರಷ್ಟು ಮುಟ್ಟಿ ಒಂದು ದಾಖಲೆಯೇ ನಿರ್ಮಾಣವಾಯಿತು.

ಎರಡೂವರೆ ದಶಕದಷ್ಟು ಕಾಲದ ಸಾಧನೆಗಳ ಹಿಗ್ಗಿನ ಉತ್ತುಂಗದಲ್ಲಿದ್ದಾಗಲೇ ದೇಶದ ಆಹಾರ ಪರಿಸ್ಥಿತಿಯು ಆಘಾತಕ್ಕೊಳಗಾಯಿತು. 90ರ ದಶಕದಲ್ಲಿ ಉತ್ಪಾದನೆಯು ಶೇಕಡ 2.72 ಕ್ಕೆ ಕುಸಿಯಿತು (ರಾಧಾಕೃಷ್ಣ, 2003). ಪ್ರತಿಯೊಬ್ಬರಿಗೂ ದೊರಕುವ ಆಹಾರದ ಉತ್ಪನ್ನವು 80ರ ದಶಕದಲ್ಲಿ ಹಿಗ್ಗಿದ್ದು 90ರ ದಶಕದಲ್ಲಿ ಶೇಕಡ 0.28ರಷ್ಟು ಕಡಿಮೆಯಾಯಿತು. ನಂತರ ಮತ್ತೆ ಚೇತರಿಕೆ ಕಂಡುಬಂದು 2001–02 ರಲ್ಲಿ ಸುಮಾರು 200 ದಶಲಕ್ಷ ಟನ್ನುಗಳನ್ನು ತಲುಪಿತು. ಇದು ಕಳೆದ ವರ್ಷಗಳಿಗಿಂತ ಹೆಚ್ಚಾಗಿದ್ದು ಸಮಾಧಾನಕರವಾದ ಅಂಶವಾಯಿತು.

ಒಟ್ಟಾರೆ ಕೃಷಿ ಅಭಿವೃದ್ಧಿಯಲ್ಲಿ ಬಳಸಲಾದ ತಂತ್ರಗಳು ಹಲವಾರು ಕಾರಣಗಳಿಂದ ಕೆಲವೇ ಪ್ರದೇಶಗಳಿಗೆ ಸೀಮಿತಗೊಂಡವು ಮುಖ್ಯವಾಗಿ ನೀರಾವರಿ ತಾಂತ್ರಿಕತೆಯು ನೀರಿನ ಮೂಲಗಳ ಮಿತಿಯಿಂದ ಸೀಮಿತಗೊಂಡರೆ, ವಿದ್ಯುತ್ ಕೂಡಾ ಬಳಕೆದಾರರ ಸಂಕಟಗಳಲ್ಲೊಂದಾಯಿತು. ಒಟ್ಟಾರೆ ಕೃಷಿ ಅಭಿವೃದ್ಧಿ ಬೆಳವಣಿಗೆಗಳು ಕಳೆದ ದಶಕಗಳಲ್ಲಿ ಒಣ ಬೇಸಾಯಕ್ಕೆ ಗಮನ ಕೊಡದೆ ಬಹು

ಸಂಖ್ಯಾತ ರೈತರನ್ನು ತಲುಪಲಿಲ್ಲ. ಒಣ ಬೇಸಾಯದ ವಿಸ್ತೀರ್ಣ ಮತ್ತು ಹಿಡುವಳಿದಾರರ ಸಂಖ್ಯೆಯು ಗಣನೀಯ ಪ್ರಮಾಣದಲ್ಲಿರುವುದು, ಆಹಾರ ಭದ್ರತೆಯ ಕಾರ್ಯಯೋಜನೆಯು ಇನ್ನೂ ಅಧ್ಯಯನಕ್ಕೆ ಅಥವಾ ಯಾವುದೇ ಅವಕಾಶಗಳಿಗೆ ಸಾಧ್ಯವಾಗಿರುವುದನ್ನು ಗಮನಿಸಬಹುದು.

ಇದರ ಜತೆಯಲ್ಲಿ ಈಗ ಮತ್ತೊಂದು ಅಂಶವಾಗಿ ವಾತಾವರಣದ ಬದಲಾವಣೆ ಅಥವಾ ಹವಾಮಾನ ವೈಪರಿತ್ಯ ಸೇರಿ ಆಹಾರ ಉತ್ಪಾದನಾ ಜಗತ್ತಿಗೆ ಹೊಸ ತಿರುವು ತಂದಿವೆ. ಆದ್ದರಿಂದ ಬದಲಾಗುತ್ತಿರುವ ವಾತಾವರಣಕ್ಕೂ ಗಮನಕೊಡುವ ಸಂದರ್ಭವು ಇಂದಿನ ತುರ್ತು ಆಗಿದೆ (ಚನ್ನೇಶ್, 2009).

ಆಹಾರ ಉತ್ಪಾದನೆಯ ಅಧ್ಯಯನಗಳು ಬಹುಪಾಲು ಒಟ್ಟಾರೆ ಉತ್ಪಾದನೆಯು ಪ್ರಭಾವಿತವಾಗಬಹುದಾದ ಅಂಶಗಳನ್ನೊಳಗೊಂಡಿದೆ. ಕೃಷಿ ಎಂಬುದು ಆಹಾರ ಉತ್ಪಾದಕ ಜಗತ್ತು. ಯಾವುದೇ ಉತ್ಪಾದಕ ಜಗತ್ತು ಅದಕ್ಕೆ ಬಳಸುವ ಮೂಲ ಸಂಪನ್ಮೂಲ ಸೌಕರ್ಯ ಮತ್ತು ಸಾಮಗ್ರಿಗಳಿಂದ ಪ್ರಭಾವಿತವಾಗುವುದು ಸಹಜ. ಆಹಾರ ಉತ್ಪಾದನೆಯ ಪ್ರಮುಖ ಸಂಪನ್ಮೂಲ, ನೆಲ ಮತ್ತು ಜಲ ಆಗಿವೆ. ನೆಲ ಮತ್ತು ಜಲವನ್ನು ಸಂಪನ್ಮೂಲವಾಗಿ ಉತ್ತಮ ಉತ್ಪಾದಕತೆಗೆ ಬಳಸುವಂತೆ ಅನೇಕ ಅಧ್ಯಯನಗಳು ನಡೆದಿವೆ. ನೆಲದ ಒಡೆತನ, ಉಳುಮೆಗೆ ಒಳಗಾದ ರೀತಿ, ಹಂಚಿಕೆ, ಬಳಕೆ, ಭೂ ಸುಧಾರಣೆಗೆ ಪದ್ಧತಿಗಳು ಹೀಗೆ ಹಲವು ಬಗೆಯ ಅಧ್ಯಯನಗಳು ಕಾಣುತ್ತವೆ. ನೆಲದ ನಿರ್ವಹಣೆಯಲ್ಲಿ ಭೂ ಹಿಡುವಳಿಗಳ ಅಧ್ಯಯನಗಳೂ ಸೇರಿವೆ. ಭೂ ಸುಧಾರಣೆಯು ಭಾರತೀಯ ಕೃಷಿ ಹಿಡುವಳಿದಾರರ ಸಮಸ್ಯೆಯ ಅರಿವಿನಲ್ಲಿ ಅತ್ಯಂತ ಪ್ರಮುಖವಾದ ಪಾತ್ರ ವಹಿಸಿವೆ. ಅನೇಕ ರಾಜಕೀಯ ಪರಿಸ್ಥಿತಿಗನುಗುಣವಾಗಿ ಭೂ ಸುಧಾರಣಾ ವ್ಯವಸ್ಥೆಗಳನ್ನು ಜಾರಿಗೊಳಿಸಿದ್ದಾರೆ. ಭಾರತೀಯ ಜನಪರ ಹೋರಾಟಗಳಲ್ಲಿ ಭೂಸುಧಾರಣೆ ಕುರಿತು ಹಲವಾರು ಹೋರಾಟಗಳು ಪರಿಣಾಮಕ್ಕೆ ಬಂದಿವೆ (ಸಕ್ಸೇನಾ 2003, ಸ್ವಾಮಿನಾಥನ್ 1995, ಕುಂದು ಮತ್ತು ಜೈನ್ 2004).

ಉತ್ಪಾದಕ ಶಕ್ತಿಯು ಜನರ ಆರ್ಥಿಕ ಸ್ಥಿತಿಗೆ ಪೂರಕವಾಗಿರುತ್ತದೆ. ಬಡತನ ಅಥವಾ ಶ್ರೀಮಂತಿಕೆಯು ಕೊಳ್ಳುವ ಸಾಮರ್ಥ್ಯವನ್ನು ನಿರ್ಧರಿಸುವುದರಿಂದ ಪರಿಕರ ಕೊಳ್ಳುವುದಕ್ಕೆ ಹಾಗೂ ಬಳಕೆಯು ಉತ್ಪಾದಕ ಜಗತ್ತನ್ನು ತಟ್ಟಿದೆ. ಆಹಾರ ಉತ್ಪಾದನೆಯು ವೈವಿಧ್ಯಮಯವಾದ ಅಳತೆಗೋಲು ಹಾಗೂ ಮಾನದಂಡಗಳನ್ನು ಒಳಗೊಂಡಿದೆ. ಹಸಿರು ಕ್ರಾಂತಿಯ ದಿನಗಳಲ್ಲಿ 1960 ರಿಂದ 80ರ ದಶಕದವರೆಗೂ ಬಳಸುವ ಗೊಬ್ಬರಗಳೇ ಪ್ರಮುಖ ಮಾನದಂಡಗಳಾಗಿದ್ದವು. ಪ್ರತಿ ಎಕರೆಗೆ ಬಳಸುವ ವೈವಿಧ್ಯಮಯವಾದ ರಸಗೊಬ್ಬರಗಳ ಆಧಾರದಿಂದ ಆ ದೇಶದ ಫಲವತ್ತತೆಯ ನಿರ್ವಹಣೆಯಲ್ಲಿ ಅಳತೆ ಮಾಡಲಾಗುತ್ತಿತ್ತು. ಅನೇಕ ಸಂಶೋಧಕರು ಫಲವತ್ತತೆಯ ನಿರ್ವಹಣೆಯ ಅಧ್ಯಯನದಲ್ಲಿ ಈ ಮಾಹಿತಿಯನ್ನು ಬಳಸಿ ವಿಶ್ಲೇಷಣೆ ಮಾಡಿರುವುದು ಕಾಣಬಹುದು.

ಆಹಾರ ಉತ್ಪಾದನೆಯ ಅರ್ಥೈಸುವಿಕೆಗೆ ಹಲವು ಆಯಾಮಗಳು ಸೇರಿವೆ. ಪ್ರಮುಖವಾಗಿ ಆಹಾರ ಧಾನ್ಯದ ಉತ್ಪಾದನೆ, ಬೇಳೆ-ಕಾಳುಗಳ ಉತ್ಪಾದನೆ, ಎಣ್ಣೆ ಕಾಳುಗಳು, ತೋಟಗಾರಿಕಾ ಬೆಳೆಗಳು, ಹಾಲು- ಮೊಟ್ಟೆ-ಮಾಂಸ ಉತ್ಪಾದನೆ ಹೀಗೆ ಇವುಗಳಲ್ಲಿ ಆಹಾರ ಧಾನ್ಯಗಳ

ಉತ್ಪಾದನೆಯನ್ನೇ ಪ್ರಮುಖವಾಗಿ ಗುರುತಿಸಲಾಗಿದೆ. ಅವುಗಳೊಳಗಿನ ವೈವಿಧ್ಯತೆ ಮತ್ತು ವಿಶೇಷತೆಗಳನ್ನು ಅರಿಯುವ ಪ್ರಯತ್ನಗಳು ಸಾಕಷ್ಟು ನಡೆದಿವೆ. ವೈವಿಧ್ಯತೆಗೆ ಸಂಬಂಧಿಸಿದಂತೆ ಅಕ್ಕಿ ಹಾಗೂ ಗೋಧಿ ಅಂತರ್‌ರಾಷ್ಟ್ರೀಯ ಸುದ್ದಿಯಲ್ಲಿ ಮುಂಚೂಣಿಯಲ್ಲಿರುವ ಧಾನ್ಯಗಳು ನಂತರ ಜೋಳ, ಸಜ್ಜೆ, ಬಾರ್ಲಿ ಮುಂತಾಗಿ ಕೇಳಿಬರುತ್ತದೆ. ಅದಕ್ಕೂ ಕಡಿಮೆ ಸುದ್ದಿಯಲ್ಲಿನ ಧಾನ್ಯಗಳೆಂದರೆ ಕಿರು ಧಾನ್ಯಗಳಾದ ರಾಗಿ, ನವಣೆ, ಸಜ್ಜೆ ಇತ್ಯಾದಿ. ಧಾನ್ಯಗಳ ವೈವಿಧ್ಯತೆಯು ಆಯಾ ಪರಿಸರ ಹಾಗೂ ವಾತಾವರಣದ ನೆಮ್ಮದಿಯ ಒಳಗೆ ಜನರ ಆಸಕ್ತಿಯಲ್ಲಿ ಪೋಷಿತವಾದಂತವು. ಕ್ರಮೇಣ ಆಸಕ್ತಿಯು ವಿಶೇಷತೆಗಳ ಅರಿವಿನಲ್ಲಿ ಗ್ರಹಿಸುವಾಗ ವಿವಿಧ ಕಾಳುಗಳ ವೈವಿಧ್ಯತೆ ವಿಶೇಷಗಳು ಜಾರಿಗೆ ಬಂದವು ಈ ವಿಶೇಷತೆಗಳು ಅರಿವಿನಲ್ಲಿ ರಸಾಯನ ಶಾಸ್ತ್ರೀಯ ಬೆಳವಣಿಗೆಗಳು ಸಾಕಷ್ಟು ಸಹಾಯಕವಾಗಿವೆ. ಪೊಷಕಾಂಶ, ಜೀವಸತ್ವ, ಜೀವಿ ಪ್ರಚೋಧಕ ಇತ್ಯಾದಿಗಳ ಅರಿವು ಜೀವ ರಸಾಯನಿಕ ಶಾಸ್ತ್ರೀಯ ಬೆಳವಣಿಗೆಯಿಂದ ಹಿರಿದಾಯಿತು. ಧಾನ್ಯಗಳ ವಿಶೇಷತೆಗಳನ್ನು ಹಿಡಿದು ಬಳಸುವ ಕ್ರಮಗಳು ಒಂದಾದವು.

ನಮ್ಮ ದೇಶದಲ್ಲಿ ಏಕದಳ ಮತ್ತು ದ್ವಿದಳ ಧಾನ್ಯಗಳು ಜನರ ಆಹಾರದ ಪ್ರಮುಖ ಭಾಗವನ್ನು ಆವರಿಸಿವೆ. ಈ ಧಾನ್ಯಗಳ ಉತ್ಪಾದನೆಯನ್ನು 1951 ರಿಂದ 2000 ಇಸವಿಗೆ ಹೋಲಿಸಿದಾಗ 1951ರಲ್ಲಿ 50.8 ದಶಲಕ್ಷ ಟನ್ ಇದ್ದ ಉತ್ಪಾದನೆಯು 2000ದ ಇಸವಿಯ ವೇಳೆಗೆ 199 ದಶಲಕ್ಷ ಟನ್ನಿನಷ್ಟಾಗಿದೆ. ಅಂದರೆ, ಧಾನ್ಯಗಳ ಉತ್ಪಾದನೆಯಲ್ಲಿ ನಮ್ಮ ದೇಶ ಗಣನೀಯ ಪ್ರಮಾಣದಲ್ಲಿ ಹೆಚ್ಚಳವನ್ನು ಸಾಧಿಸಿದೆ. ವಿವಿಧ ಬೆಳೆಗಳ ಉತ್ಪಾದನೆಯನ್ನು 1951 ರಿಂದ 2000ದ ಇಸವಿಯ ಉತ್ಪಾದನೆಗೆ ಹೋಲಿಸಿದರೆ, ಉತ್ಪಾದನೆಯಲ್ಲಿ ಭತ್ತ ನಾಲ್ಕು ಪಟ್ಟು, ಗೋಧಿ 10 ಪಟ್ಟು, ಎಣ್ಣೆಕಾಳುಗಳು ನಾಲ್ಕು ಪಟ್ಟು, ಆಲೂಗಡ್ಡೆ 12 ಪಟ್ಟು, ಕಬ್ಬು ಆರು ಪಟ್ಟು ಹಾಗೂ ತೃಣ ಧಾನ್ಯಗಳ ಉತ್ಪಾದನೆಯಲ್ಲಿ ಎರಡು ಪಟ್ಟು ಹೆಚ್ಚಳವನ್ನು ಸಾಧಿಸಿದೆ (ಅಲಿ, 1997).

ಹಾಲಿನ ಉತ್ಪಾದನೆಯಲ್ಲಿ ದೇಶವು ಕಳೆದ ಅರ್ಧ ಶತಮಾನದ ಅವಧಿಯಲ್ಲಿ ಹೊಸ ಕ್ರಾಂತಿಯನ್ನೇ ಹುಟ್ಟುಹಾಕಿದೆ. 1982ರಲ್ಲಿ 34.3 ದಶಲಕ್ಷ ಟನ್‌ನಷ್ಟಿದ್ದ ಹಾಲಿನ ಉತ್ಪಾದನೆಯು 1999ರ ವೇಳೆಗೆ 74.7 ದಶಲಕ್ಷ ಟನ್ನಿನಷ್ಟಾಗಿದೆ. ಇದಲ್ಲದೆ, ಮೊಟ್ಟೆ ಮೀನು, ಮಾಂಸಾಹಾರದ ಲಭ್ಯತೆಯೂ ಸಹ ಗಣನೀಯವಾಗಿ ಹೆಚ್ಚಳವಾತದೆ. ಹಣ್ಣುಗಳ ಉತ್ಪಾದನೆಯಲ್ಲಿ ವಿಶ್ವದಲ್ಲಿಯೇ ಪ್ರಥಮ ಸ್ಥಾನ ಹಾಗೂ ತರಕಾರಿಗಳ ಉತ್ಪಾದನೆಯಲ್ಲಿ ದ್ವಿತಿಯ ಸ್ಥಾನದಲ್ಲಿರುವ ನಮ್ಮ ದೇಶದಲ್ಲಿ 1993–94ರಲ್ಲಿ 39.5 ಮಿಲಿಯನ್ ಟನ್ ಹಾಗೂ 65 ದಶಲಕ್ಷ ಟನ್ ನಷ್ಟಿದ್ದ ಹಣ್ಣು ಮತ್ತು ತರಕಾರಗಳ ಉತ್ಪಾದನೆಯು 1998–99ರ ವೇಳೆಗೆ 49.5 ದಶಲಕ್ಷ ಟನ್ ಮತ್ತು 85 ದಶಲಕ್ಷ ಟನ್ ಉತ್ಪಾದನೆಯಾಗಿದೆ (ವಿಜಯಲಕ್ಷ್ಮಿ, 2002).

ನಮ್ಮ ದೇಶದಲ್ಲಿನ ಪ್ರತಿಯೊಬ್ಬ ಪ್ರಜೆಗೆ ಲಭ್ಯವಾಗುವ ಆಹಾರಧಾನ್ಯಗಳ ಪ್ರಮಾಣವು 1950ರಲ್ಲಿ 394.9 ಗ್ರಾಂ ನಷ್ಟು ಇದ್ದದ್ದು 2000ದ ವೇಳೆಗೆ ಇದರ ಪ್ರಮಾಣವು 531 ಗ್ರಾಂ ನಷ್ಟಾಯಿತು. ದೇಶದ ಜನಸಂಖ್ಯೆಯು ಈ ಅವಧಿಯಲ್ಲಿ ಅಂದರೆ 1950 ರಿಂದ 2000 ಇಸವಿಯ

ಅವಧಿಯಲ್ಲಿ ಮೂರುಪಟ್ಟು ಹೆಚ್ಚಾಗಿದ್ದರೂ ನಮ್ಮ ದೇಶವು ಪ್ರತಿಯೊಬ್ಬರಿಗೂ ಸಾಕಾಗಿ ಉಳಿಯುವಷ್ಟು ಧಾನ್ಯವನ್ನು ಉತ್ಪಾದಿಸುವ ಮೂಲಕ ಮೇಲುಗೈ ಸಾಧಿಸಿತು. ಬೇಳೆಕಾಳುಗಳ ಲಭ್ಯತೆಯ ಪ್ರಮಾಣವು 1951 ರಲ್ಲಿ 60.7 ಗ್ರಾಂ ನಷ್ಟಿದ್ದ ಪ್ರಮಾಣವು 2000ದ ಇಸವಿಯ ವೇಳೆಗೆ ಪ್ರತಿಯೊಬ್ಬರಿಗೆ ಲಭ್ಯವಾಗುವ ಪ್ರಮಾಣವು 36 ಗ್ರಾಂಗಳಿಗೆ ಇಳಿದಿದೆ (ವಿಜಯಲಕ್ಷ್ಮಿ, 2002).

ನಮ್ಮ ದೇಶ ಹಣ್ಣು ಮತ್ತು ತರಕಾರಿಗಳ ಉತ್ಪಾದನೆಯಲ್ಲಿ ಉತ್ತಮ ಸ್ಥಾನವನ್ನು ಹೊಂದಿದ್ದರೂ ಸಹ ಪ್ರತಿಯೊಬ್ಬರಿಗೂ ಅವಶ್ಯಕ ಪ್ರಮಾಣದಷ್ಟು ಹಣ್ಣು ಮತ್ತು ತರಕಾರಿಗಳನ್ನು ಒದಗಿಸುವಲ್ಲಿ ವಿಫಲವಾಗಿದೆ (ಪ್ರತಿಯೊಬ್ಬ ಭಾರತೀಯನಿಗೆ ಶಿಫಾರಸು ಮಾಡಿದ ಹಣ್ಣುಗಳ ಪ್ರಮಾಣ 100 ಗ್ರಾಂ, ಹಾಗೂ ತರಕಾರಿಗಳು 300ಗ್ರಾಂ). ಸದ್ಯ ನಮ್ಮ ಉತ್ಪಾದನೆಯು ಪ್ರತಿಯೊಬ್ಬರಿಗೆ 46ಗ್ರಾಂ ಹಣ್ಣುಗಳನ್ನು ಹಾಗೂ 140ಗ್ರಾಂ ತರಕಾರಿಗಳನ್ನು ಒದಗಿಸುವ ಸಾಮರ್ಥ್ಯ ಹೊಂದಿದೆ (ಕೌಲ್, 1998). ಹೆಚ್ಚುತ್ತಿರುವ ಜನಸಂಖ್ಯೆಗೆ ಅಗತ್ಯವಾಗುವಷ್ಟು ಹಣ್ಣು ಮತ್ತು ತರಕಾರಿಗಳ ಉತ್ಪಾದನೆಯನ್ನು ಹೆಚ್ಚಿಸಬೇಕಿದೆ.

ಹಾಲು ಮತ್ತು ಹಾಲಿನ ಪದಾರ್ಥಗಳು ಮುಖ್ಯವಾಗಿ ಮಕ್ಕಳು ಮತ್ತು ಮಹಿಳೆಯರ ಆರೋಗ್ಯದಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ (ಐ.ಸಿ.ಎಂ.ಆರ್.) ಪ್ರತಿಯೊಬ್ಬರಿಗೆ 285 ಮಿಲಿ ಲೀಟರ್ ಹಾಲನ್ನು ಶಿಫಾರಸ್ಸು ಮಾಡಿದೆ. ಆದರೆ ಹಾಲಿನ ಒಟ್ಟು ಉತ್ಪಾದನೆಯಲ್ಲಿ 1980 ರಿಂದ ಇತ್ತೀಚಿಗೆ ಗಣನೀಯವಾಗಿ ಹೆಚ್ಚಳವಾಗಿದ್ದರೂ ಸಹ ಪ್ರತಿಯೊಬ್ಬರಿಗೆ ಲಭ್ಯವಿರುವ ಪ್ರಮಾಣ 197 ಮಿಲಿ ಲೀಟರ್ ನಷ್ಟು ಮಾತ್ರ (ಅರೋರಾ ಮತ್ತಿತರರು 1997).

ನಮ್ಮ ದೇಶದಲ್ಲಿ ಹಾಲಿನ ಉತ್ಪಾದನೆಯು 1959–51 ರಲ್ಲಿ 17 ದಶಲಕ್ಷ ಟನ್ ನಷ್ಟು ಇದ್ದದ್ದು 2001–02 ರ ವೇಳೆಗೆ 84.6 ದಶಲಕ್ಷ ಟನ್ ನಷ್ಟು ಆಗಿದೆ. ದೇಶವು ಹಾಲಿನ ಉತ್ಪಾದನೆಯಲ್ಲಿ ಹೆಚ್ಚು ಪ್ರಗತಿ ಸಾಧಿಸಿದ್ದರೂ ಸಹ 2001–02 ರಲ್ಲಿ ಭಾರತಿಯ ಪ್ರತಿಯೊಬ್ಬ ಪ್ರಜೆಗೆ ಲಭ್ಯವಿರುವ ಪ್ರಮಾಣ 226 ಗ್ರಾಂ. ಇದು ಐ.ಸಿ.ಎಂ.ಆರ್. ಭಾರತೀಯರಿಗೆ ನಿಗದಿಪಡಿಸಿದ ಪ್ರಮಾನಕ್ಕಿಂತ (285ಗ್ರಾಂ/ಪ್ರತಿಯೊಬ್ಬರಿಗೆ) ಕಡಿಮೆ ಇದೆ (ಮೆಹತಾ ಮತ್ತು ಶರ್ಮಾ, 2003).

ಭಾರತದಲ್ಲಿಯ ಹಾಲಿನ ಉತ್ಪಾದನೆಯು 1968–69ರಲ್ಲಿ 21.2 ದಶಲಕ್ಷ ಟನ್ ನಷ್ಟಿದ್ದು, 2007–08ರಲ್ಲಿ 112 ದಶಲಕ್ಷ ಟನ್ ಹಾಗೂ 2009–10ರಲ್ಲಿ 258 ಟನ್ ಉತ್ಪಾದಿಸುವ ಮೂಲಕ ಪ್ರತಿ ಪ್ರಜೆಗೆ ಪ್ರತಿ ದಿನದ ಹಾಲಿನ ಲಭ್ಯತೆಯ ಪ್ರಮಾಣವು 1968–69 ರಲ್ಲಿ 112 ಗ್ರಾಮ ಇದ್ದದ್ದು, 2005–06ರವೇಳೆಗೆ 241 ಗ್ರಾಂನಷ್ಟಾಗಿದೆ. (ರಾಷ್ಟ್ರೀಯ ಹೈನೋತ್ಪಾದನೆ ಮತ್ತು ಹೈನು ಅಭಿವೃದ್ಧಿ ಮಂಡಳಿ, ವರದಿ, 2010).

ಉತ್ಪಾದನೆಯಾದ ಎಲ್ಲ ಆಹಾರ ಪದಾರ್ಥವು ಬಳಕೆಗೆ ಲಭ್ಯವಾಗುವುದಿಲ್ಲ. ಒಂದು ಆಹಾರ ಪದಾರ್ಥವು ಉತ್ಪಾದನೆಯಾದ ಕ್ಷಣದಿಂದ ದಿನಕಳೆದಂತೆ ಆಹಾರದ ಮೌಲ್ಯವು ಕ್ಷೀಣಿಸುತ್ತಾ

ಹೋಗುತ್ತದೆ. ಹಾಗಾಗಿ ಆಹಾರ ಲಭ್ಯತೆ ಎನ್ನುವುದು ಉತ್ಪಾದನೆಯಷ್ಟು ಆಗಿರಲು ಸಾಧ್ಯವಿಲ್ಲ. ಉತ್ಪಾದನೆಗೂ ಹಾಗೂ ಲಭ್ಯತೆಗೂ ಮಧ್ಯ ಅಂತರವಿದೆ. ಒಂದು ಅಂದಾಜಿನಂತೆ ನಮ್ಮ ದೇಶದಲ್ಲಿ ಉತ್ಪಾದನೆಯ ಶೇಕಡ 87.5 ರಷ್ಟು ಮಾತ್ರ ಬಳಸಲು ಲಭ್ಯವಾಗುತ್ತದೆ (ಸಕ್ಸೇನಾ, 2004). ಲಭ್ಯವಾದ ಆಹಾರವು ಬಿತ್ತನೆಯ ಬೀಜಕ್ಕಾಗಿ, ಪಶು ಆಹಾರವಾಗಿ ಮತ್ತು ಕೆಲವೊಂದು ಪ್ರಮಾಣದ ಆಹಾರ ಹಾಳಾಗಿ ಹೋಗುತ್ತದೆ.

ಅನೇಕ ತಜ್ಞರ ಅಭಿಪ್ರಾಯದಂತೆ ಆರೋಗ್ಯಕರ ಜೀವನಕ್ಕೆ ಪ್ರತಿ ದಿನದ ಪ್ರತಿ ಪ್ರಜೆಯ ಅವಶ್ಯಕತೆಯು 350-400ಗ್ರಾಂ ನಷ್ಟಿರುತ್ತದೆ. ಪಟ್ನಾಯಕ್ (2004) ರವರು ಅಹಾರ ಲಭ್ಯತೆಯ ಕುರಿತು 1950 ರಿಂದ 1995ರ ವರೆಗೆ ಪ್ರತಿ ಐದು ವರ್ಷದ ಸರಾಸರಿ ಲಭ್ಯತೆಯನ್ನು ಗಮನಿಸಿದ್ದು, ಅವರ ವರದಿಯಂತೆ 1950 ರಿಂದ 55 ರಲ್ಲಿ 416 ಗ್ರಾಂ ಪ್ರತಿ ಮನುಷ್ಯನಿಗೆ ಪ್ರತಿದಿನಕ್ಕೆ ಲಭ್ಯವಿದ್ದದ್ದು 1986 ರಿಂದ 91ರ ವೇಳೆಗೆ 485 ಗ್ರಾಂಗಳಷ್ಟಾಗಿದ್ದಿತು. ಅಲ್ಲಿಂದ ಮುಂದೆ ಲಭ್ಯತೆಯು ಕಡಿಮೆಯಾಗುತ್ತಲೇ ಸಾಗಿದ್ದು 2006ರ ವೇಳೆಗೆ ಹಸಿವನ್ನು ಕಡಿಮೆ ಮಾಡುವ ಮೂಲಕ ಬಡವರ ಬದುಕನ್ನು ಶಕ್ತಿಯುತ ಮಾಡಲು ಅವರಿಗೆ ಅಹಾರವನ್ನು ಪಡೆಯುವ ಹಕ್ಕು ಬಲಯುತವಾಗಿರಬೇಕೆಂಬುದನ್ನು ಆಪೇಕ್ಷಿಸುತ್ತದೆ. ಈ ಬಗೆಯ ಅನಿಸಿಕೆಗಳನ್ನು ಅನೇಕ ಕಾರಣಗಳ ಮೂಲಕ ಅನೇಕ ಅಧ್ಯಯನಕಾರರು ಗುರುತಿಸಿದ್ದಾರೆ.

ಜನಸಂಖ್ಯೆ ಹೆಚ್ಚಳದ ಸನ್ನಿವೇಶದಲ್ಲಿ ಆಹಾರ ಉತ್ಪಾದನೆ ಕಡಿಮೆಯಾಗಿ ಜನರಲ್ಲಿ ಕೊಳ್ಳುವ ಶಕ್ತಿಯು ಕಡಿಮೆಯಾದಾಗ ಹಂಚಿಕೆಯು ಪ್ರಭಲವಾಗಿ ಇರಲೇಬೇಕಾಗುತ್ತದೆ. ಆದರೆ ಉತ್ಪಾದನೆಯಲ್ಲಿ ಏರಿಳಿತಗೊಂಡಾಗ ಎಲ್ಲದರ ಮೇಲೂ ಪರಿಣಾಮ ಉತ್ತಮವಾಗಿರುವುದಿಲ್ಲ. ಇದಕ್ಕೆ ಪ್ರಮುಖ ವಸ್ತುನಿಷ್ಠ ಕಾರಣಗಳೇನೆಂದರೆ ಆಯಾ ಪರಿಸ್ಥಿತಿಗಳ ಆರ್ಥಿಕ ಸನ್ನಿವೇಶ, ಭೂ ಸುಧಾರನಾ ಮಿತಿಗಳು, ಪರಿಣಾಮಕಾರಿಯಾಗದ ಬಡತನ ನಿವಾರಣಾ ಯೋಜನೆಗಳು ಮತ್ತು ಹಳ್ಳಿ ಮತ್ತು ನಗರ ಜೀವನದ ಅಪಾರ ವ್ಯತ್ಯಾಸಗಳು ಹೀಗೆ ಇಂತಹ ಕಾರಣಗಳಿಂದಾಗಿ ಹಂಚಿಕೆಯ ನಿರಂತರ ಸುಸ್ಥಿರತೆ ಸಮರ್ಪಕವಾಗಿರುವುದಿಲ್ಲ.

ಇಂತಹ ಅನಿಶ್ಚಿತತೆಯ ಹಂಚಿಕೆಯ ಸನ್ನಿವೇಶಗಳು ಸಾಕಷ್ಟು ಆಹಾರ ಸಂಗ್ರಹ ಇದ್ದಾಗ್ಯೂ ಎಲ್ಲೋ ಕೆಲವೆಡೆ ಜನ ಹಸಿವನ್ನು ನಿಭಾಯಿಸಲಾಗದ ಪರಿಸ್ಥಿತಿಯನ್ನು ಕಾಣುತ್ತೇವೆ. ಆಹಾರ ಹಂಚಿಕೆ ಕುರಿತು ಬಹುಪಾಲು ಅಧ್ಯಯನಕಾರರು ನೇರವಾಗಿ ಕಾರ್ಯಯೋಜನೆಗಳಲ್ಲಿ ಯಾವುದೇ ಮಿತಿಗಳನ್ನು ಗುರುತಿಸಿಲ್ಲ. ಬದಲಿಗೆ ಕಾರ್ಯಕ್ರಮ ಜಾರಿಯಲ್ಲಿನ ಇತರೆ ಕಾರಣಗಳ ವ್ಯತ್ಯಾಸಗಳನ್ನು ಗುರುತಿಸಿದ್ದಾರೆ. ಅಂತಹ ಕಾರಣಗಳೆಂದರೆ ಅಕಾಲ ಹಂಚಿಕೆ, ಆಹಾರದ ಗುಣಮಟ್ಟ ಹಾಗೂ ವಿತರಿಸುವ ಪ್ರಮಾಣ.

### 2.1.2 ಆಹಾರ ಹಂಚಿಕೆ

'ಕಾಗೆ ಒಂದಗಳ ಕಂಡರೆ ಕೂಗಿ ಕರೆಯದೇ ತನ್ನ ಬಳಗವ' ಎಂಬ ಬಸವಣ್ಣನವರ ವಚನದ ಈ ಸಾಲು ಒಂದು ಸಂಕುಲ ಅಥವಾ ಜೈವಿಕ ಆಹಾರ ಹಂಚುವಿಕೆ ಆಸಕ್ತಿಯನ್ನು ತಿಳಿಸುತ್ತದೆ. ಒಂದು ಬಳಗ ಅಥವಾ ಸಂಕುಲಕ್ಕೆ ಸೇರಿದ ಆಯಾ ಪ್ರಭೇದಗಳು ತಮ್ಮೊಳಗಿನ ಸಂಬಂಧದಲ್ಲಿ ಆಹಾರ ಹಂಚುವಿಕೆಯ ಮೂಲಕ ಬದುಕಿನ ಸಹಭಾಗಿತ್ವವನ್ನು ಕಾಣಬಹುದು.

ಅರಿವಿನ ವಿಕಾಸದಲ್ಲಿ ಮುಂಚೂಣಿಯಲ್ಲಿರುವ ಮಾನವ ಕುಲ ಜೀವನದ ಸುಸ್ಥಿರ ಆಶಯಗಳ ಮೂಲಕ ಆಹಾರ ಹಂಚಿಕೆಯನ್ನು ಗಂಭೀರವಾಗಿಯೇ ಪರಿಗಣಿಸಿದೆ. ಆದರೆ ವಾಸ್ತವಿಕವಾಗಿ ತಮ್ಮೊಳಗಿನ ವೈವಿಧ್ಯಮಯ ಕಾರಣಗಳ ವ್ಯತ್ಯಾಸಗಳಿಗೆ ಮುಂದಿನ ಗುಂಪುಗಳಾಗಿಸಿ ಹಂಚಿಕೆಯ ಸಾಧ್ಯತೆಗಳನ್ನು ಸಂಕೀರ್ಣಗೊಳಿಸಿವೆ. ಈ ಸಂಕೀರ್ಣತೆಯು ವ್ಯಾಪಾರೀಕರಣದ ಉತ್ತುಂಗದಲ್ಲಿ ಅತ್ಯಂತ ಕ್ಲಿಷ್ಟವಾದ ಸಮಸ್ಯೆಯನ್ನು ತಂದೊಡ್ಡಿವೆ. ಭೌಗೋಳಿಕವಾಗಿ ಮಾನವ ಸಂಕುಲ ಇಡೀ ಭೂಮಿಯನ್ನು ಆವರಿಸಿದೆ. ಅವಶ್ಯಕತೆಗಳ ಪೂರೈಕೆಯಲ್ಲೂ ಸಹ ಈ ವಿಸ್ತಾರವಾದ ನೆಲವನ್ನು ನಂಬಿಕೊಂಡಿದೆ. ಹಾಗಾಗಿ ಹಂಚಿಕೆ ಎನ್ನುವುದು ಎಷ್ಟು ದೂರದ ಮಿತಿಯೊಳಗೆ ಎನ್ನುವುದು ಕೂಡ ಮುಖ್ಯ. ಈ ಮಿತಿಯನ್ನು ಅರ್ಥೈಸಿಕೊಂಡು ಸರಳೀಕರಿಸಿ ಹಂಚಿಕೆಯನ್ನು ಸಾಧ್ಯಮಾಡಬೇಕಾಗುತ್ತದೆ. ಈ ಹಿನ್ನಲೆಯಲ್ಲಿ ಆಹಾರ ಹಂಚಿಕೆ ಎನ್ನುವುದು ಉತ್ಪಾದನಾ ನೆಲದಿಂದ ಉಣ್ಣುವ ತಟ್ಟೆಯವರೆಗೂ ವೈವಿಧ್ಯ ಸ್ಥರಗಳಲ್ಲಿ ಹಂಚಿವೆ.

ನಿಸರ್ಗದೊಳಗೂ ಸಹ ಸಮುದಾಯಗಳ ನಡುವೆ ಆಹಾರಕ್ಕಾಗಿ ಸಂಘರ್ಷ ನಡೆದೇ ಇದೆ. ಜೈವಿಕ ಸಮುದಾಯಗಳ ಉಳಿವಿನಲ್ಲಿ ಈ ಸಂಘರ್ಷ ತನ್ನ ಪ್ರಭಾವವನ್ನು ತೋರಿಸಿದೆ. ಮಾನವನು ನೈಸರ್ಗಿಕ ಜೀವನ ಶೈಲಿಯಿಂದ ಹೊರಬಂದು ಸಮಾಜ ನಿರ್ಮಾಣದಲ್ಲಿ ತೊಡಗಿದ ನಂತರ ಈ ಹಂಚಿಕೆ ಎನ್ನುವುದು ಆಯಾ ಪ್ರದೇಶದ ಆಡಳಿತದ ಜವಾಬ್ದಾರಿಯಾಗಿ ವಿಕಾಸಗೊಂಡಿದೆ. ಸಾರ್ವಜನಿಕ ಹಿತಾಸಕ್ತಿಯ ಈ ವಿಚಾರವು ಭಾರತೀಯರ ಸಂದರ್ಭದಲ್ಲಿ ಸ್ವಾತಂತ್ರ್ಯೋತ್ತರ ಸನ್ನಿವೇಶದಲ್ಲಿ ಮಾತ್ರ ಗಂಭೀರವಾದ ವಿಚಾರವಾಗಿದೆ. ಸ್ವತಂತ್ರ್ಯ ಪೂರ್ವದಲ್ಲಿ ಹರಿದು ಹಂಚಿದ್ದ ಸಣ್ಣ ಸಣ್ಣ ರಾಜ್ಯಗಳೊಳಗೂ ಆಹಾರ ಹಂಚಿಕೆಯು ಮಹತ್ವದ ಸಂಗತಿಯಾಗಿತ್ತು.

ಮೌರ್ಯ ಸಾಮ್ರಾಜ್ಯದ ಕಾಲದಲ್ಲೂ ಅಶೋಕ ಚಕ್ರವರ್ತಿಯು ತನ್ನ ಆದಿಪತ್ಯದಲ್ಲಿನ ಜನರ ಹಸಿವಿನ ನಿವಾರಣೆಗೆ ಅಗತ್ಯ ಕ್ರಮಗಳನ್ನು ಕೈಗೊಂಡಿದ್ದನು. ನಂತರ ಮೊಗಲರ ಕಾಲದಲ್ಲೂ ಕೂಡಾ ಸರ್ಕಾರವು ಧಾನ್ಯಗಳ ಉಗ್ರಾಣಗಳನ್ನು ನಿರ್ವಹಿಸಲು ಸಾಕಷ್ಟು ಕ್ರಮ ಕೈಗೊಂಡಿದ್ದರು. ದಕ್ಷಿಣ ಭಾರತದಲ್ಲಿ ಚಾಲುಕ್ಯರು, ವಿಜಯನಗರ ಅರಸರು, ಕದಂಬರು ಸಹ ತಮ್ಮ ಪ್ರಜೆಗಳ ಹಸಿವಿನ ನಿವಾರಣೆಗೆ ಅನೇಕ ಕ್ರಮಗಳನ್ನು ಕೈಗೊಂಡಿದ್ದಕ್ಕೆ ಸಾಕ್ಷಿಗಳಿವೆ. ವಿಜಯನಗರದ ನೀರಾವರಿ ಕಾಲುವೆಗಳು ದಕ್ಷಿಣ ಭಾರತದ ಎಲ್ಲ ಕೆರೆಗಳು ಇಂದಿಗೂ ಜೀವಂತವಾಗಿರುವುದಕ್ಕೆ ಅವರ ಆಸಕ್ತಿ ಕಾರಣವಲ್ಲದೇ ಬೇರೆ ಏನಲ್ಲ (ಶೈಲೇಂದ್ರ ಸಿಂಘ್, 2006).

ಬ್ರಿಟೀಷರ ಸಮಯದಲ್ಲೂ ಸಹ ಬರ ಪರಿಹಾರದ (Famine Commission, 1880) ಈ ಹಂಚುವಿಕೆಯ ಹಿನ್ನೆಲೆಯಲ್ಲಿ ಕಾಣಬರುವ ಕೆಲವು ಅಂಶಗಳು ಭಾರತದಲ್ಲಿ ಮೊಟ್ಟಮೊದಲ ಬಾರಿಗೆ 1939ರಲ್ಲಿ ಬಾಂಬೆಯಲ್ಲಿ ಆಹಾರವನ್ನು ಪಡಿತರ ವ್ಯವಸ್ಥೆಯ ಮೂಲಕ ಹಂಚುವ ಕಾರ್ಯ ಆರಂಭವಾಯಿತು. ನಂತರ 1942ರಲ್ಲಿ ಸಾರ್ವಜನಿಕ ಆಹಾರ ಹಂಚಿಕೆ ವ್ಯವಸ್ಥೆಗೆ ಮೂಲ ಸಿದ್ಧಾಂತಗಳನ್ನು ರೂಪಿಸಿ ಆಹಾರ ಇಲಾಖೆ ಆರಂಭವಾಯಿತು. ಈ ಇಲಾಖೆಯ ಜವಾಬ್ದಾರಿಯು ಆಹಾರವನ್ನು ಕೊಂಡು ಸಂಗ್ರಹಿಸಿ ಹಂಚುವ ಜವಾಬ್ದಾರಿಯನ್ನು ಹೊತ್ತುಕೊಂಡಿತು. ಹೀಗೆ ಆರಂಭಗೊಂಡ ಆಹಾರ ಹಂಚಿಕೆಯ ವ್ಯವಸ್ಥಿತ ರೂಪವು ಸ್ವಾತಂತ್ರೋತ್ತರದಲ್ಲಿ ಮತ್ತಷ್ಟು ಗಂಭೀರವಾದ ಪದ್ಧತಿಗಳ ಮೂಲಕ ಮತ್ತಷ್ಟು ವಿಕಾಸವಾಗುತ್ತಾ ಸಾಗಿತು.

ಆಹಾರ ಆಮದು–ರಫ್ತು ನಡುವಳಿಕೆಗಳು, ವಿಶೇಷ ಸಂಗ್ರಾಹಕಗಳು, ಸಾರ್ವಜನಿಕ ಹಂಚಿಕೆ ವ್ಯವಸ್ಥೆಗೆ ಪೂರಕವಾಗುವಂತಹ ಸನ್ನಿವೇಶ ನಿರ್ಮಾಣದತ್ತ ಸಾಕಷ್ಟು ಗಮನ ಕೊಡಲಾಗಿದೆ. ಇಂದು ಪಡಿತರ ಯೋಜನೆಯಲ್ಲಿ ಪ್ರತೀ ಕುಟುಂಬಗಳಿಗೆ ಆಹಾರ ಧಾನ್ಯ ಸಿಗುವಂತಾಗಿದ್ದರೆ ಕಳೆದ 60 ವರ್ಷಗಳ ಹಾದಿಯಲ್ಲಿ ಅದು ವಿಕಸನಗೊಂಡಿದ್ದರ ಮಹತ್ವಾಕಾಂಕ್ಷೆಯನ್ನು ತಿಳಿಯಬಹುದು. ಅನೇಕರು ಈ ಆಹಾರ ಹಂಚಿಕೆ, ಪಡಿತರ ವ್ಯವಸ್ಥೆಯ ಲಭ್ಯತೆ ಇತ್ಯಾದಿಗಳ ಅವಲೋಕನವನ್ನು ಗಂಭಿರವಾಗಿಯೇ ಮಾಡಿದ್ದಾರೆ. ಎಲ್ಲವುದರ ಆಶಯವು ಅಂತಹ ವ್ಯವಸ್ಥೆಯ ಪರಿಪೂರ್ಣ ಸಾಧ್ಯತೆ ಮತ್ತು ನಿರಂತರತೆಯನ್ನು ಕಾಪಾಡುವುದೇ ಆಗಿದೆ. ಪ್ರಸ್ತುತ ಕರ್ನಾಟಕ ಸರ್ಕಾರವೂ ಸಹ ಕೃಷಿ ಬಜೆಟ್ಟನ್ನು ಪ್ರತ್ಯೇಕ ಮಂಡಿಸಿ ಈ ವ್ಯವಸ್ಥೆಯ ಅಭಿವೃದ್ಧಿ ಚಿಂತನೆಗಳಿಗೆ ಹೊಸ ರೂಪ ಕೊಟ್ಟಿದೆ.

ಸರ್ಕಾರವು ಅತ್ಯಂತ ಅಗತ್ಯ ಆಹಾರ ಸಾಮಗ್ರಿಗಳಾದ ಅಕ್ಕಿ, ಗೋಧಿ, ಸೀಮೆ ಎಣ್ಣೆ ಮುಂತಾದವುಗಳನ್ನು ಈ ಸಾರ್ವಜನಿಕ ಹಂಚಿಕೆಯಡಿ ಇಂದೂ ಸೂಕ್ಷ್ಮವಾಗಿ ನೋಡುವುದನ್ನು ಕಾಣಬಹುದು. ಇಡೀ 60 ವರ್ಷಗಳ ಚಿಂತನೆಯ ಫಲವಾಗಿಯೇ ಇಂದು ಕಾಣುತ್ತಿರುವುದು ಭಾರತೀಯ ಆಹಾರ ನಿಗಮ (ಎಫ್.ಸಿ.ಐ.) ಮತ್ತು ರಾಜ್ಯಗಳ ಆಹಾರ ಮತ್ತು ನಾಗರಿಕ ಸರಬರಾಜು ನಿಗಮಗಳಾಗಿವೆ. ಇದನ್ನೆಲ್ಲಾ ಅದರ ಕಾರ್ಯಕ್ರಮಗಳ ಜಾರಿ ಮತ್ತು ಅಭಿವೃದ್ಧಿ ಉದ್ದೇಶಗಳಿಂದ ಕಾಲ ಕಾಲಕ್ಕೆ ಯೋಜನಾ ಆಯೋಗಗಳ ಸಮಿತಿಗಳೂ ಪರಿಶೀಲನೆ ಮಾಡಿವೆ. ಇವು ಅತ್ಯುತ್ತಮ ಬಳಕೆಗೂ ಸಹಕಾರಿಯಾಗಿವೆ (Progress evaluation Organization. Planning Comission, 2005).

### 2.1.3 ಆಹಾರ ಸೇವನೆ ಮತ್ತು ಪೌಷ್ಟಿಕ ಸ್ಥಿತಿ

ಮಾನವನ ಆಹಾರದ ಅವಶ್ಯಕತೆಯು ಅವನ ಹುಟ್ಟಿನಿಂದ ಆರಂಭಗೊಂಡು ಅವನ ಕೊನೆಯ ಉಸಿರಿರುವವರೆಗೆ ನಡೆಯುವ ನಿರಂತರ ಪ್ರಕ್ರಿಯೆ. ಮನುಷ್ಯನ ಆಹಾರದ ಅವಶ್ಯಕತೆಯು 'ಹಸಿವು' ಎಂಬ ಭಾವನೆ ಮೂಲಕ ವ್ಯಕ್ತಗೊಳ್ಳುತ್ತದೆ. 'ಹಸಿವು' ಎನ್ನುವುದು ತಿನ್ನಬೇಕೆಂಬ ಬಯಕೆ (desire to consume food). ಆಹಾರ ಸೇವನೆಯ ಮುಖ್ಯ ಉದ್ದೇಶ ಹಸಿವನ್ನು ನೀಗಿಸುವುದೇ ಆಗಿದೆ. ದಿನನಿತ್ಯ ಸೇವಿಸುವ ಆಹಾರವು ಹಸಿವನ್ನು ನೀಗಿಸುವುದರೊಂದಿಗೆ ದೇಹದ ಪೋಷಣೆ

ಮತ್ತು ಕಾರ್ಯಚಟುವಟಿಕೆಗಳನ್ನು ಸಮರ್ಪಕವಾಗಿ ನಿರ್ವಹಿಸುವಂತಿದ್ದರೆ ಅದಕ್ಕೆ ಆರೋಗ್ಯಕರ ಆಹಾರ ಪದ್ಧತಿ ಎನ್ನಲಾಗುತ್ತದೆ.

ಮಾನವನ ಆರೋಗ್ಯ ಮತ್ತು ಪೌಷ್ಟಿಕ ಸ್ಥಿತಿಯು ಮುಖ್ಯವಾಗಿ ಅವನು ಸೇವಿಸುವ ಆಹಾರ ಪದ್ಧತಿ ಮತ್ತು ಪ್ರಮಾಣದ ಮೇಲೆ ಅವಲಂಬಿತವಾಗಿರುತ್ತದೆ. ಆಹಾರದ ಅವಶ್ಯಕತೆಯ ಪ್ರಮಾಣವು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿದ್ದು, ಅವರ ವಯಸ್ಸು, ಉದ್ಯೋಗ, ಲಿಂಗ, ವಾಸಿಸುವ ಪ್ರದೇಶ ಮುಂತಾದವುಗಳ ಮೇಲೆ ಅವಲಂಬಿತವಾಗಿರುತ್ತದೆ. ಭಾರತೀಯ ವೈದ್ಯಕೀಯ ಸಂಶೋಧನಾ ಮಂಡಳಿಯು ವ್ಯಕ್ತಿಯ ಆಹಾರದ ಅವಶ್ಯಕತೆಯ ಪ್ರಮಾಣದ ಕುರಿತು ಭಾರತೀಯರು ಸೇವಿಸಬೇಕಾದ ಆಹಾರ ಪ್ರಮಾಣವನ್ನು ಶಿಫಾರಸ್ಸು ಮಾಡಿದೆ.

ಪೌಷ್ಟಿಕ ಸ್ಥಿತಿಯನ್ನು ಅರಿಯಲು ಪ್ರತಿನಿತ್ಯ ಸೇವಿಸುವ ಆಹಾರದಿಂದ ದೊರಕುವ ಕ್ಯಾಲೊರಿಗಳ ಪ್ರಮಾಣವನ್ನು ಅಳೆಯುವುದು, ತೂಕ ಮತ್ತು ಎತ್ತರದ ಅನುಪಾತ (ಬಿ.ಎಂ.ಐ.) ಗುರುತಿಸುವುದು, ನ್ಯೂನ್ಯಪೋಷಣೆಗೊಳಗಾದ ಮಕ್ಕಳ ಸಂಖ್ಯೆ ಹಾಗೂ ಶಿಶು ಮರಣ ಸಂಖ್ಯೆ ಗುರುತಿಸುವುದು ಇವೇ ಮೊದಲಾದವುಗಳು ಪೌಷ್ಟಿಕ ಮಟ್ಟವನ್ನು ವೈಜ್ಞಾನಿಕ ರೀತಿಯಲ್ಲಿ ಗುರುತಿಸಲು ಸಹಕಾರಿಯಾದ ವಿಧಾನಗಳಾಗಿವೆ.

ನಮ್ಮ ದೇಶದಲ್ಲಿ ಶೇಕಡ 7.5ರಷ್ಟು ಜನರ ಆಹಾರ ಲಭ್ಯತೆಯ ಪ್ರಮಾಣವು ಅಸಮರ್ಪಕವಾಗಿದ್ದು. ಶೇಕಡ 15ರಷ್ಟು ಕುಟುಂಬಗಳಿಗೆ ವರ್ಷದ ಎಲ್ಲ ತಿಂಗಳುಗಳಲ್ಲಿ ದಿನದ ಎರಡು ಹೊತ್ತಿನ ಊಟವನ್ನು ಹೊಂದಿಸಲು ಸಾಧ್ಯವಾಗುತ್ತಿಲ್ಲ ಎಂದು ಭಾರತದ ಹಿಂದುಳಿದ 17 ಜಿಲ್ಲೆಗಳಲ್ಲಿನ ಪೌಷ್ಟಿಕ ಸ್ಥಿತಿ ಅಧ್ಯಯನದ ಸಮೀಕ್ಷೆಯ ವರದಿಯಲ್ಲಿ ಮಂಡಿಸಲಾಗಿದೆ (UNDP, 2008).

ನಮ್ಮ ದೇಶದ ಜನರ ಆಹಾರದಲ್ಲಿನ ಪ್ರಮುಖ ಭಾಗವಾದ ಏಕದಳ ಧಾನ್ಯಗಳ ಸೇವನೆ ಪ್ರಮಾಣವು 1970ರ ದಶಕದಿಂದ ಈಚೆಗೆ ಕಡಿಮೆಯಾಗುತ್ತಾ ಬಂದಿದೆ (ರಾಧಾಕೃಷ್ಣ ಮತ್ತಿತರರು 1997, ರಾವ್, 2000). 1970 ರಿಂದ 71 ರ ಅವಧಿಯ ಸೇವನೆ ಪ್ರಮಾಣವನ್ನು 97 ರಿಂದ 98ರಲ್ಲಿಯ ಸೇವನೆ ಪ್ರಮಾಣಕ್ಕೆ ಹೋಲಿಸಿದಾಗ ಗ್ರಾಮೀಣ ಪ್ರದೇಶದ ಜನತೆಯಲ್ಲಿ ಪ್ರತೀ ವರ್ಷ ಶೇಕಡ 0.72ರಷ್ಟು ಮತ್ತು ನಗರ ಪ್ರದೇಶದಲ್ಲಿ ಶೇಕಡ 0.74 ರಷ್ಟು ಕಡಿಮೆಯಾಗಿದೆ. 1970 ರಿಂದ 71ರ ದಶಕದಲ್ಲಿ ಪ್ರತಿಯೊಬ್ಬರು ಪ್ರತೀ ತಿಂಗಳು ಸೇವಿಸುವ ಆಹಾರ ಧಾನ್ಯಗಳ ಪ್ರಮಾಣವು 15.35 ಕಿಲೊ ಗ್ರಾಂ ಇದ್ದು, 1997 ರಿಂದ 98 ರ ಅವಧಿಯ ಅಧ್ಯಯನದ ವಿಶ್ಲೇಷಣೆಯಂತೆ ಗ್ರಾಮೀಣ ಪ್ರದೇಶದಲ್ಲಿ 12.5 ಕಿಲೊ ಗ್ರಾಂ ಮತ್ತು ನಗರ ಪ್ರದೇಶಗಳಲ್ಲಿ 11.36 ಕಿಲೊ ಗ್ರಾಂ ಆಗಿರುವುದನ್ನು National Sample Survey (2007) ವರದಿ ಮಾಡಿದೆ. ಆಹಾರ ಧಾನ್ಯಗಳ ಸೇವನೆ ಪ್ರಮಾಣವು ಕಡಿಮೆಯಾಗಲಿಕ್ಕೆ ಪ್ರಮುಖ ಕಾರಣ ಕುಟುಂಬಗಳ ಆದಾಯ ಹೆಚ್ಚಿದಂತೆ ಬೇರೆ ಆಹಾರ ಪದಾರ್ಥಗಳನ್ನು ಸೇವಿಸಲು ಹೆಚ್ಚು ಒಲವು ತೋರುತ್ತಿರುವುದು.

ಭಾರತ ದೇಶದಲ್ಲಿ ಆರ್ಥಿಕವಾಗಿ ಕೆಳದರ್ಜೆಲ್ಲಿರುವ ದೇಶದ ನಾಲ್ಕನೇ ಒಂದು ಭಾಗದಷ್ಟು ಜನರ ಕ್ಯಾಲೊರಿ ಸೇವನೆ ಪ್ರಮಾಣವು ಆರ್ಥಿಕವಾಗಿ ಮೇಲ್ದರ್ಜೆಯಲ್ಲಿರುವ ಜನರ ಕ್ಯಾಲೊರಿಗಳ ಸೇವನೆಯ ಪ್ರಮಾಣಕ್ಕಿಂತ ಶೇಕಡ 30 ರಿಂದ 40ರಷ್ಟು ಕಡಿಮೆ ಇದೆ ಎಂದು National Sample Survey Organization (NSSO, 2007) ವರದಿ ಮಾಡಿದೆ. ಅಲ್ಲದೆ, ಆರ್ಥಿಕವಾಗಿ ಕೆಳದರ್ಜೆಯಲ್ಲಿರುವ ಜನತೆಯು ಹಣ್ಣು, ತರಕಾರಿ ಮತ್ತು ಮಾಂಸ ಕೊಳ್ಳುವ ಸಾಮರ್ಥ್ಯ ಸಮರ್ಪಕವಾಗಿಲ್ಲದ ಕಾರಣ ಇವರು ಧಾನ್ಯಗಳಿಂದಲೇ ಮುಖ್ಯವಾಗಿ ಕ್ಯಾಲೊರಿಗಳನ್ನು ಪಡೆಯುತ್ತಾರೆ. ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ (ICMR) ಭಾರತೀಯ ಪ್ರಜೆಗೆ ಪ್ರತಿದಿನ 2425ಕಿಲೊ ಕ್ಯಾಲೊರಿಯಷ್ಟು ಶಕ್ತಿಯು ಬೇಕು ಎಂದು 1979ರಲ್ಲಿಯೇ ಶಿಫಾರಸ್ಸು ಮಾಡಿದೆ. 1987 ರಿಂದ 2004ರ ಅವಧಿಯ ಅಧ್ಯಯನದ ವರದಿಯಂತೆ ಭಾರತೀಯರು ಸೇವಿಸುತ್ತಿರುವ ಆಹಾರದಲ್ಲಿನ ಕ್ಯಾಲೊರಿಗಳ ಪ್ರಮಾಣವು ಆರ್ಥಿಕವಾಗಿ ಕೆಳದರ್ಜೆಯಲ್ಲಿರುವ ಜನರಲ್ಲಿ ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ (ICMR) ಶಿಫಾರಸ್ಸು ಮಾಡಿದ ಪ್ರಮಾಣಕ್ಕಿಂತ ಕಡಿಮೆ ಇದೆ. 1987 ರಿಂದ 88 ರಲ್ಲಿ ಕೈಗೊಂಡ ಅಧ್ಯಯನದ ವರದಿಯಂತೆ ಆಹಾರದಿಂದ ಲಭಿಸುವ ಕ್ಯಾಲೊರಿಗಳ ಪ್ರಮಾಣವು 1683 ಕಿಲೊ ಕ್ಯಾಲೊರಿ ಹಾಗೂ 2004ರ ಅಧ್ಯಯನದ ವರದಿಯಂತೆ 1624 ಕಿಲೊ ಕ್ಯಾಲೊರಿ ಇದೆ. ಅಂದರೆ ಕ್ಯಾಲೊರಿಗಳ ಸೇವನೆ ಪ್ರಮಾಣದಲ್ಲೂ ಸಹ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿರುವುದು ಇದರಿಂದ ತಿಳಿದುಬರುತ್ತದೆ. ಹಾಗಾಗಿ ಅವರ ಅಗತ್ಯದ ಕ್ಯಾಲೊರಿಯನ್ನು ಏಕದಳವಲ್ಲದ ಮೂಲದಿಂದ ಪಡೆಯುತ್ತಿರುತ್ತಾರೆ. ಈ ಬಗೆಯ ಅಧಿಕ ಕ್ಯಾಲೊರಿ ಹೊಂದಿದ ಆಹಾರಗಳು ಅಥವಾ ಸಂಸ್ಕರಿಸಿದ ಆಹಾರಗಳು ಈ ಸ್ಥಾನವನ್ನು ಆಕ್ರಮಿಸಿಕೊಂಡಿರಲು ಸಾಧ್ಯವಿದೆ.

ಆಹಾರ ಮತ್ತು ಕೃಷಿ ಸಂಸ್ಥೆಯು (FAO) ಇತ್ತೀಚೆಗೆ ಬಿಡುಗಡೆಗೊಳಿಸಿರುವ ಆಹಾರ ಉತ್ಪಾದನೆಯನ್ನು ಆಧರಿಸಿದ ಅಂಕಿ ಅಂಶಗಳ ಪ್ರಕಾರ ಭಾರತದ ಒಟ್ಟು 121 ಕೋಟಿ ಜನರಲ್ಲಿ ಸುಮಾರು 10 ಕೋಟಿ ಜನರು ಪ್ರತಿನಿತ್ಯ ರಾತ್ರಿ ಊಟ ಮಾಡದೆ ಉಪವಾಸ ಮಲಗುವವರಿದ್ದಾರೆ. ಹಾಗೆಯೇ ಸುಮಾರು 20ಕೋಟಿ ಜನ ಅರೆ ಹೊಟ್ಟೆ ಉಂಡು ಮಲಗುವವರಿದ್ದಾರೆ. ಒಂದಡೆ ಭಾರತ ಪ್ರಗತಿಪರ, ಸದೃಢ ರಾಷ್ಟ್ರ ಎಂಬುದಾಗಿ ವಿಶ್ವದ ಗಮನ ಸೆಳೆದಿರುವಾಗ ಆಹಾರ ಧಾನ್ಯಗಳ ಉತ್ಪಾದನೆ, ಬಡತನ ನಿರ್ಮೂಲನೆ ಮತ್ತು ಪರಿಸರ ಸಂರಕ್ಷಣೆಯ ವಿಷಯಗಳಲ್ಲಿ ಅಭದ್ರತೆಯತ್ತ ಸಾಗುತ್ತಿರುವುದು ಆತಂಕಕಾರಿ ಎಂದು ಲಕ್ಷ್ಮಣ (2011) ವರದಿ ಮಾಡಿದ್ದಾರೆ.

ಆರೋಗ್ಯಕರ ಸಮಾಜದ ನಿರ್ಮಾಣಕ್ಕೆ ಆಹಾರ ಭದ್ರತೆ ಎಷ್ಟು ಮುಖ್ಯವೋ ಹಾಗೆಯೇ ಪೌಷ್ಟಿಕ ಭದ್ರತೆ ಕೂಡ ಅಷ್ಟೇ ಮುಖ್ಯವಾಗಿದೆ. ಪೌಷ್ಟಿಕ ಭದ್ರತೆ ಎಂದರೆ ಸಾಕಷ್ಟು ಆಹಾರದ ಲಭ್ಯತೆಯ ಜತೆಗೆ ಸೇವಿಸುವ ಆಹಾರವು ದೇಹದ ಅಗತ್ಯಕ್ಕೆ ತಕ್ಕಂತೆ ವಿವಿಧ ಪೋಷಕಾಂಶಗಳ ಬೇಡಿಕೆಯನ್ನು ಪೂರೈಸುವಂತಿರಬೇಕು.

ಆರೋಗ್ಯಕರ ಜೀವನಕ್ಕೆ ಅಥವಾ ದೈನಂದಿನ ಕಾರ್ಯಚಟುವಟಿಕೆಗಳಿಗೆ ನೆರವಾಗಬಲ್ಲ ಆಹಾರದಿಂದ ನಮ್ಮ ದೇಹಕ್ಕೆ ಲಭ್ಯವಾಗುವ ಶಕ್ತಿಯ ಪ್ರಮಾಣವು 2425ಕ್ಯಾಲೊರಿ ಇರಬೇಕೆಂದು ಬಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ (ICMR) ಶಿಫಾರಸ್ಸು ಮಾಡಿದೆ. ಆದರೆ 1975ರಲ್ಲಿ ಕೈಗೊಂಡ ಅಧ್ಯಯನದಂತೆ ಪ್ರತಿಯೊಬ್ಬರಿಗೆ ಆಹಾರದಿಂದ ದೊರಕುವ ಶಕ್ತಿಯ ಪ್ರಮಾಣವು 2296 ಕ್ಯಾಲೊರಿ ಇದ್ದು ಇದರ ಪ್ರಮಾಣವು 1981ರ ವೇಳೆಗೆ 2409 ಮತ್ತು 1995ರಲ್ಲಿ 2122 ಆಗಿದ್ದು, ಒಟ್ಟಾರೆಯಾಗಿ ಶಿಫಾರಸ್ಸು ಮಾಡಿದ ಪ್ರಮಾಣದಷ್ಟು ಶಕ್ತಿಯನ್ನು ನೀಡುವಷ್ಟು ಆಹಾರವನ್ನು ಸೇವಿಸುತ್ತಿಲ್ಲ.

ದೇಹದ ಬೆಳವಣಿಗೆ ಹಾಗೂ ನಿರ್ವಹಣೆಗೆ ಅವಶ್ಯಕವಾದ ಪ್ರೋಟೀನ್ ನಮ್ಮ ದಿನನಿತ್ಯದ ಆಹಾರದಿಂದ ಕನಿಷ್ಠ 60 ಗ್ರಾಂ ದೊರೆಯಬೇಕು ಅಥವಾ ದೇಹದ ಪ್ರತಿ ಕಿಲೊ ಗ್ರಾಂ ತೂಕಕ್ಕೆ ಒಂದು ಗ್ರಾಂದಷ್ಟಿರಬೇಕೆಂದು ಭಾರತೀಯ ವೈದ್ಯಕೀಯ ಸಂಶೋಧನಾ ಪರಿಷತ್ (ICMR) ಹೇಳುತ್ತದೆ. 1975ರ ಅಧ್ಯಯನದ ವರದಿಯಂತೆ ಆಹಾರದ ಮೂಲಕ ದೊರೆಯುವ ಪ್ರೊಟೀನಿನ ಪ್ರಮಾಣವು 64 ಗ್ರಾಂ ನಷ್ಟಿತ್ತು. ಇದರ ಪ್ರಮಾಣವು 1995ರ ವೇಳೆಗೆ 56 ಗ್ರಾಂಗಳಷ್ಟಿದೆ.

ರಕ್ತದ ಕೆಂಪು ವರ್ಣಕ್ಕೆ ಕಾರಣವಾದ ಹಿಮೊಗ್ಲೋಬಿನ್ ಉತ್ಪಾದನೆಯಲ್ಲಿ ಪ್ರಮುಖ ಪಾತ್ರ ವಹಿಸುವ ಕಬ್ಬಿಣಾಂಶದ ಅವಶ್ಯಕತೆಯು ದಿನವೊದಕ್ಕೆ 28 ರಿಂದ 30 ಮಿಲಿ ಗ್ರಾಂ ಇರುತ್ತದೆ. ಆಹಾರದ ಮೂಲಕ ಸೇವಿಸುವ ಕಬ್ಬಿನಾಂಶದ ಪ್ರಮಾಣವು 1975ರ ಅವಧಿಯಲಿ 32 ಮಿಲಿ ಗ್ರಾಂ ಇದ್ದದ್ದು, 1995 ರ ವೇಳೆಗೆ ಇದರ ಪ್ರಮಾಣವು ಕಡಿಮೆಯಾಗಿದೆ (26ಮಿ. ಗ್ರಾಂ). ಆದರೆ 'ಎ' ಜೀವಸತ್ವದ ಸೇವನೆ ಪ್ರಮಾಣದಲ್ಲಿ ಸ್ವಲ್ಪ ಮಟ್ಟಿಗೆ ಏರಿಕೆಯಾಗಿರುವುದು ಅಧ್ಯಯನದಿಂದ ತಿಳಿದುಬಂದಿದೆ (1995ರಲ್ಲಿ 263ಮೈಕ್ರೋ ಗ್ರಾಂನಷ್ಟಿದ್ದ ಪ್ರಮಾಣವು 1995ರಲ್ಲಿ 288 ಮೈಕ್ರೋ ಗ್ರಾಂನಷ್ಟಾಗಿದೆ).

ಪೌಷ್ಟಿಕತೆಯು ನಮ್ಮ ಶರೀರದ ಎಲ್ಲಾ ಅಂಗಾಂಗಗಳು, ಜೀವಕೋಶಗಳು ತನ್ನ ಕಾರ್ಯವನ್ನು ಸರಿಯಾಗಿ ನಿರ್ವಹಿಸುವಂತೆ ಮಾಡುತ್ತದೆ. ಆದರೆ, ಅಪೌಷ್ಟಿಕತೆಯು ಶರೀರದ ಮೇಲೆ ಇದಕ್ಕೆ ವಿರುದ್ದವಾದ ಪರಿಣಾಮವನ್ನು ಬೀರುತ್ತದೆ. ಇದಕ್ಕೆ ಕಾರಣವೆಂದರೆ, ನಮ್ಮ ಶರೀರದ ರಚನೆಯು ನಾವು ತಿನ್ನುವ ಆಹಾರದ ಮೇಲೆ ಅವಲಂಬಿತವಾಗಿದೆ. ಇನ್ನೂ ಸರಳವಾಗಿ ಹೇಳುವುದಾದರೆ "ನಮ್ಮ ಆಹಾರ ಏನೋ ಅದು ನಾವು". ಯಾವ ಆಹಾರ ನಮ್ಮ ಆರೋಗ್ಯವನ್ನು ಕಾಪಾಡುವುದಿಲ್ಲವೋ ಅದು ಅಪೌಷ್ಟಿಕ ಆಹಾರ. ಅಪೌಷ್ಟಿಕತೆಯು ಅತಿಯಾದ ಆಹಾರ ಸೇವನೆಯಿಂದಲೂ, ಅತೀ ಕಡಿಮೆ ಆಹಾರ ಸೇವನೆಯಿಂದಲು ಬರುವಂತಹದ್ದು, ಅತಿಯಾದ ಆಹಾರ ಸೇವನೆಯಿಂದ ಬರುವ ಅಪೌಷ್ಟಿಕತೆಯು ಅತಿ ತೂಕ, ಬೊಜ್ಜು, ಡಯಾಬಿಟಿಸ್, ಹೃದ್ರೋಗ ಮುಂತಾದವುಗಳು. ಇವು ನಂತರ ಅಕಾಲಿಕ ಮರಣ ತಂದರೆ, ಅತೀ ಕಡಿಮೆ ಆಹಾರ ಸೇವನೆಯಿಂದ ಬರುವ ಅಪೌಷ್ಟಿಕತೆಯು ರಕ್ತಹೀನತೆ(ಅನೀಮಿಯಾ), ಅತಿಸಾರ, ಕುಂಠಿತ ಬೆಳವಣಿಗೆ ಮತ್ತು ಅಕಾಲಿಕ ಮರಣ ತರುತ್ತದೆ.

ಪೌಷ್ಟಿಕ ಆಹಾರಗಳ ಅಗತ್ಯ ನಮ್ಮ ಬದುಕಿನುದ್ದಕ್ಕೂ ಇದ್ದರೂ ಕೂಡಾ, ಅತಿ ಮುಖ್ಯವಾಗಿ ಗರ್ಭದಲ್ಲಿರುವ ಶಿಶುವಿಗೆ, ಆಗ ತಾನೆ ಜನಿಸಿದ ಮಗುವಿಗೆ, ಎಳೆಯ ಮಕ್ಕಳಿಗೆ, ಅತ್ಯಂತ ಮುಖ್ಯ ಈ ಹಂತದಲ್ಲಿ ಸರಿಯಾದ ಆಹಾರ ಕೊಡದಿದ್ದರೆ, ಬೆಳೆಯುತ್ತಿರುವ ಸೂಕ್ಷ್ಮ ದೇಹ ಆಹಾರವಿಲ್ಲದೆ ಅಪೌಷ್ಟಿಕತೆಯ ಆಘಾತವನ್ನು ತಡೆದುಕೊಳ್ಳಲು ಆಗದೆ ಅಕಾಲ ಮರಣವನ್ನಪ್ಪುತ್ತದೆ. ಹಾಗಾಗಿ ಬೆಳೆಯುವ ಈ ಹಂತದಲ್ಲಿ ಮಕ್ಕಳಿಗೆ ಪೌಷ್ಟಿಕ ಆಹಾರವನ್ನು ದಿನನಿತ್ಯ ಕೊಡಬೇಕಾಗುತ್ತದೆ. ಅತಿಯಾದ ಬಡತನ, ಅಜ್ಞಾನ, ಆಹಾರದ ಕೊರತೆ ಇವುಗಳು ಅಪೌಷ್ಟಿಕತೆಗೆ ಕಾರಣವಾಗಿದ್ದರೂ ಕೂಡಾ ಸರಿಯಾದ ಜ್ಞಾನ ಮತ್ತು ಕಾಳಜಿ ಇದ್ದಲ್ಲಿ ಈ ಸಮಸ್ಯೆಯನ್ನು ಚೆನ್ನಾಗಿಯೇ ನಿರ್ವಹಿಸಬಹುದು.

ಹೆಣ್ಣು ಮಕ್ಕಳ ಅಪೌಷ್ಟಿಕತೆ ಅಶಕ್ತ ಜನಾಂಗಕ್ಕೆ ದಾರಿ ಮಾಡಿಕೊಡುತ್ತದೆ. ಹಸಿವು ಹಾಗೂ ಅಪೌಷ್ಟಿಕತೆಯಿಂದ ಬಳಲುವ ತಾಯಿಗೆ ಹುಟ್ಟುವ ಮಕ್ಕಳಲ್ಲಿ ಶಿಶು ಮರಣ ಪ್ರಮಾಣ ಹೆಚ್ಚಿರುತ್ತದೆ. ಅಪೌಷ್ಟಿಕ ಶಿಶುಗಳು ಮತ್ತು ಹಸುಳೆಗಳ ಆರೋಗ್ಯ ಅತೀ ಸೂಕ್ಷ್ಮವಾಗಿರುತ್ತದೆ. ಅತಿಸಾರ, ನ್ಯುಮೋನಿಯಾ, ವಿಷಮಶೀತ ಜ್ವರ, ಗೊಬ್ಬರ (ಮೀಸೆಲ್ಸ್), ಮಲೇರಿಯಾದಂತಹ ತಡೆಗಟ್ಟಬಲ್ಲ ಕಾಯಿಲೆಗಳಿಂದಲೂ ಇಂತಹ ಮಕ್ಕಳು ಸಾವನ್ನಪ್ಪುತ್ತವೆ. ಭಾರತ ದೇಶದಲ್ಲಿ ಪ್ರತಿವರ್ಷ 21 ಲಕ್ಷ ಮಕ್ಕಳು 5 ವರ್ಷ ತಲುಪುವುದಕ್ಕಿಂತ ಮುನ್ನವೇ ಕಣ್ಣು ಮುಚ್ಚುತ್ತವೆ ಹಾಗೂ ಪ್ರತಿ ನಿತ್ಯ ಒಂದು ಸಾವಿರ ಮಕ್ಕಳು ಅತಿಸಾರದಿಂದ ಸಾಯುತ್ತಿದ್ದಾರೆ ಎಂದು ವಿಶ್ವಸಂಸ್ಥೆಯು ವರದಿ ಮಾಡಿದೆ.

ಬಡತನ ಹಾಗೂ ಬಡವರ ಬೆನ್ನಿಗೆ ಅಂಟಿಕೊಂಡುರುವ ಹಸಿವು ಅಪೌಷ್ಟಿಕತೆಯ ದಾರುಣ ಸ್ಥಿತಿ ಮಾತ್ರವಲ್ಲದೆ, ಶಿಶು ಮರಣ ಪ್ರಮಾಣದಲ್ಲೂ ನಮ್ಮ ದೇಶವು ಕರಾಳ ಸ್ಥಿತಿಯಲ್ಲಿ ಇದೆ. ಇಲ್ಲಿ ಹುಟ್ಟುವ ಪ್ರತಿ 1,000 ಮಕ್ಕಳಲ್ಲಿ 57 ಮಕ್ಕಳು ಒಂದು ವರ್ಷದ ಹುಟ್ಟು ಹಬ್ಬದೊಳಗೆ ಕಣ್ಣು ಮುಚ್ಚುತ್ತವೆ (ಮಾಲತಿ ಭಟ್, 2009).

ಅಮೇರಿಕಾ ಮೂಲದ ಅಂತರಾಷ್ಟ್ರೀಯ ಆಹಾರ ನೀತಿ ಸಂಶೋದನಾ ಸಂಸ್ಥೆಯು 2008ರಲ್ಲಿ ವಿಶ್ವ ಆಹಾರ ದಿನದ ಸಂದರ್ಭದಲ್ಲಿ ಬಿಡುಗಡೆ ಮಾಡಿದ 88 ದೇಶಗಳ ಜಾಗತಿಕ ಹಸಿವಿನ ಸೂಚ್ಯಂಕ ಪಟ್ಟಿಯಲ್ಲಿ ಭಾರತ 66ನೇ ಸ್ಥಾನದಲಿದೆ. ಸಮೃದ್ಧ ಆರ್ಥಿಕ ಅಭಿವೃದ್ಧಿಯ ನಂತರವೂ ಈ ಪಟ್ಟಿಯಲ್ಲಿ ಭಾರತವು ಆಫ್ರಿಕಾದ 25 ದೇಶಗಳಿಗಿಂತ ಕೆಳಗೆಯೇ ಇದೆ (ಮಾಲತಿ ಭಟ್, 2009).

ಹಸಿವಿನ ಬಗೆಗೆ ತಜ್ಞರು ಬಹಿರಂಗ ಪಡಿಸಿರುವ ಅಂಕಿ ಅಂಶಗಳ ಆಧಾರದ ಮೇಲೆ ಹೇಳುವುದಾದರೆ, ಪ್ರಪಂಚದಲ್ಲಿ ಇಂದು ಹೆಚ್ಚು ಜನರು ಸಾಯುತ್ತಿರುವುದು ಹಸಿವಿನಿಂದ, ಏಡ್ಸ್, ಕ್ಯಾನ್ಸರ್ ಮುಂತಾದ ಪ್ರಣಾಂತಿಕ ರೋಗಗಳಿಗೆ ಹಸಿವಿನ ನಂತರದ ಸ್ಥಾನ. ಅಂದರೆ ಹಸಿವು ಎಂಬುದನ್ನು ಒಂದು ರೋಗ ಎಂದೇ ಪರಿಗಣಿಸಬೇಕಾಗುತ್ತದೆ. ಇಂದು ಪ್ರಪಂಚದಲ್ಲಿ ಹಸಿವು ಎಂಬ ಭೀಕರ ರೋಗದಿಂದ ಬಳಲುತ್ತಿರುವವರ ಸಂಖ್ಯೆ 820 ದಶಲಕ್ಷದಷ್ಟಿದೆ. ಈ ಸಂಖ್ಯೆಯ ಮೂರನೇ ಒಂದು ಭಾಗದಷ್ಟು ಜನ ಭಾರತದಲ್ಲಿದ್ದಾರೆ. ನಮ್ಮ ದೇಶದಲ್ಲಿ 836 ದಶಲಕ್ಷ ಜನರು ದಿನವೊಂದಕ್ಕೆ

20 ರೂಪಾಯಿಗಿಂತ ಕಡಿಮೆ ಹಣವನ್ನು ಊಟಕ್ಕಾಗಿ ಖರ್ಚು ಮಾಡುತ್ತಾರೆ. ಅವರಿಗೆ ಹೊಟ್ಟೆ ತುಂಬಿಸಿಕೊಳ್ಳುವುದೇ ಚಿಂತೆ. ಅವರೆಂದೂ ಪೌಷ್ಟಿಕ ಆಹಾರದ ಬಗ್ಗೆ ಯೋಚಿಸುವಂತಿಲ್ಲ. ಇನ್ನು ಸುಮಾರು 200 ಮಿಲಿಯನ್ ಜನರು ಹಸಿವಿಗೆ ಸಂಬಂಧಿಸಿದ ಕಾಯಿಲೆಗಳಿಂದಾಗಿ ಸಾಯುತಿದ್ದಾರೆ (ಲಿಂಗದೇವರು ಹಳೆಮನೆ, 2009).

ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆಯಂತೆ ಭಾತರದ ಶೇಕಡ 40 ರಷ್ಟು ಮಕ್ಕಳು ಅಪೌಷ್ಟಿಕತೆಯಿಂದ ಬಳಲುತ್ತಿದ್ದಾರೆ. ಹಾಗೂ ಕಡಿಮೆ ತೂಕ ಹೊಂದಿದ್ದಾರೆ. ಅಪೌಷ್ಟಿಕತೆಗೆ ಸಂಬಂಧಿಸಿದಂತೆ UNICEF ಬಿಡುಗಡೆ ಮಾಡಿರುವ ಜಾಗತಿಕ ವರದಿ ಪ್ರಕಾರ ಭಾತರದಲ್ಲಿ 5.7 ಕೋಟಿ ಅಶಕ್ತ ಮಕ್ಕಳಿವೆ. ಇದು ವಿಶ್ವದಲೇ ಅತಿ ಹೆಚ್ಚು ಅಪೌಷ್ಟಿಕತೆ ಹೊಂದಿರುವ ರಾಷ್ಟ್ರವಾಗಿದೆ (ಮಾಲತಿ ಭಟ್, 2009).

ಆದಿವಾಸಿಗಳಲ್ಲಿ ಶೇಕಡ 40 ರಷ್ಟು ಮಕ್ಕಳಲ್ಲಿ ಪೌಷ್ಟಿಕಾಂಶದ ಕೊರತೆ ಇದೆ. ಶೇಕಡ 10ರಷ್ಟು ಮಕ್ಕಳು ಇದರಿಂದ ಸಾಯುತ್ತಾರೆ. ಆದಿವಾಸಿಗಳು ಪೌಷ್ಟಿಕಾಂಶದ ಕೊರತೆಯಿಂದ ಬಳಲುತ್ತಿರುವುದು ಖಚಿತವಾಗಿದೆ ಎಂದು ಡೀಡ್ ಸಂಸ್ಥೆ ನಿರ್ದೇಶಕ ಶ್ರೀಕಾಂತ (2009) ಹೇಳುತ್ತಾರೆ.

ವಿಶ್ವ ಆಹಾರ ಸಂಸ್ಥೆಯು 1974ರಲ್ಲಿ ನಡೆಸಿದ ವಿಶ್ವ ಆಹಾರ ಸಮ್ಮೇಳನದಲ್ಲಿ 1984ರವೇಳೆಗೆ "ವಿಶ್ವದ ಯಾವುದೇ ಭಾಗದಲ್ಲಾಗಲೀ ಅಥವಾ ದೇಶದಲ್ಲಾಗಲೀ ಜನತೆ ಹಸಿವಿನಿಂದ ಮುಕ್ತರಾಗಿ ನ್ಯೂನ್ಯ ಪೋಷಣೆಯಿಂದ ಸಂಪೂರ್ಣವಾಗಿ ಹೊರಬರಬೇಕು" ಎಂಬ ಠರಾವು ಮಾಡಿತ್ತು. ಇದಾಗಿ ಸುಮಾರು ವರ್ಷಗಳೇ ಕಳೆದಿದ್ದರೂ ಸಹ ವಿಶ್ವದಲ್ಲಿ ಪ್ರತಿದಿನ ಸುಮಾರು 700 ದಶಲಕ್ಷ ಜನರು ಆಹಾರವಿಲ್ಲದೇ ದಿನವನ್ನು ಕಳೆಯುತ್ತಿದ್ದಾರೆ. ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸುಮಾರು 800 ದಶಲಕ್ಷ ಜನರು ವಿವಿಧ ನ್ಯೂನ್ಯಪೋಷಣೆಗೆ ಒಳಗಾಗಿದ್ದಾರೆ. ಏಷ್ಯಾ ಖಂಡ ಒಂದರಲ್ಲಿಯೇ ಸುಮಾರು 200 ದಶಲಕ್ಷ ಮಕ್ಕಳು ನ್ಯೂನ್ಯಪೋಷಣೆಯಿಂದ ಬಳಲುತ್ತಿದ್ದಾರೆ. ವಿಶ್ವ ಬ್ಯಾಂಕಿನ ವಿಶ್ಲೇಷಣೆಯ ವರದಿಯಂತೆ ವಿಶ್ವದಲ್ಲಿ ಸುಮಾರು 740 ದಶಲಕ್ಷ ಜನರು ದೇಹದ ಅವಶ್ಯಕತೆ ನೀಗಿಸುವಷ್ಟು ಸಮರ್ಪಕ ಆಹಾರ ಕೊಂಡುಕೊಳ್ಳುವ ಸಾಮರ್ಥ್ಯವಿಲ್ಲದವರಾಗಿದ್ದು, ಇದರಿಂದಾಗಿ ಮುಖ್ಯವಾಗಿ ಮಕ್ಕಳಿಗೆ ಸರಿಯಾದ ಆಹಾರವಿಲ್ಲದೆ 340 ದಶಲಕ್ಷ ಮಕ್ಕಳು ಅವರ ವಯಸ್ಸಿಗೆ ತಕ್ಕನಾಗಿ ಬೆಳೆಯದೇ ಕುಂಠಿತ ಬೆಳವಣಿಗೆಗೆ ಒಳಗಾಗುತ್ತಿದ್ದಾರೆ ಎಂದು ವರದಿ ಮಾಡಿದೆ. ವಿಶ್ವದ ವಿವಿಧ ಭಾಗಗಳಲ್ಲಿ ಪ್ರತೀ ವರ್ಷ 13.5 ದಶಲಕ್ಷ ಮಕ್ಕಳಿಗೆ ಸಮರ್ಪಕ ಆಹಾರವಿಲ್ಲದೆ ನ್ಯೂನ್ಯ ಪೋಷಣೆಗೊಳಗಾಗಿ ಸಾವನ್ನಪ್ಪುತ್ತಿದ್ದಾರೆ ಎಂದಿದೆ.

"ಎಲ್ಲರಿಗೂ ಎಲ್ಲ ಕಾಲದಲ್ಲೂ ಆರೋಗ್ಯಕರ ಜೀವನ ನಡೆಸಲು ಬೇಕಾದ ಪೌಷ್ಟಿಕ ಆಹಾರದ ಲಭ್ಯತೆ/ದೊರಕುವಿಕೆ"ಗೆ ಆಹಾರ ಭದ್ರತೆ ಎನ್ನಲಾಗುತ್ತದೆ. ವೈಯಕ್ತಿಕ ನೆಲೆಯಲ್ಲಿ ಹೇಳುವುದಾದರೆ "ಸಮತೋಲನ ಆಹಾರ ಹಾಗೂ ಸೂಕ್ಷ್ಮಪೋಷಕಾಂಶಗಳ ಅವಶ್ಯಕತೆಯನ್ನು ಪೂರೈಸುವ ಆಹಾರ, ಶುದ್ಧ ಕುಡಿಯುವ ನೀರು, ಪ್ರಾಥಮಿಕ ಶಿಕ್ಷಣ ಮತ್ತು ವಸತಿಯ ಸೌಲಭ್ಯಗಳನ್ನು ಪಡೆಯಲು

ಆರ್ಥಿಕವಾಗಿ ಹಾಗೂ ಭೌತಿಕವಾಗಿ ಸಮರ್ಥರಾಗಿದ್ದರೆ ವ್ಯಕ್ತಿಗತವಾಗಿ ಆಹಾರ ಭದ್ರತೆ ದೊರೆತಂತಾಗುತ್ತದೆ.

ನಮ್ಮ ದೇಶದಲ್ಲಿ ಅನೇಕ ಶಾಲಾಪೂರ್ವ ಮಕ್ಕಳು ಸತತವಾಗಿ ಕಡಿಮೆ ಶರ್ಕರಪಿಷ್ಟ/ಶಕ್ತಿ ಹಾಗೂ ಪ್ರೊಟೀನ್ ಒದಗಿಸುವ ಆಹಾರ ಸೇವನೆಯಿಂದ ಶಕ್ತಿ ಮತ್ತು ಪ್ರೋಟೀನಿನ (Protein-Energy Malnutrition) ನ್ಯೂನ್ಯಪೋಷಣೆಗೆ ಒಳಗಾಗುತ್ತಿದ್ದಾರೆ. ದೇಶದಲ್ಲಿ ಶೇಕಡ 43.4ರಷ್ಟು ಮಕ್ಕಳು ಮಧ್ಯಮ ಗತಿಯ ಪ್ರೋಟೀನ್ ಮತ್ತು ಶಕ್ತಿಯ ನ್ಯೂನ್ಯಪೋಷಣೆಯಿಂದ ಹಾಗೂ ಶೇಕಡ 7.5 ರಷ್ಟು ಮಕ್ಕಳು ತೀವ್ರಗತಿಯ ಪ್ರೊಟೀನ್ ಮತ್ತು ಶಕ್ತಿಯ ನ್ಯೂನ್ಯಪೋಷಣೆಯಿಂದ ಬಳಲುತ್ತಿರುವುದಾಗಿ ಅಧ್ಯಯನದಿಂದ ತಿಳಿದುಬಂದಿದೆ. ಇದಲ್ಲದೆ, ಸೂಕ್ಷ್ಮಪೋಷಕಾಂಶಗಳಾದ ಕಬ್ಬಿಣಾಂಶ ಮತ್ತು ಅಯೋಡಿನ್ ಕೊರತೆಯಿಂದ ಉಂಟಾಗುವ ರಕ್ತಹೀನತೆ ಮತ್ತು ಗಳಗಂಡ ತೊಂದರೆಗೆ ಸಹ ಅನೇಕ ಜನತೆ ಅದರಲ್ಲಿಯೂ ಬಡ ಜನತೆ ಹೆಚ್ಚಾಗಿ ಈಡಾಗುತ್ತಿದ್ದಾರೆ. ನಮ್ಮ ದೇಶದ ವಿವಿಧ ಭಾಗಗಳಲ್ಲಿಯ 50 ರಿಂದ 80 ಪ್ರತಿಶತ ಜನರು ರಕ್ತಹೀನತೆಯಿಂದ ಬಳಲುವುದು ವಿಶ್ಲೇಷಣೆಯಿಂದ ತಿಳಿದುಬಂದಿದೆ. ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಅಧ್ಯಯನದ ಅಂಕಿಅಂಶದಂತೆ ದೇಶದಲ್ಲಿ ಶೇಕಡ 47ರಷ್ಟು ಗರ್ಭಿಣಿ ಮಹಿಳೆಯರು ಮಧ್ಯಮ ಮತ್ತು ತೀವ್ರಗತಿಯ ರಕ್ತಹೀನತೆಯಿಂದ ಬಳಲುತ್ತಿದ್ದಾರೆ. ಗರ್ಭಿಣಿಯರಲ್ಲಿ ರಕ್ತಹೀನತೆ ಮತ್ತು ಶಕ್ತಿ ಮತ್ತು ಪ್ರೊಟೀನ್ ಕೊರತೆಯ ನ್ಯೂನ್ಯಪೋಷಣೆಗಳು ಒಂದು ವರ್ಷದ ಒಳಗಿನ ಮಕ್ಕಳ ಮರಣಕ್ಕೆ ಪ್ರಮುಖ ಕಾರಣಗಳಾಗಿವೆ.

ದೇಶದ ಸುಮಾರು 145 ದಶಲಕ್ಷ ಜನರು ಅಯೋಡಿನ್ ಕಡಿಮೆ ಇರುವ ಪ್ರದೇಶದಲ್ಲಿ ವಾಸಿಸುತ್ತಿದ್ದು ಇವರಲ್ಲಿ 40 ದಶಲಕ್ಷ ಜನರು ಅಯೋಡಿನ್ ಕೊರತೆಯಿಂದುಟಾಗುವ ಗಳಗಂಡದಿಂದ ಬಳಲುತ್ತಿದ್ದಾರೆ. ನಮ್ಮ ದೇಶದ ವಿವಿಧ ಭಾಗಗಳಿಗೆ ಹೋಲಿಸಿದಾಗ ಅಯೋಡಿನ್ ಕೊರತೆಯ ಲಕ್ಷಣಗಳು ಅತೀ ಕಡಿಮೆ ಕಂಡುಬರುವ ಪ್ರದೇಶ ಅಸ್ಸಾಮ್ (1.5%) ಹಾಗೂ ಅತೀ ಹೆಚ್ಚು ಕಂಡುಬಂದಿರುವ ಪ್ರದೇಶ ಮಿಜೋರಾಮ್ (68.6%).

ಜೀವಸತ್ವ – ಎ ಕೊರತೆಯಿಂದಾಗಿ ನಮ್ಮ ದೇಶದಲ್ಲಿ ಪ್ರತಿ ವರ್ಷ ಏಳು ದಶಲಕ್ಷ ಮಕ್ಕಳು ಅಂಧತ್ವಕ್ಕೆ ಒಳಗಾಗುತ್ತಿದ್ದಾರೆ. ಇದು ಮುಖ್ಯವಾಗಿ ಆಹಾರದಲ್ಲಿ 'ಎ' ಜೀವಸತ್ವದ ಕೊರತೆಯೊಂದಿಗೆ ಪ್ರೊಟೀನ್ ಮತ್ತು ಶಕ್ತಿಯ ಕೊರತೆಯು ಇದಕ್ಕೆ ಮುಖ್ಯ ಕಾರಣ. ದೇಶದ ವಿವಿಧ ಭಾಗಗಳಲ್ಲಿನ ಶೇಕಡ 4.40 ರಿಂದ ಶೇಕಡ 34.10 ಮಕ್ಕಳು 'ಎ' ಜೀವಸತ್ವದ ಕೊರತೆಯಿಂದ ಬಳಲುತ್ತಿದ್ದಾರೆ.

ಅಸಮರ್ಪಕ ಹಾಗೂ ಅಸಮತೋಲನ ಆಹಾರ ಸೇವನೆ ನಮ್ಮ ದೇಶದಲ್ಲಿ ಕಂಡುಬರುವ ನ್ಯೂನ್ಯ ಪೋಷಣೆಗೆ ಪ್ರಮುಖ ಕಾರಣ ಇದಕ್ಕೆ ಪೂರಕವಾಗಿ ಬಡತನ, ಕೊಂಡುಕೊಳ್ಳುವ ಸಾಮರ್ಥ್ಯವಿಲ್ಲದಿರುವುದು, ಜನಸಂಖ್ಯೆಯಲ್ಲಿ ತೀವ್ರಗತಿಯ ಹೆಚ್ಚಳ, ಕಲುಷಿತ ವಾತಾವರಣದಲ್ಲಿ ವಾಸಿಸುವುದು, ಅನಕ್ಷರತೆ ಮುಂತಾದವುಗಳು ಪ್ರಮುಖ ಕಾರಣಗಳಾಗಿವೆ (ವಿಜಯಲಕ್ಷ್ಮಿ, 2002).

ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆಯು (National Family and Health Survey of India) 2005-06ರಲ್ಲಿ ಕೈಗೊಂಡ ಅಧ್ಯಯನದ ವರದಿಯಂತೆ ಭಾರತದಲ್ಲಿ ಶೇಕಡ 47ರಷ್ಟು ಮಕ್ಕಳು ನ್ಯೂನ್ಯಪೋಷಣೆಯಿಂದ, ಶೇಕಡ 75 ರಷ್ಟು ಮಕ್ಕಳು ಹಾಗೂ ಶೇಕಡ 50ಕ್ಕಿಂತ ಹೆಚ್ಚು ಮಹಿಳೆಯರು ರಕ್ತಹೀನತೆಯಿಂದ ಬಳಲುತ್ತಿದ್ದಾರೆ.

ಅಂತರ್‌ರಾಷ್ಟ್ರೀಯ ಆಹಾರ ನೀತಿ ಮತ್ತು ಸಂಶೋಧನಾ ಸಂಸ್ಥೆಯು (Inernational Food Policy Research Institute) ಪಟ್ಟಿ ಮಾಡಿದ ಹಸಿವಿನಿಂದ ಬಳಲುತ್ತಿರುವ 88 ರಾಷ್ಟ್ರಗಳ ಪೈಕಿ ಭಾರತ 66ನೇ ಸ್ಥಾನದಲ್ಲಿದೆ.

ರಾಯ್ (2008) ರವರು ಪಶ್ಚಿಮ ಬಂಗಾಳದಲ್ಲಿ ಕೈಗೊಂಡ ಅಧ್ಯಯನದಂತೆ ಅಲ್ಲಿನ ಒಟ್ಟು ಜನಸಂಖ್ಯೆಯ ಶೇಕಡ 3.5 ಪ್ರತಿಶತ ಜನರಿಗೆ ದಿನಕ್ಕೆ ಒಂದು ಹೊತ್ತಿನ ಊಟ ಸಿಗುವುದೇ ಕಷ್ಟವಾಗಿದೆ ಮತ್ತು ಶೇಕಡ 16.5 ರಷ್ಟು ಜನರಿಗೆ ವರ್ಷದ ಎಲ್ಲ ತಿಂಗಳುಗಳಲ್ಲಿ ಎರಡು ಹೊತ್ತಿನ ಊಟ ಸಿಗುವುದು ದುಸ್ತರವಾಗಿದೆ ಎಂದು ಮಂಡಿಸಿದ್ದಾರೆ.

ಡೆಟಾನ್ ಮತ್ತು ಡ್ರೆಜ್(2008) ರವರ ಅಧ್ಯಯನದಂತೆ ಭಾರತ ದೇಶವು ಆರ್ಥಿಕವಾಗಿ ಮುಂದುವರೆಯುತ್ತಿದ್ದರೂ ಸಹ ಕ್ಯಾಲೊರಿ, ಪ್ರೋಟೀನ್ ಸೇವನೆಯ ಪ್ರಮಾಣದಲ್ಲಿ ಇಳಿಮುಖವಾಗುತ್ತಿದೆ ಎಂದಿದೆ. ಪಟ್ನಾಯಕ್ ರವರ ವರದಿಯಂತೆ ಆರ್ಥಿಕವಾಗಿ ಕೆಳದರ್ಜೆಯಲ್ಲಿರುವ ಜನರ ಕ್ಯಾಲೊರಿ ಸೇವನೆಯ ಪ್ರಮಾಣವು 1977 ರಿಂದ 78ರಲ್ಲಿ 2170 ಕಿಲೊ ಕ್ಯಾಲೊರಿ ಇದ್ದರೆ, ತದನಂತರದ ಅವಧಿಯಲ್ಲಿ 1983ರಲ್ಲಿ 2060 ಕಿಲೊ ಕ್ಯಾಲೊರಿ, 1993 ರಿಂದ 1994ರಲ್ಲಿ 1980 ಕಿಲೊ ಕ್ಯಾಲೊರಿ ಹಾಗೂ 2004 ರಿಂದ 2005ರಲ್ಲಿ 1820 ಕಿಲೊ ಕ್ಯಾಲೊರಿ ಆಗಿದ್ದು ಒಟ್ಟಾರೆಯಾಗಿ ಕ್ಯಾಲೊರಿಗಳ ಸೇವನೆ ಪ್ರಮಾಣದಲ್ಲಿ ಇಳಿಮುಖವಾಗಿದೆ.

ದೇಹದ ಎತ್ತರಕ್ಕೆ ಅನುಗುಣವಾಗಿ ದೇಹದ ತೂಕ ಇರಬೇಕಾಗುತ್ತದೆ ಆಗ ಮಾತ್ರ ಅವರನ್ನು ಉತ್ತಮ ಪೌಷ್ಟಿಕ ಮಟ್ಟ ಹೊಂದಿದ್ದಾರೆ ಎಂದು ಹೇಳಬಹುದು. ದೇಶದ ಒಟ್ಟು ಜನಸಂಖ್ಯೆಯ ಶೇಕಡ 36ರಷ್ಟು ಜನರು ಕಡಿಮೆ ಬಿ.ಎಮ್.ಐ.(>18.5) ಹೊಂದಿದ್ದು (ಯೋಜನಾ ಆಯೋಗ, 2008) ಇದರಲ್ಲಿ ಹೆಣ್ಣುಮಕ್ಕಳ ಪಾಲು ಅಧಿಕವಾಗಿದೆ. 2004 ರಿಂದ 2005ರ ಸಾಲಿನಲ್ಲಿ ಶೇಕಡ 41.2ರಷ್ಟು ಗ್ರಾಮೀಣ ಭಾಗದ ಮಹಿಳೆಯರು ಮತ್ತು ಶೇಕಡ 22.7 ರಷ್ಟು ನಗರಪ್ರದೇಶದಲ್ಲಿ ವಾಸಿಸುವ ಮಹಿಳೆಯರು ಕಡಿಮೆ ಬಿ.ಎಮ್.ಐ.(>18.5) ಹೊಂದಿದ್ದಾರೆ (ಅರ್ನಾಲ್ಡ್, 2004). ಹೆಣ್ಣುಮಕ್ಕಳ ವಯಸ್ಸಿಗನುಗುಣವಾಗಿ ಬಿ.ಎಮ್.ಐ. ವರ್ಗೀಕರಿಸಿದಾಗ ವಯಸ್ಸಾಗುತ್ತಿದ್ದಂತೆ ಬಿ.ಎಮ್.ಐ. ಮಟ್ಟದಲ್ಲಿ ಸುಧಾರಣೆ ಕಂಡುಬಂದಿರುವುದಾಗಿ ಸಹ ಇವರ ಅಧ್ಯಯನ ತಿಳಿಸುತ್ತದೆ.

2005-06ರ ಸಾಲಿನ ರಾಷ್ಟ್ರೀಯ ಕೌಟುಂಬಿಕ ಆರೋಗ್ಯ ಸಮೀಕ್ಷೆಯ ವರದಿಯಂತೆ ಐದು ವರ್ಷದ ಒಳಗಿನ ಮಕ್ಕಳಲ್ಲಿ ಶೇಕಡ 43ರಷ್ಟು ಮಕ್ಕಳು ಅವರ ವಯಸ್ಸಿಗನುಗುಣವಾಗಿ ಕಡಿಮೆ ತೂಕ

ಹೊಂದಿರುವುದು ಮತ್ತು ಶೇಕಡ 16 ರಷ್ಟು ಮಕ್ಕಳು ಅತೀ ಕಡಿಮೆ ತೂಕ ಹೊಂದಿರುವುದು ತಿಳಿದುಬರುತ್ತದೆ.

ಕೊಬ್ಬು, ಹಾಲು, ಮೊಟ್ಟೆ ಮತ್ತು ಕಬ್ಬಿಣಾಂಶದ ಕೊರತೆ ಇರುವ ಆಹಾರವನ್ನು ಮಕ್ಕಳು ಸೇವಿಸುವುದರಿಂದ ವಿವಿಧ ತೆರನಾದ ಪೋಷಕಾಂಶಗಳ ಕೊರತೆಯಿಂದ ಮಕ್ಕಳು ಬಳಲುತ್ತಿದ್ದಾರೆ ಎಂದು ಯೋಜನಾ ಆಯೋಗ (2008) ವರದಿ ಮಾಡಿದೆ.

ಇತರೆ ದೇಶಗಳಿಗೆ ಹೋಲಿಸಿದರೆ ನಮ್ಮ ದೇಶದಲ್ಲಿ ಹೆಚ್ಚಾಗಿ ಕಂಡುಬರುವ ಮಕ್ಕಳ ನ್ಯೂನ್ಯ ಪೋಷಣೆಗೆ ಕಾರಣ ತಾಯಿಯ ಪೌಷ್ಟಿಕ ಮಟ್ಟ, ಶಿಶುಗಳ ಪಾಲನೆ ಮತ್ತು ಪೋಷಣೆಯ ವಿಧಾನ ಸಮರ್ಪಕವಾಗಿ ಇಲ್ಲದಿರುವದು, ಹೆಣ್ಣುಮಕ್ಕಳಿಗೆ ಬೇಗ ಮದುವೆ ಮಾಡುವುದು, ಗರ್ಭಿಣಿ ತಾಯಿಯ ತೂಕ ಕಡಿಮೆ ಇರುವುದು, ಶೈಕ್ಷಣಿಕ ಮಟ್ಟ ಕಡಿಮೆ ಇರುವುದು ಮುಂತಾದವುಗಳು ಮಕ್ಕಳ ನ್ಯೂನ್ಯ ಪೋಷಣೆಗೆ ಪ್ರಮುಖ ಕಾರಣಗಳೆನ್ನಬಹುದು. ನಮ್ಮ ದೇಶದಲ್ಲಿ ಹುಟ್ಟುವ ಪ್ರತಿ 10 ಮಕ್ಕಳಲ್ಲಿ ಮೂರು ಮಕ್ಕಳು ಕಡಿಮೆ ತೂಕ (<2.5ಕಿಲೋ ಗ್ರಾಂ) ಹೊಂದಿದ್ದು ಆರು ತಿಂಗಳಿನಿಂದ 35ತಿಂಗಳ ವಯೋಮಾನದ ಮಕ್ಕಳಲ್ಲಿ ಶೇಕಡ 74ರಷ್ಟು ಮಕ್ಕಳು ಕಡಿಮೆ ತೂಕ ಹೊಂದಿವೆ (NFHS-2005-06).

ದೇಶದ ಮೂರನೆಯ ಒಂದು ಭಾಗದಷ್ಟು ಹೆಣ್ಣುಮಕ್ಕಳು (15 ರಿಂದ 49 ವಯಸ್ಸು) ತೀವ್ರಗತಿಯ ಶಕ್ತಿಯ ಕೊರತೆ ಮತ್ತು ರಕ್ತಹೀನತೆಯಿಂದ ಬಳಲುತ್ತಿದ್ದು, ಇವರಲ್ಲಿ ಅದೂ ಗರ್ಭಿಣಿ ಸ್ತ್ರೀಯರಲ್ಲಿ ರಕ್ತಹೀನತೆಯ ಪ್ರಮಾಣ ಶೇಕಡ 59 ರಷ್ಟು ಇರುವುದಾಗಿ (NFHS-2005-06) ವರದಿ ಮಾಡಿದೆ.

ಪರಿಶಿಷ್ಟ ಬುಡಕಟ್ಟು ಕುಟುಂಬಗಳಲ್ಲಿ ಇತರ ಜನಾಂಗದ ಮಹಿಳೆಯರಿಗಿಂತ ಹೆಚ್ಚು ನ್ಯೂನ್ಯ ಪೋಷಣೆಗೆ ಒಳಗಾಗಿರುವುದನ್ನು ಕಾಣಬಹುದು. ಇವರಲ್ಲಿ 15 ರಿಂದ 49 ವಯಸ್ಸಿನ ಶೇಕಡ 47ರಷ್ಟು ಹೆಣ್ಣುಮಕ್ಕಳು ತೀವ್ರ ನ್ಯೂನ್ಯ ಪೋಷಣೆ ಹಾಗೂ ಶೇಕಡ 68 ರಷ್ಟು ಹೆಣ್ಣುಮಕ್ಕಳು ರಕ್ತಹೀನತೆಯಿಂದ ಬಳಲುತ್ತಿರುವುದು ವರದಿಯಾಗಿದೆ.

### 2.2 ಆಹಾರ ಭದ್ರತೆಯ ಯೋಜನೆಗಳು

ಮನುಷ್ಯ ತನ್ನ ಸಂಪೂರ್ಣ ಸಾಮರ್ಥ್ಯವನ್ನು ಬಳಕೆ ಮಾಡಲು ಅವಶ್ಯಕ ಶಕ್ತಿಯು ಪೂರೈಕೆಯಾಗಬೇಕು. ಇದು ಆಹಾರದಿಂದ ಮಾತ್ರ ಸಾಧ್ಯ. ಮಾನವನ ಅಭಿವೃದ್ಧಿಯ ಇತಿಹಾಸದಲ್ಲಿ ಸಮಸ್ಯೆಗಳು ಬೃಹತ್ತಾಗಿ ಅನುಭವಕ್ಕೆ ಬರತೊಡಗಿದ್ದು ಯುದ್ದ ಸಮಯದಲ್ಲಿ, ವಸಾಹತುಶಾಹಿಗಳ ಶೋಷಣೆಯಿಂದ ಮತ್ತು ನೈಸರ್ಗಿಕ ವಿಕೋಪಗಳಿಂದ ಸಮಸ್ಯೆಗಳಿಗೆ ಪರಿಹಾರ ಹುಡುಕುವ ಅರಿವು ಜಾಗೃತವಾದ ಮೇಲೆ ಉತ್ತರಗಳ ಹುಡುಕಾಟ ಆರಂಭವಾಗಿದೆ. ಈ ಹಿನ್ನೆಲೆಯಲ್ಲಿ ಅನೇಕ ಕಾರ್ಯಯೋಜನೆಗಳು ಆರಂಭಗೊಂಡವು. ಈ ಯೋಜನೆಗಳನ್ನು ಸುಸ್ಥಿರವಾಗಿ ಹಾಗೂ

ನಿರಾತಂಕವಾಗಿ ಸಾಧ್ಯಗೊಳಿಸುವ ನಿಟ್ಟಿನಲ್ಲಿ ಅವುಗಳನ್ನು ಪುನರ್ ವಿಮರ್ಶೆಗೆ ಒಳಪಡಿಸಲಾಯಿತು. ಈ ಪುನರ್ ವಿಮರ್ಶಗಳೇ ಇಂತಹ ಯೋಜನೆಗಳ ಅಧ್ಯಯನಗಳು.

ಸಮಸ್ಯೆಗಳ ಪರಿಹಾರದ ಹುಡುಕಾಟದಲ್ಲಿ ಪ್ರಮುಖವಾಗಿ ಆಹಾರದ ಒಟ್ಟು ಉತ್ಪಾದನೆಯನ್ನು ಬಳಕೆದಾರರ ನಡುವೆ ಹಂಚುವ ಆಲೋಚನೆಗಳು ಜಗತ್ತಿನಾದ್ಯಂತ ಹುಟ್ಟಿಕೊಂಡವು. ಇವುಗಳ ಜಾರಿಗೊಳಿಸಿದ, ಪುನರ್ ವಿಮರ್ಶಿಸಿದ ಹಲವಾರು ಅಧ್ಯಯನಗಳು ಕಾಣಬರುತ್ತವೆ. ಒಟ್ಟಾರೆ ಆಹಾರ ಭದ್ರತೆಯ ಗುರಿಯಲ್ಲಿ ಆಹಾರವನ್ನು ಪಡೆಯುವ ಸಾಧ್ಯತೆಗಳ ಜಾರಿಯಲ್ಲಿ ಪ್ರಯತ್ನಗಳು ನಡೆದಿವೆ. ಇವನ್ನು ಒಳಗೊಂಡ ಅಧ್ಯಯನಗಳನ್ನು ಪ್ರಸ್ತುತ ಭಾಗದಲ್ಲಿ ವಿವರಿಸಿದೆ.

### 2.2.1 ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆ

ಭಾರತ ದೇಶವು ತನ್ನ ಜನತೆಗೆ ಆಹಾರ ಭದ್ರತೆ ಒದಗಿಸುವ ನಿಟ್ಟಿನಲ್ಲಿ ಯೋಜಿಸಿದ ಕಾರ್ಯಕ್ರಮಗಳಲ್ಲಿ ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯು ಪ್ರಮುಖವಾದದ್ದು. ಈ ಕಾರ್ಯಕ್ರಮವು ನೇರವಾಗಿ ಜನರಿಗೆ ಆಹಾರವನ್ನು ತಲುಪಿಸುವುದರ ಮೂಲಕ ಹೆಚ್ಚು ಪಾಮುಖ್ಯತೆಯನ್ನು ಪಡೆದಿದೆ. ರೈತರು ಬೆಳೆದ ಬೆಳೆಯನ್ನು ಬೆಂಬಲ ಬೆಲೆಯಲ್ಲಿ ಖರೀದಿಸಿ ಆ ಮೂಲಕ ರೈತರ ಬೆಳೆಗೆ ಸೂಕ್ತ ಬೆಲೆ ಕೊಡುವುದರ ಮೂಲಕ ರೈತರ ಆರ್ಥಿಕ ಸ್ಥಿತಿ ಸುಧಾರಿಸುವುದು ಹಾಗೂ ಖರೀದಿಸಿದ ಆಹಾರ ಧಾನ್ಯವನ್ನು ಕಡಿಮೆ ಬೆಲೆಗೆ ಬಡ ಜನತೆಗೆ ವಿತರಿಸುವುದರ ಮೂಲಕ ಆಹಾರ ಭದ್ರತೆ ಒದಗಿಸುವ ಉದ್ದೇಶದೊಂದಿಗೆ ಕಾರ್ಯಪ್ರವೃತ್ತವಾಗಿದೆ. ನ್ಯಾಯ ಬೆಲೆ ಅಂಗಡಿಗಳ ಮೂಲಕ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲಿ ವಾಸಿಸುತ್ತಿರುವ ಜನತೆಗೆ ಕಡಿಮೆ ದರದಲ್ಲಿ ಆಹಾರ ಧಾನ್ಯವನ್ನು ವಿತರಿಸುವ ಕಾರ್ಯದಲ್ಲಿ ತೊಡಗಿದ್ದು, ದೇಶದಾದ್ಯಂತ ಒಟ್ಟು 460 ಸಾವಿರ ನ್ಯಾಯ ಬೆಲೆ ಅಂಗಡಿಗಳನ್ನು ಹೊಂದಿದೆ.

ಭಾರತ ದೇಶವು ಯುದ್ಧ ಸಮಯದಲ್ಲಿಯ ಆಹಾರದ ಅಭಾವವನ್ನು ನೀಗಿಸುವುದಕ್ಕೋಸ್ಕರವಾಗಿ 1939ನೇ ಇಸವಿಯಲ್ಲಿ ಪಡಿತರ ವ್ಯವಸ್ಥೆ ಜಾರಿಗೆ ತಂದಿತು. ಬ್ರಿಟೀಶ್ ಸರ್ಕಾರವು ಈ ಯೋಜನೆಯನ್ನು ಮಹಾರಾಷ್ಟ್ರದ ಬಾಂಬೆಯಲ್ಲಿ ಮೊಟ್ಟಮೊದಲು ಆರಂಭಿಸಿತು. ತದನಂತರ ದೇಶದ ಪ್ರಮುಖ ಆರು ನಗರಗಳಿಗೆ ವಿಸ್ತರಿಸಿತು. 1960–70ರ ದಶಕದಲ್ಲಿ ದೇಶವು ಎದುರಿಸಿದ ಬರ ಪರಿಸ್ಥಿತಿಯಿಂದಾಗಿ ಉಂಟಾದ ಆಹಾರದ ಅಭಾವವನ್ನು ತಡೆಗಟ್ಟಲು ಪಡಿತರ ವ್ಯವಸ್ಥೆಯನ್ನು ಸದೃಢಗೊಳಿಸಿ ಸಾರ್ವತ್ರಿಕಗೊಳಿಸುವುದು ಸರ್ಕಾರಕ್ಕೆ ಅವಶ್ಯಕತೆ ಎಂದೆನಿಸಿತು. ಆದ್ದರಿಂದ ದೇಶದ ಎಲ್ಲ ಭಾಗದ ಅವಶ್ಯಕತೆಯುಳ್ಳ ಜನತೆಗೆ ಆಹಾರ ಧಾನ್ಯವನ್ನು ಪೂರೈಸುವುದಕ್ಕಾಗಿ ಪಡಿತರ ವ್ಯವಸ್ಥೆಯನ್ನು ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯಾಗಿ 1970ರಲ್ಲಿ ಮರುರೂಪಿಸಲಾಯಿತು. ಆ ಮೂಲಕ ಪ್ರಮುಖ ನಗರಗಳನ್ನು ಮಾತ್ರ ಒಳಗೊಂಡಿದ್ದ ವ್ಯವಸ್ಥೆಯು ದೇಶದ ಎಲ್ಲ ಅವಶ್ಯಕ ಜನತೆಯನ್ನು ಒಳಗೊಳ್ಳುವ ಒಂದು ಬೃಹತ್ ಆಹಾರ ವಿತರಣೆ ಯೋಜನೆಯಾಗಿ ಕಾರ್ಯ ನಿರ್ವಹಿಸತೊಡಗಿತು. ಈ ವ್ಯವಸ್ಥೆ ಅಡಿಯಲ್ಲಿ ಕಡಿಮೆ ಬೆಲೆಗೆ ಅವಶ್ಯಕ ಆಹಾರ ಧಾನ್ಯಗಳನ್ನು ಒದಗಿಸುವ ಮೂಲಕ ಬಡತನವನ್ನು ನಿವಾರಿಸುವ ತಂತ್ರವಾಗಿಯೂ ಸಹ

ಯೋಜನೆಯು ಕಾರ್ಯನಿರ್ವಹಿಸುತ್ತಿದೆ. ಒಟ್ಟಾರೆಯಾಗಿ ಹೇಳುವುದಾದರೆ, 1939ರಲ್ಲಿ ಕೆಲವೇ ಕೆಲವು ನಗರಗಳಲ್ಲಿ ಆಹಾರವನ್ನು ಒದಗಿಸುವ ವ್ಯವಸ್ಥೆಯಾಗಿ ಆರಂಭಗೊಂಡ ಯೋಜನೆಯು ನಂತರ ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯಾಗಿ ಆ ನಂತರದ ಅವಧಿಯಲ್ಲಿ ಬಡ ಜನತೆಗೆ ಹೆಚ್ಚು ಪ್ರಯೋಜನವಾಗುವ ರೀತಿಯಲ್ಲಿ ಕಾರ್ಯೋನ್ಮುಖವಾಗಿದೆ.

ಯೋಜನೆ ಆರಂಭವಾದಾಗಿನಿಂದ 1970 ರವರೆಗೆ ಈ ಕಾರ್ಯಕ್ರಮವು ಆಹಾರ ಅಭಾವನ್ನು ಎದುರಿಸುತ್ತಿರುವ ಮತ್ತು ನಗರ ಪ್ರದೇಶಗಳಿಗೆ ಮಾತ್ರ ಸೀಮಿತವಾಗಿತ್ತು. ಯೋಜನೆಯ ಮಹತ್ವವನ್ನು ಅರಿತ ಸರ್ಕಾರವು 1980ರಲ್ಲಿ ಇದನ್ನು ಗ್ರಾಮೀಣ ಪ್ರದೇಶಗಳಿಗೂ ವಿಸ್ತರಿಸಿತು. ಅದರಲ್ಲಿಯೂ ಮೊದಲು ದಕ್ಷಿಣ ಭಾರತದ ರಾಜ್ಯಗಳಿಗೆ ವಿಸ್ತರಿಸಿ ತದನಂತರ ದೇಶದ ಎಲ್ಲ ರಾಜ್ಯಗಳಿಗೂ ವಿಸ್ತರಿಸಲಾಯಿತು. 1990ರ ದಶಕದ ವರೆಗೆ ದೇಶದ ಎಲ್ಲ ವರ್ಗದ ಜನತೆಗೂ ಏಕರೂಪದ ಕಾರ್ಯಕ್ರಮವಾಗಿದ್ದ ಯೋಜನೆಯನ್ನು 1997ರಲ್ಲಿ ಈ ಯೋಜನೆಯನ್ನು ಪರಿಷ್ಕರಿಸಿ ಪುನರ್ ರಚಿಸಿದ ಪಡಿತರ ಯೋಜನೆ (Revamped Public Distribution System) ಎಂದು ರೂಪಿಸಲಾಯಿತು. ಈ ಯೋಜನೆ ಅಡಿಯಲ್ಲಿ ದೇಶದ ಬಡ ಜನತೆಯನ್ನು ಗಮನದಲ್ಲಿ ಇಟ್ಟುಕೊಂಡು ಅದರಲ್ಲಿಯೂ ಬುಡಕಟ್ಟು ಹಾಗೂ ಬರಪೀಡಿತ ಪ್ರದೇಶಗಳ ಜನರಿಗೆ ಹೆಚ್ಚು ಆದ್ಯತೆ ನೀಡುವ ಮೂಲಕ ಒಟ್ಟಾರೆಯಾಗಿ ದೇಶದ ಅಶಕ್ತ ಜನಸಮುದಾಯಕ್ಕೆ ಇನ್ನೂ ಹೆಚ್ಚಿನ ರಿಯಾಯಿತಿ ದರದಲ್ಲಿ ಆಹಾರ ಧಾನ್ಯಗಳ ವಿತರಣೆಯನ್ನು ಜಾರಿಗೆ ತಂದಿತು (ವಿಜಯ, 2005).

ಸಾರ್ವಜನಿಕ ಆಹಾರ ವಿತರಣೆ ಯೋಜನೆಯು ಕೇಂದ್ರ ಮತ್ತು ರಾಜ್ಯ ಸರ್ಕಾರಗಳೆರಡೂ ಭಾಗಿಯಾಗಿ ನಡೆಸಿಕೊಂಡು ಬರುತ್ತಿರುವ ಯೋಜನೆಯಾಗಿದ್ದು, ಇದರಲ್ಲಿ ಕೇಂದ್ರ ಸರ್ಕಾರವು ರೈತರು ಬೆಳೆದ ಬೆಳೆಗೆ ಕನಿಷ್ಠ ಬೆಂಬಲ ಬೆಲೆ ನೀಡುವ ಮೂಲಕ ಬೆಲೆ ಸ್ಥಿರತೆಯನ್ನು ಕಾಪಾಡುವುದು, ರೈತರಿಂದ ಆಹಾರ ಧಾನ್ಯವನ್ನು ಖರೀದಿಸಿ ಸಂಗ್ರಹಿಸಿಡುವುದು, ನಂತರ ಎಲ್ಲ ರಾಜ್ಯಗಳಿಗೆ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಹಂಚುವುದು ಕೇಂದ್ರ ಸರ್ಕಾರದ ಜವಾಬ್ದಾರಿಯಾಗಿದೆ. ಭಾರತೀಯ ಆಹಾರ ನಿಗಮವು ಈ ಜವಾಬ್ಧಾರಿಯನ್ನು ನಿರ್ವಹಿಸುತ್ತಿದೆ. ಕೇಂದ್ರ ಸರ್ಕಾರದಿಂದ ಆಹಾರ ಧಾನ್ಯವನ್ನು ಪಡೆದು ನ್ಯಾಯ ಬೆಲೆ ಅಂಗಡಿಗಳ ಮೂಲಕ ಹಂಚುವುದು ರಾಜ್ಯ ಸರ್ಕಾರ ನಿಭಾಯಿಸುವ ಜವಾಬ್ದಾರಿಯಾಗಿದೆ.

ಸಾರ್ವಜನಿಕ ಆಹಾರ ವಿತರಣೆ ಯೋಜನೆಯ ಮೂಲಕ ಆಹಾರ ಹಂಚಿಕೆ, ಬಳಕೆ ಕುರಿತಂತೆ ಅನೇಕ ಅಧ್ಯಯನಗಳು ನಡೆದಿದ್ದು ಅಧ್ಯಯನಗಳ ವಿವರಗಳನ್ನು ಈ ಮುಂದೆ ಚರ್ಚಿಸಿದೆ.

ಸರ್ಕಾರವು ತನ್ನ ಜನತೆಗೆ ಆಹಾರ ಭದ್ರತೆಯನ್ನು ಒದಗಿಸುವ ಹಿನ್ನೆಲೆಯಲ್ಲಿ ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯು ಒಂದು ಪ್ರಮುಖ ಮಾಧ್ಯಮವಾಗಿ ಪರಿಣಮಿಸಿದೆ ಎಂದು ಝಾ ಮತ್ತು ಶ್ರೀನಿವಾಸನ್(2001) ಅಭಿಪ್ರಾಯಪಟ್ಟಿದ್ದಾರೆ.

ಭಾರತದಲ್ಲಿ ಸುಮಾರು 30,000 ಕೋಟಿ ರೂ. ಗಿಂತ ಹೆಚ್ಚು ಬೆಲೆಯ ಆಹಾರ ಪದಾರ್ಥಗಳನ್ನು 16 ಕೋಟಿ ಕುಟುಂಬಗಳಿಗೆ 4.62 ಲಕ್ಷ ನ್ಯಾಯ ಬೆಲೆ ಅಂಗಡಿಗಳ ಮೂಲಕ ಪೂರೈಸಲಾಗುತ್ತಿದೆ (ಸಕ್ಸೇನಾ, 2003).

2006-07 ನೇ ಸಾಲಿನಲ್ಲಿ ಭಾರತದಲ್ಲಿ ಒಟ್ಟು 31.6 ದಶಲಕ್ಷ ಟನ್ ಪ್ರಮಾಣದಷ್ಟು ಆಹಾರ ಧಾನ್ಯ (ಅಕ್ಕಿ ಮತ್ತು ಗೋಧಿ)ವನ್ನು ಪಡಿತರ ವ್ಯವಸ್ಥೆಯ ಮೂಲಕ ಹಾಗೂ 5.1 ದಶಲಕ್ಷ ಟನ್ ಆಹಾರ ಧಾನ್ಯವನ್ನು ಇತರೆ ಯೋಜನೆಗಳ ಮೂಲಕ ವಿತರಿಸಲಾಯಿತು (Government of India, 2008). 222.2 ದಶಲಕ್ಷ ಕುಟುಂಬಗಳು 0.48 ದಶಲಕ್ಷ ನ್ಯಾಯ ಬೆಲೆ ಅಂಗಡಿಗಳ ಮೂಲಕ ಆಹಾರ ಧಾನ್ಯವನ್ನು ಪಡೆಯುತ್ತಿದ್ದಾರೆ (ಮಧುರಾ ಸ್ವಾಮಿನಾಥನ್, 2008).

ಅಸ್ಸಾಂ, ಬಿಹಾರ್, ಹಿಮಾಚಲ ಪ್ರದೇಶ, ಜಮ್ಮು ಮತ್ತು ಕಾಶ್ಮೀರ್, ಪಂಜಾಬ್, ರಾಜಸ್ಥಾನ್ ಮತ್ತು ಉತ್ತರ ಪ್ರದೇಶದಲ್ಲಿನ ಶೇಕಡ 30ರಷ್ಟು ಪರಿಶಿಷ್ಟ ಜಾತಿಯ ಕುಟುಂಬಗಳು ಅಂತ್ಯೋದಯ ಅಥವಾ ಬಿ.ಪಿ.ಎಲ್. ಕಾರ್ಡನ್ನು ಪಡೆದಿದ್ದು ಉಳಿದ 70 ಪ್ರತಿಶತ ಕುಟುಂಬಗಳು ಪಡಿತರ ವ್ಯವಸ್ಥೆಯ ಯಾವುದೇ ಸೌಲಭ್ಯವನ್ನು ಪಡೆದಿರುವುದಿಲ್ಲ (National Sample Survey, 2007). ದೇಶದ ಎಲ್ಲ ರಾಜ್ಯಗಳನ್ನು ಗಣನೆಗೆ ತೆಗೆದುಕೊಂಡು ಹೇಳುವುದಾದರೆ, ಗ್ರಾಮೀಣ ಪ್ರದೇಶದಲ್ಲಿ ವಾಸಿಸುವ ಶೇಕಡ 60 ರಷ್ಟು ಪರಿಶಿಷ್ಟ ಜಾತಿಯ ಕುಟುಂಬಗಳು ಪಡಿತರ ವ್ಯವಸ್ಥೆಯ ಯಾವುದೇ ಸೌಲಭ್ಯವನ್ನು ಪಡೆಯದೇ ಹೊರಗುಳಿದಿದ್ದಾರೆ. ಪಡಿತರ ಯೋಜನೆ ಅಡಿಯಲ್ಲಿ ಪ್ರಸಕ್ತ ಜಾರಿಯಿರುವ ಅನೇಕ ಯೋಜನೆಗಳಲ್ಲಿ ಬಿ.ಪಿ.ಎಲ್. ಮತ್ತು ಅಂತ್ಯೋದಯ ಫಲಾನುಭವಿಗಳು ಹೆಚ್ಚು ಹೆಚ್ಚು ಧಾನ್ಯವನ್ನು ಪಡೆದು ಉಪಯೋಗಿಸುತ್ತಿದ್ದಾರೆ.

ಪಡಿತರ ಆಹಾರ ಹಂಚಿಕೆಯಲ್ಲಿ ದೇಶದ ಕೆಲವೊಂದು ರಾಜ್ಯಗಳಲ್ಲಿ ಗ್ರಾಮೀಣ ಪ್ರದೇಶಗಳಿಗಿಂತ ನಗರ ಪ್ರದೇಶಗಳ ಜನತೆಗೆ ಹೆಚ್ಚು ಪ್ರಯೋಜನವಾಗಿದೆ ಎಂದು ಸೂರ್ಯನಾರಾಯಣ(1996)ರವರು ಅಭಿಪ್ರಾಯ ಪಟ್ಟಿದ್ದಾರೆ.

ದೇಶದ ಶೇಕಡ 20ರಷ್ಟು ಬಡಕುಟುಂಬಗಳು ಸಾರ್ವಜನಿಕ ಆಹಾರ ವಿತರಣೆ ಯೋಜನೆಯಿಂದ ಆಹಾರ ಧಾನ್ಯವನ್ನು ಪಡೆಯುವುದು ತುಂಬಾ ವಿರಳವಾಗಿದೆ. ದೇಶದ ಬಹುತೇಕ ರಾಜ್ಯಗಳಲ್ಲಿ ಸರ್ಕಾರವು ಖರ್ಚುಮಾಡಿದ ಒಂದು ರೂಪಾಯಿಗೆ 22 ಪೈಸೆಯಷ್ಟು ಮಾತ್ರ ಬಡ ಜನತೆಯನ್ನು ತಲುಪುತ್ತಿರುವ ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯ ಫಲವು ದೇಶದ ಬಡಜನತೆಯನ್ನು ತಲುಪುವಲ್ಲಿ ವಿಫಲವಾಗಿದೆಯೆಂದು ಪಡಿತರ ವ್ಯವಸ್ಥೆ ಕುರಿತು ಅಧ್ಯಯನ ಕೈಗೊಂಡ ಪಾರಿಕ್(1994)ರವರು ಅಭಿಪ್ರಾಯಪಟ್ಟಿದ್ದಾರೆ.

ದೇಶದಲ್ಲಿಯ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಶೇಕಡ 57ರಷ್ಟು ಕುಟುಂಬಗಳಿಗೆ ಮಾತ್ರ ಪಡಿತರ ಯೋಜನೆಯ ಸೌಲಭ್ಯ ದೊರಕಿರುವುದಾಗಿ ಹಾಗೂ ಕೇಂದ್ರ ಸರ್ಕಾರದಿಂದ ಪಡೆದ

ಆಹಾರ ಧಾನ್ಯದಲ್ಲಿ ಶೇಕಡ 42 ರಷ್ಟು ಮಾತ್ರ ಗುರಿಪಡಿಸಿದ(TPDS) ಜನತೆಗೆ ತಲಪುತ್ತಿರುವುದಾಗಿ ಮಾರ್ಚ್ 2005ರ Programme Evaluation Organization, Planning Commission ವರದಿಯಿಂದ ತಿಳಿದುಬಂದಿದೆ.

ದೇಶದ ಕೆಲವೊಂದು ಪ್ರದೇಶಗಳಲ್ಲಿ ನ್ಯಾಯ ಬೆಲೆ ಅಂಗಡಿಗಳಿಗೆ ಅನಿಯಮಿತ ಆಹಾರ ಧಾನ್ಯಗಳ ಸರಬರಾಜು ಆ ಮೂಲಕ ನ್ಯಾಯ ಬೆಲೆ ಅಂಗಡಿಗಳಿಂದ ಗ್ರಾಹಕರಿಗೂ ಅನಿಯಮಿತ ಪೂರೈಕೆಯಾಗುತ್ತಿರುವುದನ್ನು ಹಾಗೂ ಕೇಂದ್ರದಿಂದ ಕಳಪೆ ಗುಣಮಟ್ಟದ ಆಹಾರ ಧಾನ್ಯದ ಸರಬರಾಜು ಇದರಿಂದಾಗಿ ಗ್ರಾಮೀಣ ಪ್ರದೇಶದ ನ್ಯಾಯ ಬೆಲೆ ಅಂಗಡಿಯವರು ಧಾನ್ಯವನ್ನು ಖರೀದಿಸದೇ ಇರುವುದನ್ನು Programme Evaluation Organization on Essential Supplies programme(1985) ತಿಳಿದಿದೆ.

ಒರಿಸ್ಸಾ ಮತ್ತು ಮಧ್ಯ ಪ್ರದೇಶದ ಬುಡಕಟ್ಟು ಸಮುದಾಯಗಳಲ್ಲಿಯ ಹಸಿವಿನಿಂದಾಗಿ ಸಂಭವಿಸುವ ಸಾವನ್ನು ಗಂಭೀರವಾಗಿ ಪರಿಗಣಿಸಿದ ಸರ್ಕಾರವು 1991ರಲ್ಲಿ ಪಡಿತರ ವ್ಯವಸ್ಥೆಯನ್ನು ಮತ್ತಷ್ಟು ವಿಸ್ತೃತಗೊಳಿಸಿ ಪ್ರಾದೇಶಿಕ ಅನುಸಂಧಾನ ಮಾರ್ಗದ (Regional approach) ಮೂಲಕ ಬೆಟ್ಟ ಗುಡ್ಡಗಾಡು ಪ್ರದೇಶಗಳಲ್ಲಿಯ 1750 ಬ್ಲಾಕ್‌ಗಳಲ್ಲಿ ಹೆಚ್ಚಾಗಿ ಬುಡಕಟ್ಟು ಹಾಗೂ ಬೆಟ್ಟಪ್ರದೇಶದಲ್ಲಿ ವಾಸಿಸುವರಿಗಾಗಿ ಆರಂಭಿಸಲಾಯಿತು.

ದೇಶದ ಎಲ್ಲ ಪ್ರದೇಶದ ಜನರಿಗೋಸ್ಕರ ಪರಿಷ್ಕರಿಸಿ ಜಾರಿಗೆ ತಂದ ಪಡಿತರ ವ್ಯವಸ್ಥೆಯು ಜನರ ವಾಸಸ್ಥಳಕ್ಕೆ ಹತ್ತಿರದಲ್ಲಿ ಒದಗಿಸಲು ಎಲ್ಲ ಪ್ರದೇಶಗಳಲ್ಲಿ ಸಾಧ್ಯವಾಗಿಲ್ಲ. ಮತ್ತು ಇಂತಹ ಪ್ರದೇಶಗಳ ನ್ಯಾಯ ಬೆಲೆ ಅಂಗಡಿಗಳು ಪಡಿತರವನ್ನು ಸಂಗ್ರಹಿಸಿಟ್ಟುಕೊಳ್ಳಲು ಸೂಕ್ತ ವ್ಯವಸ್ಥೆ ಇಲ್ಲದಿರುವುದು, ನಿಯಮಿತವಾಗಿ ಹಂಚಿಕೆ ಮಾಡದಿರುವುದು, ನ್ಯಾಯ ಬೆಲೆ ಅಂಗಡಿಗಳನ್ನು ತೆರೆಯುವ ಸಮಯ ಸೂಕ್ತವಿಲ್ಲದಿರುವುದು. ಪಡಿತರ ಧಾನ್ಯ ವಿತರಿಸುವಲ್ಲಿ ಯಾವುದೇ ಸಂಪ್ರದಾಯಿಕ ಆಹಾರಗಳಿಗೆ ಪ್ರಾಮುಖ್ಯತೆ ಕೊಡದೆ ಇರುವುದನ್ನು Programme Evaluation Organization(1995)ಪರಿಶೀಲನೆ ಸಮಿತಿ ಗುರುತಿಸಿದೆ.

ಪಡಿತರ ವ್ಯವಸ್ಥೆಯು 1992ರ ವರೆಗೆ ಎಲ್ಲ ವರ್ಗದ ಜನರಿಗೆ ಒಂದೇ ರೀತಿಯಾದ ಯೋಜನೆಯನ್ನು ಹೊಂದಿತ್ತು. ಅಲ್ಲದೆ, ದೇಶದ ಬಡಜನತೆಗೆ ಇದರ ಸದುಪಯೋಗ ಮುಟ್ಟಿಸುವಲ್ಲಿ ವಿಫಲವಾಗಿದೆಯೆಂದು ಮತ್ತು ಗ್ರಾಮೀಣ ಜನತೆಗಿಂತ ನಗರ ಪ್ರದೇಶಗಳಿಗೆ ಹೆಚ್ಚು ಸೀಮಿತವಾಗಿದ್ದಿತು. ಇದನ್ನು ಸರಿಪಡಿಸಲು 1997 ಜೂನ್ ತಿಂಗಳಲ್ಲಿ ಸಾರ್ವಜನಿಕ ಆಹಾರ ವ್ಯವಸ್ಥೇಯನ್ನು ಗುರಿಪಡಿಸಿದ ಪಡಿತರ ವಿತರಣೆ ವ್ಯವಸ್ಥೆಯಾಗಿ ಪರಿಷ್ಕರಿಸಲಾಯಿತು(Programme Evaluation Organization, Planning Commission March 2005, page 55).

ಬಿಹಾರದಲ್ಲಿ ನಗರ ಪ್ರದೇಶದ ಶೇಕಡ 100ರಷ್ಟು ಬಿ.ಪಿ.ಎಲ್. ಫಲಾನುಭವಿಗಳು ತಿಂಗಳಿಗೆ ನಿಗಧಿಪಡಿಸಿದಷ್ಟು ಧಾನ್ಯವನ್ನು ಪಡೆದರೆ ಗ್ರಾಮೀಣ ಪ್ರದೇಶದ ಕೇವಲ ಆರು ಪ್ರತಿಶತ ಜನರು ಮಾತ್ರ ಧಾನ್ಯವನ್ನು ಪಡೆದಿರುತ್ತಾರೆ. ಇವರು ಪಡಿತರ ಯೋಜನೆಯಿಂದ ಧಾನ್ಯವನ್ನು ಖರೀದಿಸದೇ ಇರುವುದಕ್ಕೆ ಕಾರಣ ಮಾರುಕಟ್ಟೆ ಮತ್ತು ಪಡಿತರ ವ್ಯವಸ್ಥೆಯಲ್ಲಿ ವಿತರಿಸುವ ಧಾನ್ಯದ ಬೆಲೆಯಲ್ಲಿ ಯಾವುದೇ ವ್ಯತ್ಯಾಸವಿಲ್ಲದಿರುವುದು, ಕಳಪೆ ಗುಣಮಟ್ಟದ ಧಾನ್ಯಗಳು, ಹಾಗೂ ಅನಿಯಮಿತ ವಿತರಣೆ ಎಂದು ಅದೇ ವರದಿ ತಿಳಿಸುತ್ತದೆ.

ಭಾರತೀಯ ಆಹಾರ ನಿಗಮದಲ್ಲಿ ಸಂಗ್ರಹಿಸಿದ 50 ಪ್ರತಿಶತ ಧಾನ್ಯವು ಎರಡು ವರ್ಷ ಹಳೆಯದು ಮತ್ತು 30 ಪ್ರತಿಶತ ಧಾನ್ಯವು ಎರಡರಿಂದ ನಾಲ್ಕು ವರ್ಷ ಹಳೆಯದು ಮತ್ತು ಕೆಲವೊಂದು ಆಹಾರ ಧಾನ್ಯ 16 ವರ್ಷದಷ್ಟು ಹಳೆಯದಾಗಿದೆ ಎಂದು ವಿಶ್ವ ಬ್ಯಾಂಕ್ (2005) ವರದಿಯಲ್ಲಿ ಮಂಡನೆಯಾಗಿದೆ.

### 2.2.2 ಸಮಗ್ರ ಶಿಶು ಅಭಿವೃದ್ಧಿ ಯೋಜನೆ

ಭಾರತವು ಮಕ್ಕಳ ಅಭಿವೃದ್ಧಿಯ ಹಿತದೃಷ್ಟಿಯಿಂದ ಮೊದಲನೆಯ ಪಂಚವಾರ್ಷಿಕ ಯೋಜನೆಯಿಂದ ಆರಂಭಗೊಂಡು ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಅದರಲ್ಲಿಯೂ ವಿಶೇಷವಾಗಿ ಆರೋಗ್ಯ, ಪೋಷಣೆ ಹಾಗೂ ಶಿಕ್ಷಣ ಕುರಿತಾದ ಕಾರ್ಯಕ್ರಮಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿದೆ. ಇಷ್ಟೆಲ್ಲಾ ಕಾರ್ಯಕ್ರಮಗಳು ಜಾರಿಗೆ ಬಂದರೂ ಕೂಡ ಮಕ್ಕಳಲ್ಲಿ ವಿವಿಧ ಪೌಷ್ಟಿಕ ಮತ್ತು ಆರೋಗ್ಯ ಸಂಬಂಧಿತ ತೊಂದರೆಗಳನ್ನು ನಿವಾರಿಸಲು ಸಾಧ್ಯವಾಗಿಲ್ಲ. ಆರೋಗ್ಯ, ಪೌಷ್ಟಿಕತೆ, ಆಹಾರ ಮತ್ತು ಶಿಕ್ಷಣ ಒಂದಕ್ಕೊಂದು ಪೂರಕವಾದವುಗಳಾಗಿವೆ. ಆದ್ದರಿಂದ ಈ ಎಲ್ಲ ಸಮಸ್ಯೆಗಳಿಗೆ ಪರಿಹಾರಕ್ಕಾಗಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಯಿತು. ಪ್ರಥಮವಾಗಿ ಈ ಯೋಜನೆಯು 1975 ಅಕ್ಟೋಬರ್ ಎರಡರಂದು ವಿಶ್ವ ಬ್ಯಾಂಕ್ ನೆರವಿನೊಂದಿಗೆ ಪ್ರಾರಂಭವಾಯಿತು. ಆರಂಭಿಕ ಹಂತದಲ್ಲಿ ಈ ಯೋಜನೆಯನ್ನು ಬರಗಾಲ ಪೀಡಿತ ಪ್ರದೇಶ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುವ ದೇಶದ ಒಟ್ಟು 33 ಬ್ಲಾಕ್‌ಗಳಲ್ಲಿ ಆರಂಭಿಸಲಾಯಿತು. ನಂತರದ 20 ವರ್ಷಗಳ ಅವಧಿಯಲ್ಲಿ ದೇಶದ ಎಲ್ಲ ಭಾಗಗಳಿಗೂ ವಿಸ್ತರಿಸಲಾಯಿತು.

ಕರ್ನಾಟಕದಲ್ಲಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು 1975 ಅಕ್ಟೋಬರ್ ಎರಡರಂದು ಮೈಸೂರು ಜಿಲ್ಲೆಯ ಟಿ. ನರಸೀಪುರ ತಾಲ್ಲೂಕಿನಲ್ಲಿ ಪ್ರಾಯೋಗಿಕವಾಗಿ ಆರಂಭಗೊಂಡಿತು. ಪ್ರಾರಂಭಿಕ ಹಂತದಲ್ಲಿ 100 ಅಂಗನವಾಡಿ ಕೇಂದ್ರದೊಂದಿಗೆ ಆರಂಭಿಸಲಾದ ಯೋಜನೆಯು ಇಂದು ರಾಜ್ಯಾದ್ಯಂತ ಒಟ್ಟು 45,940 ಕೇಂದ್ರಗಳನ್ನು ಹೊಂದಿದೆ (ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, 2010).

ನಮ್ಮ ದೇಶದಲ್ಲಿ ಒಟ್ಟು 13.9 ದಶಲಕ್ಷ ಮಕ್ಕಳು 1745 (ಗ್ರಾಮೀಣ ಪ್ರದೇಶ), 716 (ಬುಡಕಟ್ಟು ಜನರು ವಾಸಿಸುವ ಪ್ರದೇಶ) ಹಾಗೂ 235 (ನಗರ ಪ್ರದೇಶ) ಸಮಗ್ರ ಶಿಶು ಅಭಿವೃದ್ಧಿ ಯೋಜನೆಗಳ ಮೂಲಕ ಪೂರಕ ಪೌಷ್ಟಿಕ ಆಹಾರವನ್ನು ಪಡೆಯುತ್ತಿದ್ದಾರೆ. ಈ ಪ್ರದೇಶದಲ್ಲಿನ ಮಕ್ಕಳಲ್ಲಿ ಎರಡು ಹಾಗೂ ನಾಲ್ಕನೇ ದರ್ಜೆಯ ನ್ಯೂನ್ಯ ಪೋಷಣೆ ಪ್ರಮಾಣವು ಕಡಿಮೆ ಇರುವುದು ಕಂಡುಬಂದಿದೆ. ಅಲ್ಲದೆ, ಯೋಜನೆ ವ್ಯಾಪ್ತಿಯಲ್ಲಿ ನಾರ್ಮಲ್/ಆರೋಗ್ಯವಂತ ಮಕ್ಕಳ ಪ್ರಮಾಣವು ಹುಟ್ಟಿದ ಮಕ್ಕಳಿಂದ ಹಿಡಿದು ಮೂರು ವರ್ಷದ ಒಳಗಿನ ಮಕ್ಕಳಲ್ಲಿ ಶೇಕಡ 6.8ರಷ್ಟು ಹಾಗೂ 3–6 ವರ್ಷದ ಮಕ್ಕಳಲ್ಲಿ ಶೇಕಡ 4.0ರಷ್ಟು ಹೆಚ್ಚಿರುವುದು ಶರ್ಮಾ ಮತ್ತು ಗುಪ್ತಾ (1993) ರವರ ಅಧ್ಯಯನದಿಂದ ದೃಢಪಟ್ಟಿದೆ. ಕಡಿಮೆ ಜನನ ತೂಕ ಹೊಂದಿ ಹುಟ್ಟುವ ಮಕ್ಕಳ ಸಂಖ್ಯೆಯನ್ನು ನಿಯಂತ್ರಿಸಲು ಗರ್ಭಿಣಿಯರಿಗೆ ಪೂರಕ ಪೌಷ್ಟಿಕ ಆಹಾರ ವಿತರಿಸುವ ಕಾರ್ಯಕ್ರಮವನ್ನು ಸಹ ಆರಂಭಿಸಿದ್ದು ಸದರಿ ಕಾರ್ಯಕ್ರಮದ ಜಾರಿಯಿಂದಾಗಿ ನ್ಯೂನ್ಯಪೋಷಣೆ ಪ್ರಮಾಣದಲ್ಲಿ ಕಡಿಮೆಯಾಗಿದ್ದರೂ ಸಹ ತೀವ್ರ ನ್ಯೂನ್ಯ ಪೋಷಣೆಯಿಂದ ಬಳಲುವವರ ಪ್ರಮಾಣದಲ್ಲಿ ಯಾವುದೇ ಬದಲಾವಣೆ ಕಂಡುಬಂದಿಲ್ಲ.

ಪೂರಕ ಪೌಷ್ಟಿಕ ಆಹಾರದೊಂದಿಗೆ, ಆರೋಗ್ಯ ತಪಾಸಣೆ, ರೋಗನಿರೋಧಕ ಚುಚ್ಚುಮದ್ದು, ನ್ಯೂನ್ಯಪೋಷಣೆ ಗುರುತಿಸುವುದು, ವಾಂತಿ–ಭೇದಿ ಹಾಗೂ ಜಂತುಹುಳು ಬಾಧೆಗೆ ಪ್ರಾಥಮಿಕ ಚಿಕಿತ್ಸೆ ನೀಡುವ ಸೌಲಭ್ಯಗಳನ್ನು ಒಳಗೊಂಡಿರುವುದರಿಂದ ಸಮಗ್ರ ಶಿಶು ಅಭಿವೃದ್ಧಿ ಯೋಜನೆ ವ್ಯಾಪ್ತಿಗೆ ಒಳಪಡುವ ಮಕ್ಕಳ ಆರೋಗ್ಯ ಸುಧಾರಣೆಗೆ ಸಹಕಾರಿಯಾಗಿವೆ ಎಂದು ಕಪಿಲ್ ಮತ್ತು ಪ್ರಧಾನ್(1999) ರವರು ಅಭಿಪ್ರಾಯ ಪಟ್ಟಿದ್ದಾರೆ. ಇದರ ಫಲವಾಗಿ ರಾಷ್ಟ್ರೀಯ ಮಟ್ಟದಲ್ಲಿನ ಶಿಶುಗಳ ಸಾವಿನ ಸಂಖ್ಯೆಗಿಂತ ಯೋಜನೆ ವ್ಯಾಪ್ತಿ ಪ್ರದೇಶದಲ್ಲಿ ಶಿಶುಗಳ ಸಾವಿನ ಸಂಖ್ಯೆಯು ಕಡಿಮೆ ಇರುವುದು ಕಂಡುಬಂದಿದೆ.

ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ವ್ಯಾಪ್ತಿಗೆ ಒಳಪಡದ ಹಳ್ಳಿಗಳಿಗಿಂತ ಸಮಗ್ರ ಶಿಶು ಅಭಿವೃದ್ಧಿ ಯೋಜನೆಗೆ ಒಳಪಟ್ಟ ಹಳ್ಳಿಗಳಲ್ಲಿನ ಗರ್ಭಿಣಿ ಸ್ತ್ರೀಯರ ತೂಕದಲ್ಲಿನ ಹೆಚ್ಚಳ ಮತ್ತು ಮಕ್ಕಳ ಜನನ ತೂಕವು ಹೆಚ್ಚಾಗಿರುವುದು ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಪರಿಣಾಮದ ಕುರಿತು ವಾರಣಾಸಿಯ  ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ವ್ಯಾಪ್ತಿಯಲ್ಲಿ ಬರುವ 28 ಪ್ರದೇಶಗಳನ್ನು ಹಾಗೂ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ವ್ಯಾಪ್ತಿಗೆ ಒಳಪಡದ 21 ಪ್ರದೇಶಗಳಲ್ಲಿ ಅಗರ್ ವಾಲ್ ಮತ್ತಿತರರು (2000) ಕೈಗೊಂಡ ಅಧ್ಯಯನದಿಂದ ತಿಳಿದುಬಂದಿದೆ. ಸಮಗ್ರ ಶಿಶು ಅಭಿವೃದ್ಧಿ ಯೋಜನೆ ವ್ಯಾಪ್ತಿಗೊಳಪಟ್ಟ ಪ್ರದೇಶದಲ್ಲಿ ಕಡಿಮೆ ಜನನ ತೂಕ ಹೊಂದಿ ಹುಟ್ಟುವ ಶಿಶುಗಳ ಸಂಖ್ಯೆಯು ಶೇಕಡ 14.4 ರಷ್ಟಿದ್ದರೆ, ಸಮಗ್ರ ಶಿಶು ಅಭಿವೃದ್ಧಿ ಯೋಜನೆಗೆ ಒಳಪಡದ ಹಳ್ಳಿಗಳಲ್ಲಿ ಕಡಿಮೆ ಜನನ ತೂಕ ಹೊಂದಿ ಜನಿಸುವ ಶಿಶುಗಳ ಸಂಖ್ಯೆಯು 20.4 ಪ್ರತಿಶತದಷ್ಟಿದೆ. ಯೋಜನೆಯ ವ್ಯಾಪ್ತಿಗೊಳಪಟ್ಟ ಪ್ರದೇಶದಲ್ಲಿ ಅವಧಿಗೆ ಮುಂಚಿತವಾಗಿ ಹೆರಿಗೆಯಾಗುವವರ ಸಂಖ್ಯೆಯು ಶೇಕಡ 2.4ರಷ್ಟಿದ್ದರೆ, ಯೋಜನೆಯ ವ್ಯಾಪ್ತಿಗೊಳಪಡದ ಪ್ರದೇಶದಲ್ಲಿ 4.3ಪ್ರತಿಶತದಷ್ಟಿದೆ. ಸಮಗ್ರ.ಶಿಶುಅಭಿವೃದ್ಧಿ ಯೋಜನೆಯಲ್ಲಿ ವಿತರಿಸುವ ಪೂರಕ ಪೌಷ್ಟಿಕ

ಆಹಾರದಿಂದ ಸ್ವಲ್ಪ ಮಟ್ಟಿಗಾದರೂ ಗರ್ಭಿಣಿ ಸ್ತ್ರೀಯರಿಗೆ ಪ್ರಯೋಜನವಾಗಿದೆ ಎಂದು ಅಧ್ಯಯನಕಾರರು ಅಭಿಪ್ರಾಯ ಪಟ್ಟಿದ್ದಾರೆ.

ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ವ್ಯಾಪ್ತಿಗೆ ಒಳಪಡುವ ಮಕ್ಕಳ ನ್ಯೂನ್ಯ ಪೋಷಣೆ ಪ್ರಮಾಣವು ಸಮಗ್ರ ಶಿಶು ಅಭಿವೃದ್ಧಿ ಯೋಜನೆಗೆ ಒಳಪಡದ ಪ್ರದೇಶದ ಮಕ್ಕಳಿಗಿಂತ ಕಡಿಮೆ ಇರುವುದು ಟಂಡನ್(1989)ರವರು ಕೈಗೊಂಡ ಅಧ್ಯಯನದಿಂದ ತಿಳಿದುಬಂದಿದೆ. ಇದಕ್ಕೆ ಪೂರಕ ಪೌಷ್ಟಿಕ ಆಹಾರದೊಂದಿಗೆ ಪ್ರಾಥಮಿಕ ಆರೋಗ್ಯ ಸೇವೆಯ ಸೌಲಭ್ಯ, ಪೌಷ್ಟಿಕತೆ ಹಾಗೂ ಆರೋಗ್ಯ ಶಿಕ್ಷಣ ನೀಡುವುದರಿಂದ ನ್ಯೂನ್ಯ ಪೋಷಣೆ ಪ್ರಮಾಣವನ್ನು ಕಡಿಮೆ ಮಾಡಲು ಸಾಧ್ಯವಾಗಿದೆ ಎಂದು ಶಿಶು ಅಭಿವೃದ್ಧಿ ಯೋಜನೆ ಆರಂಭವಾಗಿ ಎಂಟು ವರ್ಷದ ನಂತರ ಮಕ್ಕಳ ಪೌಷ್ಟಿಕತೆಯ ಮೇಲಾದ ಪರಿಣಾಮದ ಕುರಿತು ಅಧ್ಯಯನ ಕೈಗೊಂಡ ಟಂಡನ್‌ರವರು ಅಭಿಪ್ರಾಯ ಪಟ್ಟಿದ್ದಾರೆ.

ಉತ್ತರಪ್ರದೇಶದ ಅಲಹಾಬಾದ್ ನಗರದ ಅಂಗನವಾಡಿ ಕೇಂದ್ರಗಳಿಗೆ ಹಾಜರಾಗುವ ಮಕ್ಕಳ ಪೌಷ್ಟಿಕ ಸ್ಥಿತಿ ಕುರಿತ ಅಧ್ಯಯನವು ಪ್ರಸ್ತುತ ಪಡಿಸಿದಂತೆ, ಶೇಕಡ 36.6ರಷ್ಟು ಮಕ್ಕಳು ಅವರ ವಯಸ್ಸಿಗೆ ಇರಬೇಕಾದ ತೂಕಕ್ಕಿಂತ ಕಡಿಮೆ ತೂಕ ಹೊಂದಿರುವುದು ಹಾಗೂ ಶೇಕಡ 51.6 ರಷ್ಟು ಮಕ್ಕಳು ಅವರ ವಯಸ್ಸಿಗೆ ತಕ್ಕ ಎತ್ತರಕ್ಕಿಂತ ಕಡಿಮೆ ಇರುವುದು ಕಂಡುಬಂದಿದೆ. ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು ಮಕ್ಕಳ ಪೌಷ್ಟಿಕ ಸ್ಥಿತಿಯನ್ನು ಸಂಪೂರ್ಣವಾಗಿ ಸುಧಾರಿಸಲು ವಿಫಲವಾಗಿದೆ ಎಂದು ಅಧ್ಯಯನಕಾರರು ಅಭಿಪ್ರಾಯ ಪಟ್ಟಿದ್ದಾರೆ.

ಜಮ್ಮು ಮತ್ತು ಕಾಶ್ಮೀರ್ ರಾಜ್ಯದ ಜಮ್ಮು ನಗರದಲ್ಲಿಯ ರೇಷಮ್ ಘರ್ ಕಾಲೋನಿಯಲ್ಲಿಯ ಅಂಗನವಾಡಿ ಮಕ್ಕಳ ಪೌಷ್ಟಿಕ ಸ್ಥಿತಿ ಕುರಿತು ವೈಯಿದ್ ಮತ್ತು ವೈಯಿದ್ (2005) ರವರು ಅಧ್ಯಯನ ಕೈಗೊಂಡಿರುತ್ತಾರೆ. ಇವರು ಅಧ್ಯಯನ ಕೈಗೊಂಡ ಎಲ್ಲ ಅಂಗನವಾಡಿ ಕೇಂದ್ರಗಳಲ್ಲಿ ದಾಖಲಾದ ಮಕ್ಕಳು, ಗರ್ಭಿಣಿ ಹಾಗೂ ಬಾಣಂತಿಯರಿಗೆ ಪೂರಕ ಪೌಷ್ಟಿಕ ಆಹಾರವನ್ನು ವಿತರಿಸಲಾಗುತ್ತಿದೆ. ಅಂಗನಾಡಿ ಕೇಂದ್ರಕ್ಕೆ ಕಳುಹಿಸುತ್ತಿರುವ ಮಕ್ಕಳ ತಾಯಂದಿರಿಗೆ ಮಕ್ಕಳ ಪೌಷ್ಟಿಕ ಸ್ಥಿತಿಯ ಅರಿವು ಮೂಡಿರುವುದು ಮತ್ತು ಈ ಕುರಿತು ಅವರು ಅಂಗನವಾಡಿ ಶಿಕ್ಷಕಿ ಮೂಲಕ ಮಾಹಿತಿಯನ್ನು ಪಡೆದಿದ್ದು ತಮ್ಮ ಮಕ್ಕಳನ್ನು ಅಂಗನವಾಡಿ ಕೇಂದ್ರಕ್ಕೆ ಕಳುಹಿಸುತ್ತಿರುವುದರಿಂದ ಅವರ ಪೌಷ್ಟಿಕ ಸ್ಥಿತಿಯಲ್ಲಿ ಸುಧಾರಣೆ ಕಂಡುಬಂದಿರುವುದಾಗಿ ಮಕ್ಕಳ ತಾಯಂದಿರು ಅಭಿಪ್ರಾಯಪಟ್ಟಿದ್ದಾರೆ. ಅಂಗನವಾಡಿ ಕೇಂದ್ರಕ್ಕೆ ಹಾಜರಾಗದ ಮಕ್ಕಳಿಗಿಂತ ಹಾಜರಾಗುವ ಮಕ್ಕಳ ತೂಕ ಮತ್ತು ಎತ್ತರವು ಗಣನೀವಾಗಿ ಹೆಚ್ಚಿರುವುದು ಇವರ ಅಧ್ಯಯನದಿಂದ ದೃಢಪಟ್ಟಿದೆ.

### 2.2.3 ಮಧ್ಯಾಹ್ನದ ಬಿಸಿಯೂಟ ಯೋಜನೆ

ಮಕ್ಕಳನ್ನು ತೀವ್ರವಾಗಿ ಕಾಡುತ್ತಿರುವ ನ್ಯೂನ್ಯ ಪೋಷಣೆಯು ಮಕ್ಕಳ ಆರೋಗ್ಯ ಮತ್ತು ಬೆಳವಣಿಗೆಯನ್ನು ಕುಂಠಿತಗೊಳಿಸುವುದು ಇದರ ಪರಿಣಾಮ ಶಾಲೆಯಲ್ಲಿ ಮಕ್ಕಳ ಪ್ರಗತಿ ಹಾಗೂ

ಶಾಲಾ ಹಾಜರಾತಿ ಮೇಲೆಯೂ ಸಹ ಪ್ರತಿಕೂಲ ಪ್ರಭಾವವನ್ನು ಬೀರಿದೆ. ಮಕ್ಕಳಲ್ಲಿಯ ನ್ಯೂನ್ಯ ಪೋಷಣೆ ನಿವಾರಿಸಲು ಸರಕಾರವು ನಿರಂತರವಾಗಿ ಪ್ರಯತ್ನ ಪಡುತ್ತಿದೆ. ಇದಕ್ಕಾಗಿ ಕೇಂದ್ರ ಹಾಗೂ ರಾಜ್ಯ ಸಕಾರವು ಅನೇಕ ಪೌಷ್ಟಿಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಅವುಗಳಲ್ಲಿ ಶಾಲಾ ಮಕ್ಕಳಿಗೆ ಉಚಿತ ಊಟ ವ್ಯವಸ್ಥೆ ಅಥವಾ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮವು ಮಕ್ಕಳ ನ್ಯೂನ್ಯ ಪೋಷಣೆ ನಿವಾರಿಸುವ ಕಾರ್ಯಕ್ರಮಗಳಲ್ಲಿ ಮಹತ್ವದ್ದಾಗಿದೆ (ದೇವದಾಸ್ ಮತ್ತು ಪ್ರೇಮಕುಮಾರಿ 1978).

ಭಾರತ ದೇಶವು ಶಾಲಾ ಮಕ್ಕಳಿಗೆ ಆಹಾರ ವಿತರಿಸುವ ಕಾರ್ಯಕ್ರಮವನ್ನು ಅನೇಕ ವರ್ಷಗಳ ಹಿಂದೆಯೇ ಆರಂಭಿಸಿರುವ ಖ್ಯಾತಿಗೆ ಪಾತ್ರವಾಗಿದೆ. ಕೆಲವೊಂದು ರಾಜ್ಯಗಳಲ್ಲಿ ವಿಶ್ವ ಆರೋಗ್ಯ ಸಂಸ್ಥೆ, UNICEF ಮತ್ತು CARE ಸಂಸ್ಥೆಗಳ ಸಹಾಯದಿಂದ ಸ್ವತಂತ್ರ ಪೂರ್ವ ಕಾಲದಲ್ಲಿಯೇ ಜಾರಿಯಲ್ಲಿತ್ತು.

ನಮ್ಮ ದೇಶವು ಈ ಯೋಜನೆಯನ್ನು ಮೊಟ್ಟಮೊದಲನೆಯದಾಗಿ ಆರಂಭಿಸಿದ ಖ್ಯಾತಿ ತಮಿಳುನಾಡಿಗೆ ಸಲ್ಲುತ್ತದೆ. ಈ ರಾಜ್ಯವು 1925ರಲ್ಲಿ ಮದ್ರಾಸ್‌ನಲ್ಲಿ ಮೊದಲು ಯೋಜನೆಯನ್ನು ಪ್ರಾರಂಭಿಸಿತು. 1965ರಲ್ಲಿ CARE ಸಂಸ್ಥೆಯ ಸಹಾಯ ಮತ್ತು ಸಹಯೋಗದೊಂದಿಗೆ ರಾಜ್ಯದ 1.2 ದಶಲಕ್ಷ ಮಕ್ಕಳಿಗೆ ಯೋಜನೆಯನ್ನು ವಿಸ್ತರಿಸುವುದರ ಮೂಲಕ ತಮಿಳುನಾಡು ರಾಜ್ಯವು ಈ ಕಾರ್ಯಕ್ರಮದ ಯಶಸ್ಸಿಗೆ ದೇಶದಲ್ಲಿಯೇ ಒಳ್ಳೆಯ ಹೆಸರನ್ನು ಪಡೆಯಿತು. 1982ರ ವೇಳೆಗೆ ಬಡತನ ರೇಖೆಗಿಂತ ಕೆಳಮಟ್ಟದಲ್ಲಿರುವ ಎರಡರಿಂದ ಹತ್ತು ವರ್ಷದ ಒಟ್ಟು ಏಳು ದಶಲಕ್ಷ ಮಕ್ಕಳು ಯೋಜನೆಯ ವ್ಯಾಪಿಗೋಪಟ್ಟರು. ಮತ್ತು ಇದು ಮುಖ್ಯಮಂತ್ರಿಗಳ ಮಧ್ಯಾಹ್ನದ ಊಟದ ಕಾರ್ಯಕ್ರಮವೆಂದೇ (Chief Ministers Noon Meal Programme) ಖ್ಯಾತಿ ಪಡೆಯಿತು (ಮೋಹನಸುಂದರಂ 1985, ದೇವದಾಸ್ 1987).

ಕೇರಳ ರಾಜ್ಯವು 1941ರಲ್ಲಿ ಕಾರ್ಯಕ್ರಮವನ್ನು ಆರಂಭಿಸುವುದರ ಮೂಲಕ ದೇಶದಲ್ಲಿ ಮಧ್ಯಾಹ್ನದ ಬಿಸಿ ಊಟ ಯೋಜನೆಯನ್ನು ಜಾರಿಗೊಳಿಸಿದ ಎರಡನೆ ರಾಜ್ಯವೆನಿಸಿಕೊಂಡಿತು.

ಬೆಂಗಳೂರಿನಲ್ಲಿ ಯೋಜನೆಯನ್ನು 1946ರಲ್ಲಿ ಆರಂಭಿಸುವುದರ ಮೂಲಕ ಮೂರನೆಯ ಸ್ಥಾನವನ್ನು ಕರ್ನಾಟಕ ರಾಜ್ಯವು ಗಳಿಸಿತು. CARE ಸಂಸ್ಥೆಯು ಹಾಲಿನಪುಡಿ, ಕಾರ್ನ್-ಸೋಯಾ(ಸಿ.ಎಸ್.ಎಮ್), ಗೋಧಿ ಮತ್ತು ಸೋಯಾ ಮಿಶ್ರಣ ಆಹಾರ, ಬಲ್ಗರ್ ಗೋಧಿ ಮತ್ತು ಸಲಾಡ್ ಎಣ್ಣೆಯನ್ನು ಉಚಿತವಾಗಿ ಕೊಡುತ್ತಿತ್ತು. ಒಬ್ಬ ಫಲಾನುಭವಿಗೆ ಹತ್ತು ಗ್ರಾಂ ಪ್ರೊಟೀನ್, 365 ಕಿಲೊ ಕ್ಯಾಲೊರಿ ಶಕ್ತಿ, 1650 ಐ.ಯು. ಜೀವಸತ್ವ 'ಎ', ಹನ್ನೊಂದು ಮಿಲಿ ಗ್ರಾಂ ಕಬ್ಬಿಣ ಮತ್ತು ಕೆಲವೊಂದು 'ಬಿ' ಜೀವಸತ್ವ ಒಳಗೊಂಡ ಆಹಾರವನ್ನು ವಾರದಲ್ಲಿ ಮೂರುದಿನ ವಿತರಿಸುವ ಕ್ರಮ ಜಾರಿಯಲ್ಲಿತ್ತು.

ಮಕ್ಕಳ ಶಾಲಾ ದಾಖಲಾತಿ ವೃದ್ಧಿಸುವುದು, ಶಾಲೆ ಬಿಡುವುದನ್ನು ತಪ್ಪಿಸುವುದು ಹಾಗೂ ಶಾಲಾ ಮಕ್ಕಳ ಪೌಷ್ಟಿಕ ಮಟ್ಟ ಸುಧಾರಣೆ ಮಾಡುವ ಉದ್ದೇಶಗಳೊಂದಿಗೆ ಪ್ರಾಥಮಿಕ ಶಿಕ್ಷಣದೊಂದಿಗೆ ಪೌಷ್ಟಿಕತೆ ಸುಧಾರಣೆಗೆ ಸಹಾಯವಾಗಬಲ್ಲ ರಾಷ್ಟ್ರೀಯ ಕಾರ್ಯಕ್ರಮವು 1995 ಅಗಸ್ಟ್ 15ರಂದು ಕಾರ್ಯಾರಂಭಿಸಿತು. ಆರಂಭಿಕ ಹಂತದಲ್ಲಿ ದೇಶದ ಒಟ್ಟು 2408 ಬ್ಲಾಕ್‌ಗಳನ್ನು ಒಳಗೊಂಡಿದ್ದು 2002ರ ವೇಳೆಗೆ ಯೋಜನೆಯನ್ನು ಒಂದರಿಂದ ಐದನೇ ತರಗತಿಯಲ್ಲಿ ಓದುತ್ತಿರುವ ಎಲ್ಲ ಸರಕಾರಿ ಶಾಲೆಗಳು ಮತ್ತು ಸರ್ಕಾರದಿಂದ ಮಾನ್ಯತೆ ಪಡೆದ ಎಲ್ಲ ಶಾಲೆಗಳಿಗೆ ವಿಸ್ತರಿಸಲಾಯಿತು.

ಪ್ರತಿ ಮಕ್ಕಳಿಗೆ 300 ಕಿಲೊ ಕ್ಯಾಲೊರಿ ಶಕ್ತಿ ಹಾಗೂ 8 ರಿಂದ 12 ಗ್ರಾಂ ಪ್ರೊಟೀನ್ ಹೊಂದಿರುವಂತಹ ಸಿದ್ಧಪಡಿಸಿದ ಖಾದ್ಯವನ್ನು ಒಂದರಿಂದ ಐದನೆಯ ತರಗತಿಯಲ್ಲಿ ಓದುತ್ತಿರುವ ಮಕ್ಕಳಿಗೆ ವಿತರಿಸುವಂತೆ ಸರಕಾರವು ಪರಿಷ್ಕರಿಸಿದ ಯೋಜನೆಯನ್ನು 2004ರ ಸೆಪ್ಟಂಬರ್ ಮಾಹೆಯಲ್ಲಿ ಜಾರಿಗೊಳಿಸಿತು. ಪ್ರತಿ ಮಗುವಿಗೆ ಆಹಾರದ ಖರ್ಚು ರೂಪಾಯಿ ಒಂದರಂತೆ ನಿಗಧಿಪಡಿಸಿತು ಮತ್ತು ಬರಗಾಲ ಪೀಡಿತ ಪ್ರದೇಶಗಳಲ್ಲಿನ ಮಕ್ಕಳಿಗೆ ಬೇಸಿಗೆ ರಜೆಯಲ್ಲಿಯೂ ಊಟ ಕೊಡಬೇಕೆಂದು ಸೂಚಿಸಿತು.

ಈ ಯೋಜನೆಯನ್ನು ಮತ್ತೆ ಅಕ್ಟೋಬರ್ 2007ರಲ್ಲಿ ಪುನರ್ ಪರಿಷ್ಕರಿಸಿ ಯೋಜನೆಯ ಲಾಭವನ್ನು 7ನೇ ತರಗತಿವರೆಗೆ ಓದುತ್ತಿರುವ ಮಕ್ಕಳಿಗೂ ವಿಸ್ತರಿಸುವಂತೆ ನಿರ್ದೇಶಿಸಿತು ಮತ್ತು ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಿಗೆ ಒಂದು ದಿನಕ್ಕೆ ಒಂದು ಮಗುವಿಗೆ 700 ಕಿಲೊ ಕ್ಯಾಲೊರಿ ಶಕ್ತಿ ಹಾಗೂ 20ಗ್ರಾಂನಷ್ಟು ಪ್ರೊಟೀನ್ ಒದಗಿಸಲು ಪ್ರತಿ ಮಗುವಿಗೆ 150ಗ್ರಾಂ ಧಾನ್ಯವನ್ನು ನಿಗಧಿಪಡಿಸತು.

ಭಾರತ ದೇಶದಲ್ಲಿ ಜಾರಿಯಲ್ಲಿರುವ ಮಧ್ಯಾಹ್ನದ ಬಿಸಿಯೂಟ ಯೋಜನೆಯು 139 ದಶಲಕ್ಷ ಮಕ್ಕಳಿಗೆ ಪೌಷ್ಟಿಕ ಆಹಾರ ಒದಗಿಸುವುದರ ಮೂಲಕ ಶಾಲಾ ಮಕ್ಕಳಿಗೆ ಆಹಾರ ವಿತರಿಸುವ ಯೋಜನೆಯಲ್ಲಿ ಜಗತ್ತಿನಲ್ಲಿಯೇ ಬಹು ದೊಡ್ಡ ಯೋಜನೆಯಾಗಿದೆ ಎಂದು ಈ ಕುರಿತಾಗಿ ಅಧ್ಯಯನ ಕೈಗೊಂಡ Young and Lives ಸಂಸ್ಥೆಯು ಅಭಿಪ್ರಾಯಪಟ್ಟಿದೆ. ಇವರು ಬಿಸಿಯೂಟ ಯೋಜನೆಯ ಪ್ರಯೋಜನವನ್ನು ಅರಿಯಲು ಬಿಸಿಯೂಟ ವಿತರಿಸುತ್ತಿರುವ ಶಾಲೆಯ ಮಕ್ಕಳು ಮತ್ತು ಯೋಜನೆ ವ್ಯಾಪ್ತಿಗೊಳಪಡದ ಮಕ್ಕಳ ತೂಕ ಮತ್ತು ಎತ್ತರದಲ್ಲಾದ (2002 ರಿಂದ 2007ರ ವರೆಗೆ) ಬದಲಾವಣೆಗಳನ್ನು ಗುರುತಿಸಿದ್ದಾರೆ. ಇವರ ಸಮೀಕ್ಷೆಯಿಂದ ತಿಳಿದುಬಂದ ಮಾಹಿತಿಯಂತೆ ನಾಲ್ಕು ಮತ್ತು ಐದು ವರ್ಷದ ಮಕ್ಕಳಲ್ಲಿ ಯೋಜನೆಯ ಜಾರಿಯಿಂದಾಗಿ ತೂಕ ಮತ್ತು ಎತ್ತರದಲ್ಲಿ ಗಣನೀಯವಾಗಿ ಹೆಚ್ಚಳವಾಗಿದೆ. ಅದರಲ್ಲಿಯೂ ಬರಪೀಡಿತ ಪ್ರದೇಶದ ಮಕ್ಕಳಿಗೆ ಇದರಿಂದ ಹೆಚ್ಚಿನ ಪ್ರಯೋಜನವಾಗಿದ್ದು ಯೋಜನೆಯ ಜಾರಿಯಿಂದಾಗಿ ಮಕ್ಕಳ ಪೌಷ್ಟಿಕ ಮಟ್ಟ ಹಾಗೂ ಕಲಿಕೆಯಲ್ಲಿ ಮಹತ್ವದ ಪಾತ್ರ ವಹಿಸಿದೆ.

ಬಿಸಿಯೂಟ ಜಾರಿಯಾದ ನಂತರ ಮಕ್ಕಳ ಶಾಲಾ ದಾಖಲಾತಿಯು 15 ಪ್ರತಿಶತದಷ್ಟು ಹೆಚ್ಚಿರುವುದು, ಹಾಗೆಯೇ ಅದರಲ್ಲಿಯೂ ಸಮಾಜದ ಕೆಳಸ್ಥರದಲ್ಲಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಮಕ್ಕಳ ಶಾಲಾ ದಾಖಲಾತಿಯು ಶೇಕಡ 40ರಷ್ಟು ಹೆಚ್ಚಿರುವುದಾಗಿ ಸಮಾಜ ಪ್ರಗತಿ ಸಹಯೋಗ ಸಂಸ್ಥೆಯು 2005ರಲ್ಲಿ ಮಧ್ಯಪ್ರದೇಶದ 70 ಹಿಂದುಳಿದ ಹಳ್ಳಿಗಳಲ್ಲಿ ಬಿಸಿಯೂಟ ಯೋಜನೆ ಆರಂಭಿಸಿದ ನಂತರ ಕೈಗೊಂಡ ಸರ್ವೆ ಸಮೀಕ್ಷೆಯಲ್ಲಿ ಮಂಡಿಸಿದೆ.

ಪೂರಕ ಪೌಷ್ಟಿಕ ಆಹಾರ ಒದಗಿಸುವ ಕಾರ್ಯಕ್ರಮಗಳಲ್ಲಿ ಬಹಳ ಹಿಂದೆಯೇ ಆರಂಭವಾದ ಯೋಜನೆಗಳಲ್ಲಿ ಬದಲಾವಣೆಗಳನ್ನು ಗುರುತಿಸಿದ್ದಾರೆ. ಅದರಲ್ಲಿ ಬಿಸಿಯೂಟ ಯೋಜನೆಯೂ ಒಂದು. ಕರ್ನಾಟಕದಲ್ಲಿ ಮಧ್ಯಾಹ್ನದ ಬಿಸಿಯೂಟ ಯೋಜನೆಯು ಅನ್ವಯಿಕ ಪೌಷ್ಟಿಕ ಕಾರ್ಯಕ್ರಮದ ಅಂಗವಾಗಿ 1963ರಲ್ಲಿ CAREನ ಸಹಾಯದೊಂದಿಗೆ ಆರಂಭಗೊಂಡಿತು. ಆರಂಭಿಕ ಹಂತದಲ್ಲಿ ಎರಡು ಲಕ್ಷ ಮಕ್ಕಳನ್ನೊಳಗೊಂಡ ಯೋಜನೆಯು 1980–81ರ ವೇಳೆಗೆ ಒಂದು ದಶಲಕ್ಷಕ್ಕಿಂತ ಅಧಿಕ ಮಕ್ಕಳನ್ನು ಒಳಗೊಂಡಿತ್ತು. ಯೋಜನೆ ಅಡಿಯಲ್ಲಿ ಪ್ರತಿಯೊಬ್ಬರಿಗೆ 330 ಕಿಲೊ ಕ್ಯಾಲೊರಿ ಶಕ್ತಿ ಮತ್ತು 7–12 ಗ್ರಾಂ ಪ್ರೊಟೀನ್ ಒದಗಿಸುವ ಆಹಾರವನ್ನು ವಿತರಿಸಲಾಗುತ್ತಿತ್ತು. ಕೆನೆರಹಿತ ಹಾಲಿನಪುಡಿ ವಿತರಿಸುವುದರೊಂದಿಗೆ ಆರಂಭಗೊಂಡ ಯೋಜನೆಯಲ್ಲಿ ತದನಂತರ ಬಲ್ಗರ್ ಗೋಧಿ ಮತ್ತು ಸೋಯಾ ಎಣ್ಣೆಯಿಂದ ತಯಾರಿಸಿದ ಖಾದ್ಯವನ್ನು ವಿತರಿಸಲಾಗುತ್ತಿತ್ತು (ಲಕ್ಷ್ಮಯ್ಯ ಮತ್ತಿತರರು, 1999).

ಬಿಸಿಯೂಟ ವಿತರಣೆಯಿಂದ ಮಕ್ಕಳ ಪೌಷ್ಟಿಕ ಸ್ಥಿತಿಯಲ್ಲಾದ ಬದಾಲವಣೆಯನ್ನು ಅರಿಯಲು ಲಕ್ಷ್ಮಯ್ಯ ಮತ್ತಿತರರು (1999) 1992–93ಅವಧಿಯಲ್ಲಿ 1361 ಬಿಸಿಯೂಟ ಯೋಜನೆಯ ಫಲಾನುಭವಿಗಳು ಮತ್ತು 1333 ಬಿಸಿಯೂಟ ಯೋಜನೆಗೆ ಒಳಪಡದ ಮಕ್ಕಳ ತೂಕ, ಎತ್ತರ, ಪೋಷಕಾಂಶಗಳ ಕೊರತೆಯ ಲಕ್ಷಣಗಳನ್ನು ಗುರುತಿಸುವ ಅಧ್ಯಯನವನ್ನು ಕೈಗೊಂಡಿದ್ದರು. ಇವರ ಅಧ್ಯಯನದ ವಿವರಣೆಯಂತೆ ಅಧ್ಯಯನದ ವ್ಯಾಪ್ತಿ ಪ್ರದೇಶದಲ್ಲಿ ಪ್ರತಿ ಫಲಾನುಭವಿಗೆ 80 ಗ್ರಾಂ ಗೋಧಿ ಹಾಗೂ ಐದು ಗ್ರಾಂ ಎಣ್ಣೆ ವಿತರಿಸುವ ಸೌಲಭ್ಯವಿತ್ತು. ಇದರಿಂದ ಉಪ್ಪಿಟ್ಟು ತಯಾರಿಸಿ ವಿತರಿಸಲಾಗುತ್ತಿತ್ತು. ಪ್ರತಿ ಶಾಲೆಯಲ್ಲಿ ಫಲಾನುಭವಿಗಳನ್ನು ಕುಟುಂಬದ ಆದಾಯದ ಮೇಲೆ ಆಧರಿಸಿ ಆಯ್ಕೆ ಮಾಡಲಾಗಿದ್ದರೂ ಸಹ ಶಾಲೆಯಲ್ಲಿ ಊಟ ಪಡೆಯುವವರ ಸಂಖ್ಯೆ ಫಲಾನುಭವಿಗಳ ಪಟ್ಟಿಯಲ್ಲಿ ಇರುವುದಕ್ಕಿಂತ ಹೆಚ್ಚಿಗೆ ಇರುವುದು ಇವರ ಅಧ್ಯಯನದಿಂದ ತಿಳಿದುಬಂದಿದೆ. ಬಿಸಿಯೂಟ ಯೋಜನೆ ಅಡಿ ವಿತರಿಸಲಾಗುತ್ತಿರುವ ಆಹಾರದಿಂದ ಪ್ರತಿ ಫಲಾನುಭವಿಗೆ ದೊರಕುವ ಶಕ್ತಿಯು 303 ಕಿಲೊ ಕ್ಯಾಲೊರಿ ಹಾಗೂ ಪ್ರೊಟೀನ್ 7.2 ಗ್ರಾಂ ಇರುವುದು, ಅಧ್ಯಯನ ಕೈಗೊಂಡ 30 ಶಾಲೆಗಳ ಪೈಕಿ 19 ಶಾಲೆಗಳಲ್ಲಿ ಒಂದು ವಾರದ ವರೆಗೆ ಸತತವಾಗಿ ಯಾವ ದಿನವೂ ಬಿಡುವಿಲ್ಲದೆ ವಿತರಿಸುವುದು, ತೂಕ ಮತ್ತು ಎತ್ತರದ ಹೆಚ್ಚಳದಲ್ಲಿ ಯೋಜನೆಗೆ ಒಳಪಟ್ಟ ಮಕ್ಕಳಿಗಿಂತ ಯೋಜನೆಗೆ ಒಳಪಡದ ಮಕ್ಕಳಿಗೆ ಹೋಲಿಸಿದಾಗ ಗಣನೀಯ ಪ್ರಮಾಣದಷ್ಟು ವ್ಯತ್ಯಾಸ ಕಂಡುಬರದಿದ್ದರೂ ಸಹ ಕಡಿಮೆ ತೂಕ ಹೊಂದಿದ ಮಕ್ಕಳ ಸಂಖ್ಯೆಯು ಯೋಜನೆಗೆ ಒಳಪಟ್ಟ

ಶಾಲೆಗಳ ಮಕ್ಕಳಲ್ಲಿ ಕಡಿಮೆ ಇರುವುದು ಇವರ ಅಧ್ಯಯನದಿಂದ ತಿಳಿದುಬಂದಿದೆ. ಹಾಗೆಯೇ ಆರೋಗ್ಯವಂತ ಮಕ್ಕಳ ಸಂಖ್ಯೆಯು ಕೂಡ ಹೆಚ್ಚಾಗಿರುವುದು ತಿಳಿದುಬಂದಿದೆ.

ಕರ್ನಾಟಕದ 32 ಜಿಲ್ಲೆಗಳಲ್ಲಿ 2003–04ರ ಸಾಲಿನಲ್ಲಿ ಬಿಸಿಯೂಟ ವಿತರಿಸುವ ಕಾರ್ಯ ಪ್ರಾರಂಭವಾಗಿದ್ದು, ಯೋಜನೆ ಜಾರಿಯಾದ ನಂತರ ಗ್ರಾಮೀಣ ಪ್ರದೇಶದಲ್ಲಿ ಶೇಕಡ 0.89 ರಷ್ಟು ಮತ್ತು ನಗರ ಪ್ರದೇಶದಲ್ಲಿ ಶೇಕಡ 3.34 ರಷ್ಟು ಶಾಲಾ ದಾಖಲಾತಿ ಹೆಚ್ಚಿದೆ. ಒಂದರಿಂದ ಏಳನೇ ತರಗತಿಯ ಮಕ್ಕಳು ಶಾಲೆ ಬಿಡುವ ಪ್ರಮಾಣವು ನಗರ ಪ್ರದೇಶಗಳಿಗಿಂತ ಗ್ರಾಮೀಣ ಪ್ರದೇಶದ ಶಾಲೆಗಳಲ್ಲಿ ಕಡಿಮೆಯಾಗಿದೆ. ಬಿಸಿಯೂಟ ಯೋಜನೆ ಅಡಿಯಲ್ಲಿ ಪ್ರತಿ ಮಗುವಿಗೆ 300 ಕಿಲೊ ಕ್ಯಾಲೊರಿ ಶಕ್ತಿ ಹಾಗೂ 12 ಗ್ರಾಂ ಪ್ರೊಟೀನ್ ಲಭಿಸುವ ಆಹಾರವನ್ನು ಪ್ರತಿ ಮಗುವಿಗೆ ವಿತರಿಸಬೇಕೆಂದು ರೂಪಿಸಲಾಗಿದ್ದು, ಆದರೆ ಪ್ರತಿಮಗುವಿಗೆ ಸರಾಸರಿ 300 ಕಿಲೊ ಕ್ಯಾಲೋರಿ ಶಕ್ತಿ ಹಾಗೂ ಎಂಟು ಗ್ರಾಂ ಪ್ರೊಟೀನ್ ಲಭಿಸುತ್ತಿರುವುದು ರಮಾ ನಾಯಕ್ (2008)ರವರ ಅಧ್ಯಯನದ ವಿಶ್ಲೇಷಣೆಯಿಂದ ತಿಳಿದುಬಂದಿದೆ.

ಶಾಲೆಗಳಲ್ಲಿ ಮಕ್ಕಳು ಬಿಸಿಯೂಟ ಸೇವನೆಯಲ್ಲಿ ಪಾಲ್ಗೊಳ್ಳುವಿಕೆ ಉತ್ತಮವಾಗಿರುವುದಾಗಿ ಮತ್ತು ಮಕ್ಕಳಿಗೆ ಸಾಕಷ್ಟು ಪ್ರಮಾಣ ಆಹಾರ ವಿತರಿಸುತ್ತಿರುವುದಾಗಿ ರಮಾ ನಾಯಕ್ (2008)ರವರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ, ಬಿಸಿಯೂಟ ತಯಾರಿಕೆಗೆ ಬಳಸುವ ಧಾನ್ಯಗಳ ಗುಣಮಟ್ಟದಲ್ಲಿ ಸುಧಾರಣೆಯಾಗಬೇಕೆಂದು ಕರ್ನಾಟಕದ ಒಟ್ಟು 1280 ಶಾಲೆಗಳಲ್ಲಿ ಜಾರಿಯಲ್ಲಿರುವ ಮಧ್ಯಾಹ್ನದ ಬಿಸಿಯೂಟ ಕುರಿತು ಪರಿಶೀಲನಾ ಅಧ್ಯಯನವನ್ನು ಕೈಗೊಂಡ ರಮಾ ನಾಯಕ್ (2008)ರವರು ಅಭಿಪ್ರಾಯ ಪಟ್ಟಿದ್ದಾರೆ.

ದೇಶದ 12 ಕೋಟಿ ಮಕ್ಕಳನ್ನೊಳಗೊಂಡ ಮಧ್ಯಾಹ್ನದ ಬಿಸಿಯೂಟ ಯೋಜನೆಯು ಭಾರತ ಸರಕಾರದ ಯಶಸ್ವಿ ಯೋಜನೆಯಾಗಿದ್ದು, ದೇಶದ ಎಲ್ಲ ರಾಜ್ಯಗಳಲ್ಲಿ ಯೋಜನೆ ಜಾರಿಯಲ್ಲಿರುವುದಾಗಿ ಸಿನ್ಹಾ (2008) ವರದಿ ಮಾಡಿದ್ದಾರೆ. ಶಾಲೆಯಲ್ಲಿ ಹಸಿವಿನ ಸ್ಥಿತಿಯಲ್ಲಿ ಪಾಠ ಕೇಳುವಂತಹ ಮಕ್ಕಳ ಸಮಸ್ಯೆಗೆ ಹಸಿವನ್ನು ನಿವಾರಿಸುವ ತಂತ್ರವಾಗಿ ಕಾರ್ಯನಿರ್ವಹಿಸುತ್ತಿರುವುದಾಗಿ ಹಾಗೂ ಶಾಲಾ ಹಾಜರಾತಿ ಮತ್ತು ದಾಖಲಾತಿಯನ್ನು ಹೆಚ್ಚಿಸಿದೆ ಎಂದು ಡ್ರೆಜೆ ಮತ್ತು ಗೋಯಲ್ (2003) ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಶಾಲೆಯಲ್ಲಿ ವಿತರಿಸುವ ಆಹಾರದ ಗುಣಮಟ್ಟದಲ್ಲಿ ಸುಧಾರಣೆ ತರಬೇಕಾಗಿದೆ ಎಂದು ಖೇರಾ (2006) ರವರು ವರದಿ ಮಂಡಿಸಿದ್ದಾರೆ.

ಅಧ್ಯಯನ ಕೈಗೊಂಡ ಒಂದುನೂರಾ ಹನ್ನೊಂದು ಶಾಲೆಗಳಲ್ಲಿ ಬಹುಪಾಲು ಶಾಲೆಗಳಲ್ಲಿ ಪ್ರತಿನಿತ್ಯ ಅನ್ನ ಮತ್ತು ಸಾಂಬರ್ ಮಾತ್ರ ವಿತರಿಸುತ್ತಿರುವುದನ್ನು ಸಿನ್ಹಾ (2008) ರವರ ಬಿಸಿಯೂಟ ಕುರಿತ ಅಧ್ಯಯನದ ವರದಿಯಲ್ಲಿ ಮಂಡಿಸಿದ್ದಾರೆ. ಕೆಲವೊಂದು ಶಾಲೆಗಳಲ್ಲಿ ಪ್ರತಿನಿತ್ಯ ಮೊಟ್ಟೆ ವಿತರಿಸುವ ಸೌಲಭ್ಯವಿದ್ದಾಗ್ಯೂ ಸಹ ವಾರದಲ್ಲಿ ಒಂದು ಅಥವಾ ಎರಡು ಬಾರಿ ಮಾತ್ರ ಮೊಟ್ಟೆ ವಿತರಿಸಲಾಗುತ್ತಿದೆ. ಹಾಗೂ ಕೆಲವೊಂದು ಶಾಲೆಯಲ್ಲಿ ತಯಾರಿಸಿದ ಅಡುಗೆಯ ಗುಣಮಟ್ಟ ತುಂಬಾ

ಕಳಪೆಯಾಗಿದ್ದು, ಕೆಲವು ಮಕ್ಕಳು ಮನೆಗೆ ಹೋಗಿ ಊಟ ಮಾಡಿ ಬರಲಿಕ್ಕೆ ಇಷ್ಟ ವ್ಯಕ್ತಪಡಿಸಿರುತ್ತಾರೆ ಎಂಬುದನ್ನು ಸಹ ವರದಿಯಲ್ಲಿ ಮಂಡಿಸಿದ್ದಾರೆ.

ಸಮತೋಲನ ಆಹಾರವನ್ನು ಹೊಟ್ಟೆ ತುಂಬುವಷ್ಟು ನೀಡುವ ಮೂಲಕ ಇಂದಿನ ಸಮಾಜವು ಎದುರಿಸುತ್ತಿರುವ ಹಸಿವು ಮತ್ತು ಶಿಕ್ಷಣದಂತಹ ಗಂಭೀರ ಸಮಸ್ಯೆಗಳನ್ನು ಎದುರಿಸುವ ಛಲದೊಂದಿಗೆ 'ಅಕ್ಷಯ ಪಾತ್ರಾ ಸಂಸ್ಥೆ'ಯು 2000ದ ಇಸವಿಯಲ್ಲಿ ಆರಂಭಗೊಂಡಿತು. ಬೆಂಗಳೂರಿನ ವಿವಿಧ ಶಾಲೆಗಳಲ್ಲಿನ 1500 ಮಕ್ಕಳಿಗೆ ಆಹಾರ ವಿತರಿಸುವುದರೊಂದಿಗೆ ಪ್ರಾರಂಭಗೊಂಡ ಸಂಸ್ಥೆಯು ಇಂದು ರಾಜ್ಯಾದ್ಯಂತ ಒಟ್ಟು ಒಂದು ಸಾವಿರ ಶಾಲೆಗಳಲ್ಲಿ ಓದುತ್ತಿರುವ 3,05,340 ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಒದಗಿಸುತ್ತಿದೆ. ಸಂಸ್ಥೆಯು ಶಾಲಾ ಮಕ್ಕಳಿಗೆ ಪುಷ್ಟಿಕರ ಹಾಗೂ ಶುಚಿ-ರುಚಿಯಾದ ಆಹಾರವನ್ನು ವಿತರಿಸುವಲ್ಲಿ ಯಶಸ್ವಿಯಾಗಿದೆಯೆಂದು ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯು ಅಕ್ಷಯ ಪಾತ್ರಾ ಸಂಸ್ಥೆಯನ್ನು ಪ್ರಶಂಸಿಸಿದೆ.

ಮಕ್ಕಳಲ್ಲಿ ಚರ್ಮ ವ್ಯಾಧಿಯು ಶೇಕಡ 80 ರಿಂದ ಶೇಕಡ 5ಕ್ಕೆ ಇಳಿದಿರುವುದು, ಶೇಕಡ 40ರಷ್ಟಿದ್ದ ರಕ್ತಹೀನತೆ ಪ್ರಮಾಣವು ಶೇಕಡ ಐದಕ್ಕಿಂತ ಕಡಿಮೆಯಾಗಿರುವುದು, ಮಕ್ಕಳ ತೂಕ ಮತ್ತ ಎತ್ತರದಲ್ಲಿ ಗಣನೀಯವಾಗಿ ಹೆಚ್ಚಳವಾಗಿರುದಾಗಿ, ಶಾಲಾ ಹಾಜರಾತಿಯು ಶೇಕಡ 30ರಷ್ಟು ಸುಧಾರಿಸಿರುವುದಾಗಿ ಹಾಗೂ ಶಾಲಾ ದಾಖಲಾತಿಯು ಶೇಕಡ 20ರಷ್ಟು ಸುಧಾರಿಸಿರುವುದಾಗಿ ಅಕ್ಷಯ ಪಾತ್ರಾ ಕುರಿತಂತೆ ಅಧ್ಯಯನ ಕೈಗೊಂಡ ಎಮ್.ಎಸ್.ರಾಮಯ್ಯ ವೈದ್ಯಕೀಯ ಕಾಲೇಜು ಅಧ್ಯಯನಕಾರರು ವರದಿ ಮಾಡಿದ್ದಾರೆ.

ಶರ್ಮಾ ಮತ್ತಿತರರು (2010) ಸರ್ಕಾರೇತರ ಸಂಸ್ಥೆಯಾದ 'ಅಕ್ಷಯ ಪಾತ್ರ' ಸಂಸ್ಥೆಯು ಶಾಲಾ ಮಕ್ಕಳಿಗೆ ಮಧ್ಯಾಹ್ನದ ಬಿಸಿಯೂಟ ಒದಗಿಸುತ್ತಿರುವ ಶಾಲಾ ಮಕ್ಕಳ ಪೌಷ್ಟಿಕ ಸ್ಥಿತಿಯ ಕುರಿತು ಅಧ್ಯಯನವನ್ನು ಕೈಗೊಂಡಿರುತ್ತಾರೆ. ಉತ್ತರ ಪ್ರದೇಶದ ಮಥುರಾ ಜಿಲ್ಲೆಯಲ್ಲಿ ಸರ್ಕಾರಿ ಪ್ರಾಥಮಿಕ ಶಾಲೆಯಲ್ಲಿ 2006-2007ರ ಅವಧಿಯಲ್ಲಿ ಅಕ್ಷಯ ಪಾತ್ರಾ ಸಂಸ್ಥೆ ಮತ್ತು ಸರಕಾರದ ವತಿಯಿಂದ ವಿತರಿಸಿದ ಶಾಲೆಗಳ ಮಕ್ಕಳ ಪೌಷ್ಟಿಕ ಮಟ್ಟವನ್ನು ತೂಕ ಮತ್ತು ಎತ್ತರಗಳನ್ನು ಅಳೆಯುವ ಮೂಲಕ ಹಾಗೂ ಶಕ್ತಿ ಮತ್ತು ಪ್ರೋಟೀನ್ ನ್ಯೂನ್ಯ ಪೋಷಣೆ ಹಾಗೂ 'ಎ' ಜೀವಸತ್ವದ ಕೊರತೆಯ ಲಕ್ಷಣಗಳನ್ನು ಗುರುತಿಸುವಿಕೆ ಮೂಲಕ ಪರಿಶೀಲಿಸಿದ್ದಾರೆ. ಮಕ್ಕಳ ತೂಕ ಮತ್ತು ಎತ್ತರದಲ್ಲಿ ಸರ್ಕಾರದ ಮೂಲಕ ವಿತರಿಸುವ ಹಾಗೂ 'ಅಕ್ಷಯ ಪಾತ್ರಾ' ದಿಂದ ವಿತರಿಸುತ್ತಿರುವ ಎರಡೂ ಬಗೆಯ ಶಾಲೆಗಳಲ್ಲಿ ತೂಕ ಮತ್ತು ಎತ್ತರದಲ್ಲಿ ಗಣನೀಯವಾಗಿ ಹೆಚ್ಚಳವಾಗಿರುವುದು ಇವರ ಅಧ್ಯಯನದಿಂದ ತಿಳಿದುಬಂದಿದೆ. ಆದರೆ, ನ್ಯೂನ್ಯ ಪೋಷಣೆಯ ಪ್ರಮಾಣದಲ್ಲಿ ಯಾವುದೇ ರೀತಿಯ ಸುಧಾರಣೆ ಕಂಡುಬಂದಿಲ್ಲ. 'ಅಕ್ಷಯ ಪಾತ್ರಾ' ಸಂಸ್ಥೆಯಿಂದ ವಿತರಿಸುತ್ತಿರುವ ಶಾಲೆಗಳಲ್ಲಿ 'ಎ' ಜೀವಸತ್ವ ಹಾಗೂ 'ಡಿ' ಜೀವಸತ್ವದ ಕೊರತೆಯ ಲಕ್ಷಣಗಳು ಶೇಕಡ 38ರಷ್ಟು ಮತ್ತು ಶೇಕಡ 50ರಷ್ಟು ಕಡಿಮೆಯಾಗಿರುವುದು ಕಂಡುಬಂದಿದೆ.

2007ರಲ್ಲಿ NIPPCID-Indore ಸಂಸ್ಥೆಯ ವರದಿಯು ಕೆಳಕಂಡ ಅಂಶಗಳನ್ನು ಅಧ್ಯಯನದಿಂದ ಕಂಡುಕೊಂಡಿದೆ

- ಪ್ರಾಥಮಿಕ ಶಾಲಾ ಮಕ್ಕಳ ದಾಖಲಾತಿಯಲ್ಲಿ ಹೆಚ್ಚಳ
- ಶಾಲಾ ಹಾಜರಾತಿಯಲ್ಲಿ ಸುಧಾರಣೆ ಹಾಗೂ ಶಾಲೆಯಲ್ಲಿ ಮಕ್ಕಳು ಪೂರ್ಣ ಅವಧಿವರೆಗೆ ಹಾಜರಿರುವುದು
- ಶಾಲೆ ಬಿಡುವವರ ಸಂಖ್ಯೆಯಲ್ಲಿ ಅದರಲ್ಲಿಯೂ ಹೆಚ್ಚಾಗಿ ಹೆಣ್ಣುಮಕ್ಕಳ ಸಂಖ್ಯೆಯಲ್ಲಿ ಇಳಿಮುಖ
- ಬಿಸಿಯೂಟ ಯೋಜನೆಯಿಂದಾಗಿ ಪಾಲಕರಿಗೆ ಒಂದು ಹೊತ್ತಿನ ಊಟ ತಯಾರಿಸಿ ಕೊಡುವ ಹೊರೆ ಕಡಿಮೆಯಾಗಿರುವುದಾಗಿ ಪಾಲಕರು ಅಭಿಪ್ರಾಯ ವ್ಯಕ್ತಪಡಿಸಿರುವುದಾಗಿ ವರದಿ ತಿಳಿಸುತ್ತದೆ
- ಮಕ್ಕಳಲ್ಲಿ ಕಲಿಕಾ ಸಾಮರ್ಥ್ಯ ವೃದ್ಧಿಸುವುದು ಹಾಗೂ ಸಮಾನತೆ ಭಾವ ಬೆಳೆಸುವಲ್ಲಿ ಸಹಕಾರಿಯಾಗಿದೆ ಎಂದು ಶಿಕ್ಷಕರ ಅಭಿಪ್ರಾಯವಾಗಿದೆ ಎಂದು ವರದಿಯಲ್ಲಿ ತಿಳಿಸಿರುತ್ತಾರೆ.

### 2.3 ಬುಡಕಟ್ಟು ಸಮುದಾಯಗಳ ಸಾಮಾನ್ಯ ಮಾಹಿತಿ

ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳನ್ನು ಆಯಾ ದೇಶ, ಪ್ರದೇಶಗಳಲ್ಲಿ ಅನೇಕ ಹೆಸರುಗಳಿಂದ ಗುರುತಿಸಲಾಗುತ್ತದೆ. ಆದಿವಾಸಿಗಳು ಎನ್ನುವುದು ಸಾಮಾನ್ಯವಾಗಿ ಕೇಳಿಬರುವ ಹೆಸರಾಗಿದೆ. ಇವರನ್ನು ಆದಿವಾಸಿ, ಮೂಲನಿವಾಸಿ, ಗಿರಿಜನ, ವನ್ಯಜನ, ಸಂಚಾರಿಗಳು, ಅರಣ್ಯವಾಸಿಗಳು, ಗಿರಿಜನರು, ಪರಿಶಿಷ್ಟ ವರ್ಗ, ಸರ್ವಚೇತನವಾದಿ, ಪ್ರಕೃತಿ ಆರಾಧಕರು ಎಂಬ ವಿವಿಧ ಹೆಸರುಗಳಿಂದ ಕರೆಯಲಾಗುತ್ತಿದೆ. ಒಂದು ದೇಶದ ಮೂಲನಿವಾಸಿಗಳನ್ನು 'ಆದಿವಾಸಿಗಳು' ಎಂದು ಕರೆಯಲಾಗುತ್ತಿದೆ.

ಕಿಟೆಲ್ಲರು ತಮ್ಮ ಅರ್ಥಕೋಶದಲ್ಲಿ ಬುಡಕಟ್ಟು ಎಂಬ ಶಬ್ದಕ್ಕೆ 'ಕುಟುಂಬ' ಹಾಗೂ 'ಕುಲ' ಎಂಬ ಅರ್ಥವನ್ನು ನೀಡಿದ್ದಾರೆ. ಬುಡಕಟ್ಟು ಎಂಬ ಪದವು ಆಂಗ್ಲಭಾಷೆಯ 'ಟ್ರೈಬ್' ಎಂಬ ಸಮಾನಾರ್ಥಕ ಪದವಾಗಿ ಬಳಸಲಾಗುತ್ತದೆ. ಇದು ಲ್ಯಾಟೀನ್ ಭಾಷೆಯ ಟ್ರೈಬಸ್ ಎಂಬ ಪದದಿಂದ ಉಗಮಗೊಂಡಿದೆ. ಗ್ರೀಕ್ ಮತ್ತು ರೋಮನ್ ಲೇಖಕರು ಲ್ಯಾಟಿಯಂ ಜಿಲ್ಲೆಯಲ್ಲಿ ನೆಲೆಸಿದ ಬುಡಕಟ್ಟಿನವರಿಗೆ ಪ್ರಪ್ರಥಮವಾಗಿ 'ಟ್ರೈಬ್' ಎಂಬ ಪದವನ್ನು ಬಳಸಿರುವದು ಕಂಡುಬಂದಿದೆ.

"ಒಂದು ನಿರ್ಧಿಷ್ಟ ಪ್ರದೇಶದಲ್ಲಿ ವಾಸಿಸುವ ಅಥವಾ ಅದನ್ನು ತನ್ನದೆಂದು ಹೇಳಿಕೊಳ್ಳುವಂತಹ, ಅಥವಾ ರಾಜಕೀಯವಾಗಿ ಅಥವಾ ಸಾಮಾಜಿಕವಾಗಿ ಹೊಂದಿಕೊಂಡಿರುವ ಮತ್ತು ಸ್ವಯಂ ಆಡಳಿತವುಳ್ಳ ಗುಂಪೇ ಬುಡಕಟ್ಟು" ಎಂದು ಲಂಡನ್ನಿನ ಮಾನವಶಾಸ್ತ್ರೀಯ

ಅಧ್ಯಯನ ಸಂಸ್ಥೆ (ರಾಯಲ್ ಅಂತ್ರಪಾಲಾಜಿಕಲ್ ಇನ್‌ಸ್ಟಿಟ್ಯೂಟ್) ವ್ಯಾಖ್ಯಾನಿಸಿದೆ. "ಯಾವ ಜನಾಂಗ ಗತಕಾಲದಿಂದಲೂ ನಿಸರ್ಗದ ಮಡಿಲಲ್ಲಿ ಸಹಜವಾಗಿ ಬದುಕಲು ಬಯಸುವುದೋ, ಪ್ರಕೃತಿಜನ್ಯ ಉತ್ಪನ್ನಗಳನ್ನು ಭಕ್ಷಿಸಲು ಯತ್ನಿಸುವುದೋ, ತನ್ನದೇ ಆದ ಒಂದು ವಿಶಿಷ್ಟವಾದ ರೀತಿಯ ಜೀವನ ವಿಧಾನದಿಂದ ಜೀವಿಸುವ ಆಶಯವನ್ನು ಹೊಂದಿ ಆ ರೀತಿಯಲ್ಲಿಯೇ ಜೀವನ ನಡೆಸುವುದೊ ಆ ಸಮುದಾಯಕ್ಕೆ ಆದಿವಾಸಿ ಅಥವಾ ಬುಡಕಟ್ಟು" ಎಂದು ಕರೆಯಬಹುದು.

### 2.3.1 ಬುಡಕಟ್ಟು ಜನಸಂಖ್ಯೆ ವಿವಿರಗಳು ಮತ್ತು ವಾಸಸ್ಥಳ

ಪ್ರಪಂಚದಲ್ಲೇ ಅತೀ ಹೆಚ್ಚು ಬುಡಕಟ್ಟು ಜನರನ್ನು ಹೊಂದಿರುವ ದೇಶದಲ್ಲಿ ಭಾರತ ದೇಶ 2ನೇ ಸ್ಥಾನದಲ್ಲಿದೆ. ಈ ದೇಶದ ಭೌಗೊಳಿಕ ಪ್ರದೇಶದ ಸುಮಾರು ಶೇಕಡ 20ರಷ್ಟು ಭೂ ಪ್ರದೇಶದಲ್ಲಿ ಬುಡಕಟ್ಟು ಜನರು ವಾಸಿಸುತ್ತಿದ್ದಾರೆ. ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ಎಂಟರಷ್ಟು ಬುಡಕಟ್ಟು ಜನರಿದ್ದಾರೆ. ಸುಮಾರು 70 ದಶಲಕ್ಷ ಜನರು ಬುಡಕಟ್ಟು ವರ್ಗಕ್ಕೆ ಸೇರಿದವರಾಗಿದ್ದಾರೆ. ಉತ್ತರದಲ್ಲಿ ಹಿಮಾಲಯ ಪ್ರದೇಶಕ್ಕೆ ಸೇರಿದ ವಿವಿಧ ಪ್ರದೇಶಗಳಾದ ಜಮ್ಮು ಮತ್ತು ಕಾಶ್ಮೀರ, ಹಿಮಾಚಲಪ್ರದೇಶ, ಅಸ್ಸಾಂ, ಮಣಿಪುರ ಮತ್ತು ನಾಗಾಲ್ಯಾಂಡ್‌ನಲ್ಲಿ ಕಂಡುಬರುತ್ತಾರೆ. ಮಧ್ಯಭಾರತದಲ್ಲಿ ಬಹುಪಾಲು ಬುಡಕಟ್ಟು ಸಮುದಾಯವು ನರ್ಮದಾ ನದಿಯ ಸುತ್ತಮುತ್ತಲಿನ ಪ್ರದೇಶದಲ್ಲಿ ಹಾಗೂ ಸ್ವಲ್ಪ ಮಟ್ಟಿಗೆ ಗೋದಾವರಿ ನದಿಯ ಆಸುಪಾಸಿನ ಗುಡ್ಡಗಾಡುಗಳಲ್ಲಿ ವಾಸವಾಗಿದ್ದಾರೆ. ಕೆಲವರು ಬಿಹಾರ ಮತ್ತು ಪಶ್ಚಿಮ ಬಂಗಾಳದಲ್ಲಿದ್ದಾರೆ. ಅತೀ ಕಡಿಮೆ ಬುಡಕಟ್ಟು ಜನಸಂಖ್ಯೆಗಳಿರುವ ಪ್ರದೇಶವೆಂದರೆ ದಕ್ಷಿಣ ಭಾರತದ ಕರ್ನಾಟಕ, ಆಂದ್ರ ಪ್ರದೇಶ, ತಮಿಳುನಾಡು ಮತ್ತು ಕೇರಳ.

ವಿವಿಧ ರಾಜ್ಯಗಳ ಬುಡಕಟ್ಟು ಜನಸಂಖ್ಯೆಯ ವೈವಿಧ್ಯತೆಯೂ ಕೂಡ ಗಮನಾರ್ಹವಾಗಿದೆ. ಈಶಾನ್ಯ ರಾಜ್ಯಗಳಾದ ಅರುಣಾಚಲ ಪ್ರದೇಶ, ಮಿಜೋರಾಂ, ಮೇಘಾಲಯ, ನಾಗಾಲ್ಯಾಂಡ್ ರಾಜ್ಯದ ಬಹುಪಾಲು (90%) ಜನಸಂಖ್ಯೆಯು ಬುಡಕಟ್ಟು ವರ್ಗದವರಾಗಿದ್ದಾರೆ. ಇತರೇ ಈಶಾನ್ಯ ರಾಜ್ಯಗಳಾದ ಅಸ್ಸಾಂ, ಸಿಕ್ಕಿಂ, ಮಣಿಪುರ ತ್ರಿಪುರ ಜನಸಂಖ್ಯೆಯ ಶೇಕಡ 20–30ರಷ್ಟು ಬುಡಕಟ್ಟು ವರ್ಗದವರಾಗಿದ್ದಾರೆ. ಅತ್ಯಂತ ಹೆಚ್ಚು ವೈವಿಧ್ಯಮಯ ಬುಡಕಟ್ಟುಗಳನ್ನು ಹೊಂದಿರುವ ಮಧ್ಯಭಾರತಲ್ಲಿ ಅಲ್ಲಿನ ಜನಸಂಖ್ಯೆಯ ಶೇಕಡ 10 ರಷ್ಟು ಮಾತ್ರ ಬುಡಕಟ್ಟು ವರ್ಗದವರನ್ನು ಹೊಂದಿದೆ. ನಮ್ಮ ದೇಶದಲ್ಲಿ ಒಟ್ಟು 573 ಸಮುದಾಯಗಳನ್ನು ಬುಡಕಟ್ಟು ವರ್ಗವೆಂದು ಗುರುತಿಸಿ ಇವರಿಗೆ ಸರ್ಕಾರದಿಂದ ವಿಶೇಷ ಸವಲತ್ತುಗಳಿಗೆ ಅನುವು ಮಾಡಿಕೊಡಲಾಗಿದೆ. ಹಾಗೆಯೇ ಕರ್ನಾಟಕದಲ್ಲಿ 50 ಬುಡಕಟ್ಟುಗಳು ಸರ್ಕಾರದ ಪಟ್ಟಿಯಲ್ಲಿ ಪರಿಶಿಷ್ಟ ಪಂಗಡ ಎಂದು ಗುರುತಿಸಲ್ಪಟ್ಟಿವೆ.

ಕರ್ನಾಟಕ ರಾಜ್ಯದ ಜನಗಣತಿಯ ದಾಖಲೆಯಂತೆ 1981 ರಲ್ಲಿ ಒಟ್ಟು ಜನಸಂಖ್ಯೆಯ ಶೇಕಡ 4.91 ರಷ್ಟು (18,25,203), 1991ರಲ್ಲಿ, ಶೇಕಡ 4.26 (19,15,691) ರಷ್ಟು ಹಾಗೂ 2001ರಲ್ಲಿ ಶೇಕಡ 6.6(3,463,986) ರಷ್ಟು ಬುಡಕಟ್ಟು ಜನರು ವಾಸಿಸುತ್ತಿದ್ದಾರೆ. ವಿವಿಧ ರಾಜ್ಯಗಳಲ್ಲಿ

ವಾಸಿಸುತ್ತಿರುವ ಬುಡಕಟ್ಟು ಜನರನ್ನು ಗಮನಿಸಿದಾಗ ನಮ್ಮ ರಾಜ್ಯವು ಒರಿಸ್ಸಾ ರಾಜ್ಯದ ನಂತರದ ಅತೀ ಹೆಚ್ಚು ಬುಡಕಟ್ಟು ಜನರನ್ನು ಹೊಂದಿದ ರಾಜ್ಯವಾಗಿದೆ. Scheduled Castes and Scheduled Tribes Order (amendment) Act –1972 and Act–39 0f 1991ರ ಪ್ರಕಾರ ಕರ್ನಾಟಕದಲ್ಲಿ 50 ಸಮುದಾಯಗಳು ಬುಡಕಟ್ಟು ಸಮುದಾಯಕ್ಕೆ ಸೇರಿವೆ. ಈ ಬುಡಕಟ್ಟುಗಳು ತಮ್ಮದೇ ಆದ ಆಚಾರ ವಿಚಾರ ರೂಢಿ ಸಂಪ್ರದಾಯ, ನಿರ್ಧಿಷ್ಟ ವಾಸಸ್ಥಳ, ಕುಲ, ಕಸುಬು, ನ್ಯಾಯ ಪದ್ದತಿ, ಭಾಷೆ, ವೇಷಭೂಷಣಗಳನ್ನು ಹೊಂದಿ ಬಾಳುತ್ತಿವೆ. ಕೆಲವು ಸಮುದಾಯಗಳು ಇಂದಿಗೂ, ಬೇಟೆ, ಪಶುಪಾಲನೆಯನ್ನು ಅವಲಂಬಿಸಿದರೆ, ಮತ್ತೆ ಕೆಲವು ಸಮುದಾಯಗಳು ಕೃಷಿ, ಕೂಲಿ, ವ್ಯಾಪಾರ, ಮುಂತಾದವುಗಳನ್ನು ಅವಲಂಬಿಸಿವೆ. ಬುಡಕಟ್ಟು ಸಮುದಾಯಗಳಲ್ಲಿಯೇ ಜೇನು ಕುರುಬ ಮತ್ತು ಕಾಡು ಕುರುಬ ಬುಡಕಟ್ಟುಗಳು ಆದಿವಾಸಿ ಮೂಲನಿವಾಸಿ ಬುಡಕಟ್ಟುಗಳೆಂದು ಗುರುತಿಸಲಾಗಿದೆ. 2001 ಜನಗಣತಿಯಂತೆ ಕರ್ನಾಟಕದಲ್ಲಿ ಇವರ ಜನಸಂಖ್ಯೆಯು ಅನುಕ್ರಮವಾಗಿ 29,824 ಮತ್ತು 16,071 ರಷ್ಟಿದೆ.

**2.3.2 ಬುಡಕಟ್ಟು ಸಮುದಯಗಳ ವಾಸಸ್ಥಳ**

**ಅರಣ್ಯಗಳು**

"ಅರಣ್ಯವೆಂದರೆ ಒಂದು ವಿಶಿಷ್ಟ ಜೀವಕೋಶ. ಇದರ ಸೌಂದರ್ಯ ನಿಸ್ಸೀಮ. ಕಲ್ಯಾಣ ಗುಣ ಅನಂತ. ಇದು ತನಗಾಗಿ ಏನನ್ನು ಬೇಡದೇ, ಬೇಡಿ ಬಂದ ಎಲ್ಲರಿಗೂ ತನ್ನ ಅಸ್ತಿತ್ವವನ್ನೇ ದಾರೆ ಎರೆಯುತ್ತದೆ. ಎಲ್ಲ ಜೀವಿಗಳಿಗೂ ಆಶ್ರಯ ನೀಡುತ್ತದೆ. ತನ್ನನ್ನು ಕಡಿಯಲು ಕೊಡಲಿ ತಂದವನಿಗೂ ನೆರಳು ನೀಡುತ್ತದೆ."

**– ಗೌತಮ ಬುದ್ಧ**

ಭೂ ಮೇಲ್ಮೈಯ ಶೇಕಡ 30ರಷ್ಟು ಪ್ರದೇಶದಲ್ಲಿ ಕಂಡುಬರುವ ಅರಣ್ಯಗಳು ಸಸ್ಯ ಜಗತ್ತಿನ ವಿಕಾಸದಲ್ಲಿ ಮೂಡಿಬಂದಿರುವ ಉತ್ತುಂಗ ವ್ಯವಸ್ಥೆಗಳು. ಇವು ಅತೀ ಹೆಚ್ಚಿನ ಜೀವ ದ್ರವ್ಯವನ್ನು ಉತ್ಪಾದಿಸುತ್ತವೆ. ಅಸಂಖ್ಯ ಜೀವಿಗಳಿಗೆ ಆಶ್ರಯ ನೀಡಿವೆ ಹಾಗೂ ವೈವಿಧ್ಯಮಯ ಜೀವಿಗಳ ಉದ್ಭವಕ್ಕೆ ಮೂಲ ಕೇಂದ್ರಗಳಾಗಿವೆ. ದ್ಯುತಿಸಂಶ್ಲೇಷಣೆಯ ಮೂಲಕ ಸೌರಶಕ್ತಿಯನ್ನು ಆಹಾರದ ಶಕ್ತಿಯನ್ನಾಗಿ ಪರವರ್ತಿಸುವುದರಿಂದ ಮತ್ತು ಮಣ್ಣಿನಲ್ಲಿನ ಪೋಷಕಾಂಶಗಳನ್ನು ಉಪಯೋಗಿಸಿಕೊಂಡು ಕಾಂಡ, ಎಲೆ, ಹಣ್ಣು ಹಂಪಲಗಳ ರೂಪದಲ್ಲಿ ಜೀವದ್ರವ್ಯವನ್ನು ಉತ್ಪಾದಿಸುವುದರಿಂದ ಪ್ರಪಂಚದ ಎಲ್ಲ ಪ್ರಾಣಿಗಳ ಆಹಾರಕ್ಕೆ ಇವು ಮೂಲ. ಮರಗಳಿಂದ ಎಲೆಗಳು ಉದುರಿ ಕೊಳೆತು ಮಣ್ಣಿಗೆ ಪೋಷಕಾಂಶಗಳನ್ನು ಒದಗಿಸುತ್ತವೆ. ಇದರಿಂದ ಮಣ್ಣು ಮತ್ತಷ್ಟು ಫಲವಾಗುತ್ತದೆ.

ನಮ್ಮ ರಾಜ್ಯದಲ್ಲಿ ಉಷ್ಣವಲಯದ ಕಾಡುಗಳಿವೆ. ಅವುಗಳನ್ನು ನಿತ್ಯ ಹಸಿರು ಕಾಡು, ಅರೆ ಹಸಿರು ಕಾಡು, ತೇವದ ಉದಿರೆಲೆ ಕಾಡು, ಒಣ ಉದಿರೆಲೆ ಕಾಡು, ಮತ್ತು ಕುರುಚಲ ಅರಣ್ಯಗಳಾಗಿ

ವಿಂಗಡಿಸಬಹುದು. ಉಷ್ಣವಲಯದ ಕಾಡುಗಳು ಪ್ರಪಂಚದ ಮುಖ್ಯ ಪರಿಸರ ಪರಿಸ್ಥಿತಿಗಳಲ್ಲೊಂದು. ಇವುಗಳಲ್ಲಿ ಅಪಾರ ವೈವಿಧ್ಯತೆಯ ಮತ್ತು ಅಪಾರ ಸಂಖ್ಯೆಯ ಸಸ್ಯಗಳು ಮತ್ತು ಪ್ರಾಣಿಗಳು ಜೀವಿಸುತ್ತವೆ. ಒಂದು ಚದರ ಹೆಕ್ಟೇರು ಅರಣ್ಯದಲ್ಲಿ 200 ರಿಂದ 300 ವಿವಿಧ ಪ್ರಬೇಧಗಳ ಭಾರಿ ಮರಗಳನ್ನೂ, ಅಷ್ಟೇ ಸಂಖ್ಯೆಯ ಸಣ್ಣ ಗಿಡ ಮರಬಳ್ಳಿಗಳನ್ನೂ ಕಾಣಬಹುದು.

ಕರ್ನಾಟಕ ರಾಜ್ಯದಲ್ಲಿ 3.87 ದಶಲಕ್ಷ ಹೆಕ್ಟೇರ್ ಅರಣ್ಯ ಪ್ರದೇಶವಿದ್ದು, ರಾಜ್ಯದ ಒಟ್ಟು ಭೂಮಿಯ ಶೇಕಡ 20.19 ಭಾಗವನ್ನು ಆವರಿಸಿದೆ ಎಂದು 1999ರ ಭಾರತದ ಅರಣ್ಯ ಸಮೀಕ್ಷೆಯ ವರದಿ ತಿಳಿಪಡಿಸಿದೆ. ಇದರಲ್ಲಿ 73.88 ಪ್ರತಿಶತದಷ್ಟು ಭಾಗ ಕಾಯ್ದಿರಿಸಿದ ಅರಣ್ಯ, 10.16ಪ್ರತಿಶತ ಸಂರಕ್ಷಿತ ಅರಣ್ಯ ಹಾಗೂ ಉಳಿದ 15.96ಪ್ರತಿಶತ ಯಾವುದೇ ನಿಯಮಕ್ಕೆ ಒಳಪಡದ ಅರಣ್ಯ ಪ್ರದೇಶವಾಗಿದೆ. ಕರ್ನಾಟಕದಲ್ಲಿ ಒಟ್ಟು 1212 ಗ್ರಾಮ ಅರಣ್ಯ ಸಮಿತಿಗಳಿದ್ದು ರಾಜ್ಯದ 12,800 ಹೆಕ್ಟೇರ್ ಅರಣ್ಯ ಪ್ರದೇಶವು ಈ ಸಮಿತಿಗಳ ಕಾರ್ಯಕ್ಕೊಳಪಟ್ಟಿವೆ ( ಗಣಪತಿ ಮತ್ತಿತರರು, 2000).

ಅರಣ್ಯಗಳನ್ನು ಮನುಷ್ಯ ನೋಡುವ ದೃಷ್ಟಿಯೇ ಬೇರೆ. ಅವು ಆತನಿಗೆ ಅಮೂಲ್ಯ ಸಂಪನ್ಮೂಲಗಳ ಆಗರ ಮತ್ತು ರಕ್ಷಣಾ ಸಾಮಗ್ರಿಗಳ ಆಕರಗಳು, ಉರುವಲು ಸೌದೆ, ಬೆಲೆಬಾಳುವ ಚೌಬೀನೆ, ಕೈಗಾರಿಕಾ ಕಚ್ಚಾ ಪದಾರ್ಥಗಳು, ರಾಳ, ಗೋಂದು, ತೈಲಗಳು, ಔಷಧಿಗಳು, ನಾರು, ಮೇವು ಮುಂತಾದವುಗಳನ್ನು ನೀಡಬಲ್ಲ ಭಂಡಾರ.

ಪ್ರತಿ ವರ್ಷ ಮನುಷ್ಯ ಅರಣ್ಯಗಳಿಂದ 92,400 ಕೋಟಿ ರೂ.ಗಳಷ್ಟು ಬೆಲೆಬಾಳುವ ವಸ್ತುಗಳನ್ನು ಪಡೆದು ಬಳಸುತ್ತಿದ್ದಾನೆ. ಅಭಿವೃದ್ಧಿಶೀಲ ರಾಷ್ಟಗಳಲ್ಲಿ 150 ಕೋಟಿ ಜನರಿಗೆ ಬೇಕಾದ ಉರುವಲು ಸೌದೆ ಅರಣ್ಯಗಳಿಂದ ಬರುತ್ತಿದೆ. ದನಕರುಗಳಿಗೆ ಬೇಕಾದ 300 ಕೋಟಿಗಳಷ್ಟು ಬೆಲೆಬಾಳುವ ಆಹಾರ ಪದಾರ್ಥಗಳು ಅರಣ್ಯಗಳಿಂದ ಬರುತ್ತಿದೆ. ಮನುಷ್ಯನು ಅರಣ್ಯಗಳನ್ನು ಕೇವಲ ಲಾಭಕರ ದೃಷ್ಟಿಯಿಂದ ನೋಡುತ್ತಿರುವುದರಿಂದ ಅರಣ್ಯ ನಾಶ ಅವ್ಯಾಹತವಾಗಿ ನಡೆಯುತ್ತಿದೆ. ವ್ಯವಸಾಯದ ವಿಸ್ತರಣೆ, ವಸತಿ, ಕೈಗಾರಿಕೆಗಳು, ಅಣೆಕಟ್ಟು, ಗಣಿ ಕೆಲಸ, ರಬ್ಬರ್, ಟೀ, ಕಾಫಿ, ತೋಟಗಾರಿಕೆ, ಮರಮುಟ್ಟುಗಳ ಅಗತ್ಯ ಮುಂತಾದವುಗಳಿಗಾಗಿ ಅರಣ್ಯ ನಾಶ ಮುಂದುವರೆಯುತ್ತಿದೆ (ನಿರಂಜನ ಆರಾಧ್ಯ ಮತ್ತು ರವಿಚಂದ್ರರೆಡ್ಡಿ, 1990).

ಭಾರತದ ಒಟ್ಟು ವಿಸ್ತಾರದ 1/3 ರಷ್ಟಾದರೂ ಕಾಡನ್ನು ಉಳಿಸಬೇಕು ಎಂದು 1952ರಲ್ಲಿ ಜಾರಿಗೆ ಬಂದ ರಾಷ್ಟ್ರೀಯ ಅರಣ್ಯ ಧೋರಣೆಯಲ್ಲಿ ಹೇಳಲಾಗಿದೆ. ಆದರೆ ಇವತ್ತು ಅರಣ್ಯ ಆಧೀನದಲ್ಲಿ ಭಾರತದ ವಿಸ್ತಾರದ 23ಪ್ರತಿಶತ ನೆಲ ಇದೆ. ಅದರಲ್ಲಿ ಗಿಡಮರಗಳ ಹೊದ್ದಿಕೆ ಇರುವ ಪ್ರದೇಶ ಕೇವಲ 10ರಿಂದ 12ಪ್ರತಿಶತ. ಕರ್ನಾಟಕದ ಅರಣ್ಯಗಳು ಭೂಭಾಗದ ಶೇಕಡ 15.2ರಷ್ಟು ಇದೆಯೆಂದು ಹೇಳುತ್ತಿದ್ದರೂ 10-12ಪ್ರತಿಶತ ದಷ್ಟು ಮಾತ್ರ ಅರಣ್ಯ ಉಳಿದಿರಬಹುದೆಂದು ತಜ್ಞರು ತಿಳಿಸುತ್ತಾರೆ.

ಶಿರಾಡಿ, ಚಾಮುಂಡಿ, ನಗೋಡಿ, ಆಗುಂಬೆ, ಅರಬೈಲ್, ನಾಗವಳ್ಳಿ, ಗೇರುಸೊಪ್ಪ, ದೇವಿಮನೆ ಮುಂತಾದ ಘಟ್ಟ ಪ್ರದೇಶಗಳು ಕಾವೇರಿ, ಚಂದ್ರಗಿರಿ, ಬರಪೊಳ, ನೇತ್ರಾವತಿ, ಸೀತಾ, ಗಂಗಾವಳಿ, ಶರಾವತಿ, ಬೇಡ್ತ, ಅಘನಾಶಿನಿ, ಮುಂತಾದ ನದಿಗಳು ಈ ಎಲ್ಲವನ್ನೂ ಒಳಗೊಂಡ ಕರ್ನಾಟಕದ ಪಶ್ಚಿಮ ಘಟ್ಟಗಳು ಕರಾವಳಿಯ ನಡುವಿನ ವೈವಿಧ್ಯಮಯ ಭೂಪ್ರದೇಶಗಳಾದ ಕೊಡಗು, ಚಿಕ್ಕಮಂಗಳೂರು, ಶಿವಮೊಗ್ಗ, ದಕ್ಷಿಣ ಕನ್ನಡ ಹಾಗೂ ಉತ್ತರ ಕನ್ನಡ ಜಿಲ್ಲೆಗಳಲ್ಲಿ ಕಂಡುಬರುವ ಸೋಲಿಗರು, ಯರವರು, ಕುಡುಬಿಯರು, ಕಾಡು ಕುರುಬರು, ಗೊಂಡರು, ಕುಣಬಿಯರು, ಹಸಲರು, ಸಿದ್ದಿಯರು, ಗೌಳಿಗರು, ಹಾಲಕ್ಕಿ ಒಕ್ಕಲಿಗರು, ಕೊರಗರು ಮಲೆಕುಡಿಯರು, ಮೇರರು, ಮನ್ನರು ಮತ್ತು ಭೈರರು ಅರಣ್ಯದ ಆಶ್ರಯದಲ್ಲಿ ಬದುಕುತ್ತಿದ್ದಾರೆ. ಈ ಬುಡಕಟ್ಟುಗಳಲ್ಲಿಯೂ ಕೂಡಾ ಎರಡು ವರ್ಗಗಳನ್ನು ಗುರುತಿಸಬಹುದು. ಅನಾದಿ ಕಾಲದಿಂದಲೂ ಸಹ್ಯಾದ್ರಿಯ ಆಜುಬಾಜಿನಲ್ಲಿ ವಾಸವಿದ್ದ ಮೂಲ ನಿವಾಸಿಗಳದ್ದು ಒಂದು ವರ್ಗವಾದರೆ, ನಾನಾ ಕಾರಣಗಳಿಗಾಗಿ ಬೇರೆ ಬೇರೆ ಪ್ರದೇಶಗಳಿಂದ ವಲಸೆ ಬಂದು ನೆಲೆ ನಿಂತ ಜನವರ್ಗಗಳೂ ಇಲ್ಲಿವೆ. ಆಹಾರ ಸಂಗ್ರಹಣೆ, ಬೇಟೆ, ಹೈನುಗಾರಿಕೆ, ಕೂಲಿ, ಕಸೂತಿ ಹಾಗೂ ಕುಶಲಕಲೆ ಇವರ ಜೀವನೋಪಾಯಕ್ಕಾಗಿ ಅರಿಸಿಕೊಂಡ ಮಾರ್ಗಗಳು (ಬೋರಲಿಂಗಯ್ಯ, 2006).

### 2.3.3 ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿ

**ಶೈಕ್ಷಣಿಕ ವಿವರಗಳು:** ಶಿಕ್ಷಣ ಮನುಷ್ಯನ ಸರ್ವತೋಮುಖ ಅಭಿವೃದ್ಧಿಯ ಸಾಧನವೆನ್ನಬಹುದು. ಸಾಕ್ಷರತೆಗೆ ಹಾಗೂ ಆರೋಗ್ಯ, ಮತ್ತು ಸಾಮಾಜಿಕ-ಆರ್ಥಿಕ ಸ್ಥಿತಿಗಳಿಗೆ ನೇರವಾದ ಸಂಬಂಧವಿರುವುದು ಅನೇಕ ಅಧ್ಯಯನಗಳಿಂದ ರುಜುವಾತಾದ ಸಂಗತಿ. ಆದರೆ ನಮ್ಮ ದೇಶದ ಬುಡಕಟ್ಟುಗಳ ಸಾಕ್ಷರ ಪ್ರಮಾಣವನ್ನು ಗಮನಿಸಿದಾಗ ಇವರು ಇತರ ಜನರಿಗಿಂತ ಸಾಕ್ಷರತೆಯ ಪ್ರಮಾಣದಲ್ಲಿ ತುಂಬಾ ಹಿಂದುಳಿದಿರುವುದು ಕಂಡುಬರುತ್ತದೆ. ನಮ್ಮ ರಾಜ್ಯದ ಬುಡಕಟ್ಟು ಜನರ ಸಾಕ್ಷರತೆಯು 1991 ರಲ್ಲಿ ಶೇಕಡ 36 (ಜನಗಣತಿ, 1991) ಹಾಗೂ 2001ರಲ್ಲಿ ಶೇಕಡ 48.3 (ಜನಗಣತಿ, 2001) ಇದೆ.

ಕೃಷಿಕ ಬುಡಕಟ್ಟುಗಳಲ್ಲಿ ಶೇಕಡ 78.7 ಜನರು ಅನಕ್ಷರಸ್ಥರಿರುವುದಾಗಿ ಕೃಷಿಕ ಬುಡಕಟ್ಟುಗಳ ಅಧ್ಯಯನ ತಿಳಿಸುತ್ತದೆ. ಕೃಷಿಕ ಬುಡಕಟ್ಟುಗಳಲ್ಲಿ ಯಾರೊಬ್ಬರು ಸಹ ಪದವಿಯವರೆಗೆ ಓದಿದವರಿಲ್ಲ. ಬಹಳಷ್ಟು ಜನ ಪ್ರಾಥಮಿಕ ಶಿಕ್ಷಣ ಮಾತ್ರ ಪಡೆದವರಾಗಿದ್ದಾರೆ (ರತ್ನಾಕರ, 1990).

ಮಂಜುಳಾ(1991) ರ ಅಧ್ಯಯನದಿಂದ ತಿಳಿದುಬಂದ ಸಂಗತಿಯಂತೆ ಶೇಕಡ 46.9 ಬುಡಕಟ್ಟು ಜನರು ಪ್ರಾಥಮಿಕ ಶಿಕ್ಷಣ, ಶೇಕಡ 18.36ರಷ್ಟು ಮಾಧ್ಯಮಿಕ ಶಿಕ್ಷಣ ಮತ್ತು ಶೇಕಡ 8.16ರಷ್ಟು 10ನೇ ತರಗತಿವರೆಗೆ ಓದಿದವರಾಗಿದ್ದಾರೆ. ಕೊಂಡ, ಗಡಬ ಮತ್ತು ಪೊರ್ಜ ಬುಡಕಟ್ಟುಗಳಲ್ಲಿ ಬಹಳಷ್ಟು ಮಹಿಳೆಯರು (87–98%) ಅನಕ್ಷರಸರಾಗಿರುವುದು ಮತ್ತು ಕೇವಲ ಎರಡು ಪ್ರತಿಶತ ಮಹಿಳೆಯರು ಪ್ರಾಥಮಿಕ ಶಿಕ್ಷಣವನ್ನು ಹೊಂದಿರುವುದನ್ನು ಕುಪ್ಪುತಾಯಿ ಮತ್ತು ಮಲ್ಲಿಕಾ (1993) ರವರ ಅಧ್ಯಯನ ತಿಳಿಸುತ್ತದೆ.

ಜೇನುಕುರುಬರಲ್ಲಿ ಶೇಕಡ 72 ಜನರು ಅನಕ್ಷರಸ್ಥರಾಗಿದ್ದು, ಮಿಕ್ಕವರು ಶಿಕ್ಷಣ ಪಡೆದಿದ್ದರೂ ಸಹ ಪದವಿಯವರೆಗೆ ಯಾರೊಬ್ಬರು ಓದದೆ ಇರುವುದು ರೇವಣ್ಣ (1993) ರವರ ಅಧ್ಯಯನದಿಂದ ತಿಳಿದುಬಂದಿದೆ. ರಾಜಸ್ಥಾನದ ಬುಡಕಟ್ಟುಗಳಲ್ಲಿ ಶೇಕಡ 13.18 ಪ್ರತಿಶತ ಜನರು ಮಾತ್ರ ಶಿಕ್ಷಣ ಪಡೆದವರಿದ್ದಾರೆ. ಎಲ್ಲ ಹೆಣ್ಣುಮಕ್ಕಳು ಅನಕ್ಷರಸ್ಥರಾಗಿಯೇ ಇದ್ದಾರೆ(ನಾಗ್ಡಾ, 2004).

**ಕೌಟುಂಬಿಕ ವಿವರಗಳು**

ಲಂಬಾಣಿ ಬುಡಕಟ್ಟುಗಳಲ್ಲಿ ಶೇಕಡ 64 ವಿಭಕ್ತ ಕುಟುಂಬಗಳು ಹಾಗೂ ಶೇಕಡ 36 ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿವೆ. 54 ಪ್ರತಿಶತ ಕುಟುಂಬಗಳಲ್ಲಿಯ ಜನರ ಸಂಖ್ಯೆಯು ಆರಕ್ಕಿಂತ ಹೆಚ್ಚಿದ್ದು ಇನ್ನುಳಿದಂತೆ ಶೇಕಡ 46 ಬುಡಕಟ್ಟುಗಳಲ್ಲಿಯ ಜನರ ಸಂಖ್ಯೆ 1 ರಿಂದ 5 ಜನರನ್ನೊಳಗೊಂಡಿದೆ (ಸಮತಾ ಮತ್ತು ಶ್ಯಾಮಸುಂದರ್, 1985). ಕೃಷಿಕ ಬುಡಕಟ್ಟುಗಳು ಹೆಚ್ಚಾಗಿ ವಿಭಕ್ತ ಕುಟುಂಬಗಳಾಗಿದ್ದು ಇವರಲ್ಲಿಯ ಜನರ ಸಂಖ್ಯೆ ಐದಕ್ಕಿಂತ ಕಡಿಮೆ ಇರುವುದಾಗಿ ರತ್ನಾಕರ್(1990) ಅಧ್ಯಯನ ತಿಳಿಸುತ್ತದೆ.

ಮಿತ್ತಲ್ ಮತ್ತು ಶ್ರೀವಾತ್ಸವ್(2006)ರವರು ಓರಿಯನ್ ಬುಡಕಟ್ಟುಗಳ ಆಹಾರ, ಪೌಷ್ಟಿಕ ಸ್ಥಿತಿ ಮತ್ತು ಆಹಾರ ಸಂಬಂಧಿತ ಸಂಪ್ರದಾಯಗಳ ಕುರಿತು ಅಧ್ಯಯನ ಕೈಗೊಂಡಿದ್ದು ಇವರ ಅಧ್ಯನದ ವರದಿಯಂತೆ ಓರಿಯನ್ ಬುಡಕಟ್ಟುಗಳ ಕಸುಬು ಕೃಷಿಯಾಗಿದೆ. ಮುಖ್ಯವಾಗಿ ಟೀ ತೋಟಗಳಲ್ಲಿ ಕೂಲಿಯಾಗಿ ದುಡಿಯುವ ಇವರು ಜಾರ್ಖಂಡ್ ಮತ್ತು ಪಶ್ಚಿಮ ಬಂಗಾಳದಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಹೆಚ್ಚಾಗಿ ವಿಭಕ್ತ ಕುಟುಂಬ ಹೊಂದಿದ ಇವರಲ್ಲಿ ಬಹಳಷ್ಟು ಜನ ಅನಕ್ಷರಸ್ತರಿದ್ದಾರೆ.

ರಾವ್ ಮತ್ತಿತರರು (2006), ಭಾರತದ ಒಂಭತ್ತು ರಾಜ್ಯಗಳ ಬುಡಕಟ್ಟು ಸಮುದಾಯದಲ್ಲಿ ಆಹಾರ ಮತ್ತು ಪೌಷ್ಟಿಕತೆ ಹಾಗೂ ಸಾಮಾಜಿಕ ಸ್ಥಿತಿ ಕುರಿತು ಅಧ್ಯಯನ ಮಾಡಿದ್ದಾರೆ. ಇವರ ತಂಡವು ಬುಡಕಟ್ಟು ಸಮುದಾಯಗಳು ವಾಸಿಸುತ್ತಿರುವ ಎಲ್ಲ ಪ್ರಮುಖ ಒಂಭತ್ತು ರಾಜ್ಯಗಳಲ್ಲಿ ಸರ್ವೇಕ್ಷಣ ಮಾಡಿ 4775 ಕುಟುಂಬಗಳ ಸಂದರ್ಶನಗಳನ್ನಾಧರಿಸಿ ವರದಿ ಮಾಡಿದ್ದಾರೆ. ಈ ಅಧ್ಯಯನವು ಒಳಗೊಂಡ ಬುಡಕಟ್ಟು ಸಮುದಾಯಗಳ ಸಂಪೂರ್ಣ ಸಾಮಾಜಿಕ-ಆರ್ಥಿಕ ವಿವರಗಳನ್ನು ಕೋಷ್ಟಕ 2.1ರಲ್ಲಿ ವಿವರಿಸಲಾಗಿದೆ.

ಕೋಷ್ಟಕ 2.1 ಬುಡಕಟ್ಟು ಕುಟುಂಬಗಳ ಸಾಮಾಜಿಕ–ಆರ್ಥಿಕ ವಿವರಗಳು

| ಕ್ರ. ಸಂ. | ವಿವರಗಳು | | ಶೇಕಡಾವಾರು |
|---|---|---|---|
| 1. | ಧರ್ಮ | ಹಿಂದು ಧರ್ಮ | 98.30 |
| | | ಇತರೆ ಧರ್ಮ | 1.70 |
| 2 | ಕೌಟುಂಬಿಕ ವಿಧ | ವಿಭಕ್ತ ಕುಟುಂಬ | 81.90 |
| | | ಅವಿಭಕ್ತ ಕುಟುಂಬ | 7.80 |
| | | | 10.30 |
| 3 | ಕುಟುಂಬದ ಗಾತ್ರ | 1–4 ಸದಸ್ಯರು | 47.80 |
| | | 5–10 ಸದಸ್ಯರು | 50.70 |
| | | > 10 ಸದಸ್ಯರು | 1.50 |
| 4 | ವಸತಿ | ಸ್ವಂತ ಮನೆಯುಳ್ಳವರು | 98.20 |
| | | ಸ್ವಂತ ಮನೆ ಇಲ್ಲದವರು | 1.80 |
| 5 | ಮನೆಯ ವಿಧ | ಕಚ್ಚಾ | 38.00 |
| | | ಅರೆಪಕ್ಕಾ | 61.30 |
| | | ಪಕ್ಕಾ | 0.70 |
| 6. | ಭೂ ಹಿಡುವಳಿ (ಎಕರೆಗಳಲ್ಲಿ) | ಭೂ ರಹಿತರು | 35.40 |
| | | < 2.5 | 43.60 |
| | | 2.5–5 | 13.60 |
| | | > 5 | 7.40 |
| 7 | ಉದ್ಯೋಗ | ಕೂಲಿ | 41.50 |
| | | ಕೃಷಿಕರು | 48.30 |
| | | ಕುಶಲಕರ್ಮಿಗಳು, ವ್ಯಾಪಾರಸ್ಥರು ಮತ್ತು ಸೇವೆಯಲ್ಲಿರುವವರು | 7.80 |
| | | ಇತರೆ | 2.40 |

(ರಾವ್ ಮತ್ತಿತರರು, 2006)

### 2.3.4 ಬುಡಕಟ್ಟು ಸಮುದಾಯಗಳ ಜೀವನೋಪಾಯಗಳು

ಬುಡಕಟ್ಟು ಸಮಮುದಾಯಗಳ ಬದುಕು ಜೀವನೋಪಾಯಗಳಿಂದ ಹೊರತಾಗಿಲ್ಲ. ಅವರ ಆರ್ಥಿಕತೆ ಎನ್ನವುದೇನಿದ್ದರೂ ಅದು ಅವರ ಜೀವನ ಆಧಾರಿತ ಕೃಷಿ. ಸ್ವಲ್ಪ ಸಂಗ್ರಹಣೆ ಮತ್ತು ಬೇಟೆಯನ್ನು ಅವಲಂಬಿಸಿದೆ. ಬುಡಕಟ್ಟು ಸಮುದಾಯಗಳಿಗೆ ನೆಲ ಎನ್ನುವುದೊಂದು ಸಮುದಾಯದ ಆಸ್ತಿ. ಆದ್ದರಿಂದ ನೆಲ ಅವರ ಸ್ವತ್ತಾಗಿಲ್ಲ ಬದಲಾಗಿ ಉಪಯೋಗಿಸುವಷ್ಟು ಹೊತ್ತು ಅವರದ್ದಾಗಿರಬಹುದು. ಹಾಗಾಗಿ ನೆಲದ ಮೇಲೆ ಕಾನೂನು ಬದ್ಧ ಹಕ್ಕುಗಳಿರುವುದು ಕಡಿಮೆ. 2001ರ ಜನಗಣತಿಯಂತೆ ಕರ್ನಾಟಕದ ಬುಡಕಟ್ಟು ಸಮುದಾಯದ ಅರ್ಧದಷ್ಟು ಜನರು ಕೆಲಸಗಾರರಾಗಿದ್ದಾರೆ. ಹೆಚ್ಚಿನವರು ಗ್ರಾಮೀಣ ಪ್ರದೇಶದ ನಿವಾಸಿಗಳಾಗಿದ್ದಾರೆ. ಕೆಲವು ಬುಡಕಟ್ಟುಗಳು ಜಮೀನನ್ನು ಹೊಂದಿದ್ದರೂ ಕೂಡ ಅವು ಕಡಿಮೆ ಉತ್ಪಾದಕತೆಯುಳ್ಳ ನೆಲವಾಗಿದೆ. ಜಮೀನೆನ್ನುವುದು ಕೆಲಸಗಳಿಗೆ ಅವರೇ ಕೂಲಿಕಾರರಾಗುವ ರೀತಿಯದ್ದಾಗಿದೆ. ಹೆಚ್ಚಿನ ಜನರಲ್ಲಿ ಯಾವುದೇ ಬಗೆಯ ವೃತ್ತಿ ಕೌಶಲ್ಯಗಳು ಕಾಣಬರದೇ ವಿಶೇಷ ಉತ್ಪನ್ನಗಳನ್ನು ಅವರಿಂದ ಪಡೆಯಲಾಗಿಲ್ಲ. ಅದರ ಜತೆಯಲ್ಲಿ ಅವರ ಕೆಲಸಗಳಿಗೂ ಕೂಡ ಆದಾಯ ಕಡಿಮೆ ಇರುವುದು ಅವರ ಒಟ್ಟಾರೆ ಕೆಳಸ್ಥರದ ಜೀವನಕ್ಕೆ ಕಾರಣವಾಗಿದೆ. ಬುಡಕಟ್ಟು ಸಮುದಾಯಗಳ ಜೀವನೋಪಾಯವನ್ನು ಕುರಿತಂತೆ ಹಲವಾರು ಅಧ್ಯಯನಗಳು ನಡೆದಿದೆ. ಲಭ್ಯವಿರುವ ಅಧ್ಯಯನಗಳಿಂದ ಬುಡಕಟ್ಟು ಜೀವನ ಸಂಸ್ಕೃತಿಯನ್ನು ಅರಿಯಲು, ಜೀವನಾಧಾರಗಳಾದ ಬೇಟೆ, ಅರಣ್ಯ ಉತ್ಪನ್ನಗಳ ಸಂಗ್ರಹಣೆ, ಕೃಷಿ, ಕಾರ್ಮಿಕ ವೃತ್ತಿ ಗಳನ್ನು ಒಂದೊಂದಾಗಿ ಗಮನಿಸಬಹುದು.



2001ರ ಜನಗಣತಿಯ ವರದಿಯಂತೆ, ರಾಜ್ಯದ ಶೇಕಡ 7.65 ರಷ್ಟು ಬುಡಕಟ್ಟು ಕುಟುಂಬಗಳು ಕೃಷಿ ನಿರತವಾಗಿದ್ದು ಶೇಕಡ 11.86 ರಷ್ಟು ಕೃಷಿ ಕಾರ್ಮಿಕರಿದ್ದಾರೆ. ಕೇವಲ ಶೇಕಡ 4.7ರಷ್ಟು ಮಾತ್ರ ವಿವಿಧ ಬಗೆಯ ಗೃಹಕೈಗಾರಿಕೆಗಳಲ್ಲಿ ನಿರತವಾಗಿವೆ. ಜೀವನಾಧಾರಿತ ಕೃಷಿ, ಬೇಟೆ ಮತ್ತು ಕೆಲವು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದನ್ನು ತಲೆತಲಾಂತರದಿಂದ ರೂಢಿಸಿಕೊಂಡು ಬಂದಿದ್ದು ಇವೇ ಇವರ ಆರ್ಥಿಕತೆಯ ಮೂಲಗಳಾಗಿವೆ. 'ಭೂಮಿ' ಎನ್ನುವುದು ಎಲ್ಲರ ಸೊತ್ತು ಎಂದು ನಂಬಿದ ಇವರಲ್ಲಿ ಬಹಳಷ್ಟು ಜನರು ಜಮೀನಿನ ಒಡೆತನದ ಹಕ್ಕು ಪತ್ರಗಳನ್ನು ಹೊಂದಿಲ್ಲ.

ಕರ್ನಾಟಕದ ಕೃಷಿ ಗಣತಿ(2001)ರಂತೆ 30.90 ಪ್ರತಿಶತ ಬುಡಕಟ್ಟುಗಳು ಸಣ್ಣ ಹಿಡುವಳಿದಾರರು, ಶೇಕಡ 19.40 ಜನರು ಸಣ್ಣ ಮದ್ಯಮ ಹಿಡುವಳಿದಾರರು, ಶೇಕಡ 7.1 ಜನರು ಮದ್ಯಮ ಹಿಡುವಳಿದಾರರು ಹಾಗೂ ಶೇಕಡ ಒಂದರಷ್ಟು ಮಾತ್ರ ದೊಡ್ಡ ಹಿಡುವಳಿಗಾರರಾಗಿದ್ದಾರೆ.

ಹಲವಾರು ಪ್ರದೇಶದಲ್ಲಿ ಪ್ರಮುಖವಾಗಿ ಆಂದ್ರ ಪ್ರದೇಶ, ಮಧ್ಯ ಪ್ರದೇಶ, ಅಂಡಮಾನ್ ನಿಕೋಬಾರ್, ಕೇರಳ, ತಮಿಳುನಾಡುಗಳಲ್ಲಿ ನಿಸರ್ಗವನ್ನೇ ಅವಲಂಬಿಸಿ ಸಂಪೂರ್ಣ ಜೀವನ ನಡೆಸುತ್ತಿರುವ ಬಗ್ಗೆ ಹಲವಾರು ಅಧ್ಯಯನಗಳು ಲಭ್ಯ ಇವೆ (ಸ್ವಾಮಿನಾಥನ್ ಮತ್ತಿತರರು, 1971, ಸೇನ್‌ಗುಪ್ತಾ, 1980, ರಾವ್ ಮತ್ತು ಸತ್ಯನಾರಾಯಣ, 1974).

ನೀಲಗಿರಿ ಬೆಟ್ಟ ಪ್ರದೇಶದಲ್ಲಿ ಕಂಡುಬರುವ ತೋಡರು ತಮ್ಮ ಜೀವನೋಪಾಯಕ್ಕಾಗಿ ಸಂಪೂರ್ಣ ನಿಸರ್ಗವನ್ನೇ ಅವಲಂಬಿಸಿದ್ದಾರೆ. ಹಾಗೆಯೇ ಕೇರಳದ ಕೆಲವೊಂದು ಬುಡಕಟ್ಟುಗಳು ನಿಸರ್ಗಾವಲಂಬಿಗಳಾಗಿದ್ದಾರೆ ಎಂದು 1962ರಷ್ಟು ಹಿಂದೆಯೇ ರಾಯ್ ಮತ್ತು ರೇ ಅಧ್ಯಯನವು ತಿಳಿಸುತ್ತದೆ.

ಅರಣ್ಯಗಳು ಹಾಗೂ ಅರಣ್ಯ ಸಂಪನ್ಮೂಲಗಳು ಅದರಲ್ಲಿಯೂ ಮುಖ್ಯವಾಗಿ ಕಿರು ಅರಣ್ಯ ಉತ್ಪನ್ನಗಳು ಬುಡಕಟ್ಟು ಕುಟುಂಬಗಳು ಬದುಕುಳಿಯಲು ಬೇಕಾದಂತಹ ಜೀವನಾವಶ್ಯಕ ವಸ್ತುಗಳನ್ನು ಒದಗಿಸುವ ಆಕರಗಳಾಗಿವೆ (ತಿವಾರಿ, 1989). ಅರಣ್ಯವಾಸಿ ಬುಡಕಟ್ಟುಗಳ ಆರ್ಥಿಕತೆಯ ಮೂಲವು ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದು ಮತ್ತು ಸಂಸ್ಕರಿಸುವುದಾಗಿದೆ (ಮೈಕುರಿ, 1991).

ಮಹಾರಾಷ್ಟ್ರದ ಮರಿಯಾ ಮತ್ತು ಗೊಂಡ ಬುಡಕಟ್ಟು ಸಮುದಾಯದವರ ಕುರಿತು ಹನುಮಂತರಾವ್ ಮತ್ತಿತರರು 1992ರಲ್ಲಿ ಕೈಗೊಂಡ ಅಧ್ಯಯನದ ವರದಿಯಲ್ಲಿ ತಿಳಿಸಿರುವಂತೆ ಇವರ ಆದಾಯದ ಮೂಲಗಳು ಕೂಲಿ, ಕೃಷಿ ಮತ್ತು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದಾಗಿದೆ. ಶೇಕಡ 66.2ರಷ್ಟು ಕೃಷಿಯೇತರ ಕೂಲಿ ಕೆಲಸ, ಶೇಕಡ 21.2ರಷ್ಟು ಕೃಷಿ ಚಟುವಟಿಕೆಗಳು ಮತ್ತು ಶೇಕಡ 6ರಷ್ಟು ವರಮಾನವನ್ನು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುವುದರ ಮೂಲಕ ಪಡೆಯುತ್ತಾರೆ.

ಕರ್ನಾಟಕದ ಉತ್ತರ ಕನ್ನಡ ಜಿಲ್ಲೆ, ಧಾರವಾಡ ಹಾಗೂ ಬೆಳಗಾವಿ ಜಿಲ್ಲೆಯ ಕಾಡು ಮೇಡಗಳಲ್ಲಿ ವಾಸಿಸುವ ಸಿದ್ದಿ ಸಮುದಾಯದ ಮೂಲ ಉದ್ಯೋಗ ಬೇಟೆ. ಈ ಹಿಂದೆ ಕಾಡಿನಲ್ಲಿ ಬೇಟೆಯಾಡಿ, ಗಡ್ಡೆ-ಗೆಣಸು ಸೇವಿಸಿ ಬದುಕುತ್ತಿದ್ದ ಸಿದ್ದಿಗಳಿಗೆ ಅರಣ್ಯ ನೀತಿ ಜಾರಿಯಾದಾಗಿನಿಂದ ಹಾಗೂ ಕಾಡು ಕಡಿಮೆಯಾಗಿದ್ದರಿಂದ ಬೇಸಾಯ ಆರಂಭಿಸಿರುವ ಇವರು ಭತ್ತ, ತರಕಾರಿ ಬೆಳೆಯುತ್ತಾರೆ. ಆದರೆ ಬಹುತೇಕ ಸಿದ್ದಿಗಳು ಬೇರೆಯವರ ಗದ್ದೆ, ಇನ್ನಿತರ ಕಡೆಗಳಲ್ಲಿ ಕೂಲಿಗಳಾಗಿ ಕೆಲಸ ಮಾಡುತ್ತಿದ್ದಾರೆ (ಮಂಜುನಾಥ್ ನೇಕಾರ್, 2011).

ಅಡವಿಚೆಂಚರು ಮಧ್ಯ ಭಾರತದಲ್ಲಿರುವ ವಿಂಧ್ಯ ಪರ್ವತದ ಕೊಳ್ಳದಲ್ಲಿ ನೆಲಸಿ ಅಲ್ಲಿಯೇ ಕಾಡುಮೃಗಗಳ ಬೇಟೆಯಾಡಿ ತಮ್ಮ ಉಪಜೀವನವನ್ನು ಸಾಗಿಸಿಕೊಂಡು ಹೋಗುವಂತಹ ಸಂಪ್ರದಾಯದವರು ಮತ್ತು ಬೇಟೆಯಾಡುವುದೇ ಇವರ ಮುಖ್ಯ ಉದ್ಯೋಗವಾಗಿದೆ ಎಂದು ತಿಪ್ಪೇಸ್ವಾಮಿ (2011)ಯವರು ವರದಿ ಮಡಿದ್ದಾರೆ.

ಶಿವಮೊಗ್ಗ, ಧಾರವಾಡ, ಬೆಳಗಾಂ, ಚಿಕ್ಕಮಂಗಳೂರು, ಉತ್ತರ ಕನ್ನಡ ಜಿಲ್ಲೆಯಗಳಲ್ಲಿ ವಾಸಿಸುತ್ತಿರುವ ಗೌಳಿಗರು ಹಸಿರು ತುಂಬಿದ ಬೆಟ್ಟ ಗುಡ್ಡಗಳಿಂದ ಆವರಿಸಿದ ಪ್ರದೇಶವನ್ನು ಆರಿಸಿಕೊಂಡು ಹಾಡಿಗಳನ್ನು ನಿರ್ಮಿಸಿ ಬದುಕುತ್ತಿರುವ ಇವರ ಪ್ರಧಾನ ವೃತ್ತಿ ಎಮ್ಮೆ ಸಾಕಾಣಿಕೆ. ಎಮ್ಮೆ ಸಾಕಾಣಿಕೆಯೊಂದಿಗೆ ಜೇನು ತುಪ್ಪ, ಸಂಗ್ರಹಿಸುವ, ಸಣ್ಣ ಸಣ್ಣ ಪ್ರಾಣಿಗಳನ್ನು ಬೇಟೆಯಾಡುವ ಹವ್ಯಾಸಗಳನ್ನು ರೂಢಿಸಿಕೊಂಡಿದ್ದಾರೆ (ಅಂಬಳಿಕೆ ಹಿರಿಯಣ್ಣ, 2011).

ಕೊಂಚ ಕೊರಚರು ಸಮುದಾಯದ ಅಂಚಿನಲ್ಲಿರುವ ಬುಡಕಟ್ಟು ಜನಾಂಗ. ಕರ್ನಾಟಕ ಮತ್ತು ಆಂದ್ರ ಪ್ರದೇಶದ ಗಡಿ ನಾಡಿನ ಸರಹದ್ದಿನಲ್ಲಿ ಬದುಕುತ್ತಿರುವ ಇವರು ಅತಂತ್ರ ನಿವಾಸಿಗಳು. ನೂರಾರು ವರ್ಷಗಳಿಂದ ಕರ್ನಾಟಕದ ಪಾವಗಡದಲ್ಲಿ ವಾಸಿಸುತ್ತಿರುವ ಇವರ ಉದ್ಯೋಗ ಸಿಂದಿ ಪೊರಕೆ(ಈಚಲು ಪೊರಕೆ), ಚಾಪೆ, ಮೊರ, ಹಗ್ಗ ತಯಾರಿಸುವುದು. ತಯಾರಿಸಿದ ವಸ್ತುಗಳನ್ನು ದೂರದ ನಗರ ಪ್ರದೇಶಗಳಿಗೆ ಹೋಗಿ ಮಾರಾಟ ಮಾಡುತ್ತಿರುವುದಾಗಿ ಮೀನಾಕ್ಷಿ ಬಾಳಿಗ (2011)ರವರು ವರದಿ ಮಾಡಿದ್ದಾರೆ.

ಕರ್ನಾಟಕದ ಪ್ರಮುಖ ಬುಡಕಟ್ಟುಗಳ ಪೈಕಿ ಒಂದಾದ ಸೋಲಿಗ ಬುಡಕಟ್ಟು ಸಮುದಾಯದವರು ಚಾಮರಾಜನಗರ ಜಿಲ್ಲೆಯ ಯಳಂದೂರು ತಲೂಕಿನ ಬಿಳಿಗಿರಿ ರಂಗನ ಬೆಟ್ಟ, ಕೊಳ್ಳೆಗಾಲ ತಾಲೂಕಿನ ಮಹದೇಶ್ವರ ಬೆಟ್ಟ, ಮೊದಲಾದೆಡೆ ಕಂಡುಬರುತ್ತಾರೆ. ಬೇಟೆ, ಬೇಸಾಯ, ಕಾಡಿನ ಉತ್ಪನ್ನಗಳಾದ ಕಾಯಿ ಹಣ್ಣುಗಳು, ಗಿಡಮೂಲಿಕೆಗಳು ಮತ್ತು ಜೇನು ತುಪ್ಪವನ್ನು ಸಂಗ್ರಹಿಸಿ ಮಾರುವುದು ಇವರ ಮುಖ್ಯ ವೃತ್ತಿ. ಸೋಲಿಗರು ಆನೆಗಳನ್ನು ಹಿಡಿದು ಪಳಗಿಸುವುದರಲ್ಲಿ ನಿಷ್ಣಾತರು. ಅರಣ್ಯ ಇಲಾಖೆಯಲ್ಲಿ ಕೆಲವು ಸೋಲಿಗರು ಮಾವುತರಾಗಿಯೂ ಸೇವೆಸಲ್ಲಿಸುತ್ತಿದ್ದಾರೆ. ಬಿದಿರು ಬೆತ್ತದಿಂದ ಮೊರ, ಕುಕ್ಕೆ, ಚಂದ್ರಿಕೆ, ಬುಟ್ಟಿ ಮುಂತಾದವುಗಳನ್ನು ತಯಾರಿಸುತ್ತಾರೆ. ಹಸು, ಆಡು, ಕುರಿ, ಕೋಳಿ ಸಾಕಾಣೆ ಮಾಡುವುದನ್ನು ರೂಢಿಸಿಕೊಂಡಿದ್ದಾರೆ. ರೇಷ್ಮೆ ಕೃಷಿಯಲ್ಲೂ ಕೆಲವರು ತೊಡಗಿಸಿಕೊಂಡಿದ್ದಾರೆ. ಅಲ್ಲದೆ, ಕೆಲವರು ಹೈನುಗಾರಿಕೆ ಮಾಡುತ್ತಿದ್ದಾರೆ (ರಾಮಕೃಷ್ಣ, 2011).

ಆಂಧ್ರ ಪ್ರದೇಶ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಕಂಡುಬರುವ ಯಾನಾದಿ ಬುಡಕಟ್ಟು ಜನರ ಉದ್ಯೋಗ ಬೇಟೆಯಾಡುವುದು. ಅಲ್ಲದೆ, ಕಾಡಿನ ಉತ್ಪನ್ನಗಳನ್ನು ಶೇಖರಿಸಿಡುವುದು, ಬೇಟೆ ದೊರೆಯದ ಸಮಯದಲ್ಲಿ ಬೇಸಾಯ ಮಾಡುವ ರೈತರ ಹೊಲದಲ್ಲಿ ಕೂಲಿ ಕೆಲಸ ಮಾಡುತ್ತಾರೆ. ಕಾಡಿನಲ್ಲಿ ಸಿಗುವ ಕೆಲವು ಗಿಡಗಳ ಎಲೆಗಳನ್ನು ಸಂಗ್ರಹಿಸಿ ನೆರಳಲ್ಲಿ ಒಣಗಿಸಿ ಊಟದ ಎಲೆಯಂತೆ ಮಾಡಿ ಮಾರುತ್ತಾರೆ. ಅಣಬೆ, ಅಂಟು, ಅಳಲೆಕಾಯಿ, ಅಂಟವಾಳಕಾಯಿ, ವನಮೂಲಿಕೆಗಳನ್ನು ಸಂಗ್ರಹಿಸಿ ಮಾರುಕಟ್ಟೆಗೆ ತಂದು ಮಾರುತ್ತಾರೆ. ಜೇನು ಸಂಗ್ರಹಣೆ ಮತ್ತು ಅವುಗಳ ಮೇಣವನ್ನು ತಂದು ಮಾರುವುದು ಇವರ ಮತ್ತೊಂದು ಕಸಬು( ಪೂರ್ಣಿಮಾ, 2011).

ಆಂಧ್ರ ಪ್ರದೇಶದಲ್ಲಿರುವ ಬುಡಕಟ್ಟುಗಳಲ್ಲೇ ಅತ್ಯಂತ ಹಿಂದುಳಿದ ಪಂಗಡವಾದ ಚಂಚರು ಬೇಟೆ, ಜೇನು ಶೇಖರಣೆ ಮಾಡಿ ಜೀವನ ಸಾಗಿಸುತ್ತಿದ್ದಾರೆ. ಇವರು ಅಂಟಿನ ಶೇಖರಣೆ, ಜೇನಿನ ಶೇಖರಣೆ, ಮಹೂವಾ ಹೂವಿನ ಶೇಖರಣೆ ಮಾಡುವುದರಲ್ಲಿ ಹೆಚ್ಚಿನ ನಿಷ್ಣಾತರು. ಇವರು ಜೇನು ತೆಗೆಯುವ ವಿಧಾನ ವಿಶಿಷ್ಟವಾದುದು – *ಒಂದು ಸಣ್ಣ ಬಿದಿರಿನ ಬೊಂಬನ್ನು ತೆಗೆದುಕೊಂಡು ಒಂದು ಕಡೆ ಸೂಜಿಯಂತೆ ಮೊನಚಾಗಿ ಕೆತ್ತುತ್ತಾರೆ. ಇನ್ನೊಂದು ಕಡೆ ತುಂಬಾ ಉದ್ದನಾದ, ತೆಳ್ಳನಾದ ಹಗ್ಗವನ್ನು ಕಟ್ಟುತ್ತಾರೆ. ಆ ಹಗ್ಗವನ್ನು ಕಾಡಿನಲ್ಲಿ ಸಿಗುವ ನಾರು ಪದಾರ್ಥಗಳಿಂದ ಹೆಣೆಯುತ್ತಾರೆ. ಅನಂತರ ಬೊಂಬನ್ನು ಹಿಡಿದು ಆ ಕಡೆಯಿಂದ ಗುಡ್ಡವನ್ನು ಹತ್ತುತ್ತಾರೆ. ಜೇನಿನ ತಿಟ್ಟೆ ಹತ್ತಿರಾದಂತೆ ಒಮ್ಮೆಗೇ ಅದಕ್ಕೆ ಬಿದಿರಿನ ಮೊನೆಯನ್ನು ಚುಚ್ಚುತ್ತಾರೆ. ಚುಚ್ಚಿದ ಬೊಂಬಿನ ಈ ಬದಿಗೆ ಹಗ್ಗ ಕಟ್ಟಿರುವ ಕಾರಣ ಆ ಹಗ್ಗದ ಮೂಲಕವಾಗಿಯೇ ಜೇನು ಸೋರುತ್ತದೆ. ಮೈಗೆ ಬೂದಿಯನ್ನು ಬಳಿದುಕೊಂಡಿರುವುದರಿಂದಾಗಿ ಅವರನ್ನು ಜೇನು ಹುಳ ಕಚ್ಚುವುದಿಲ್ಲ* (ಕೃಷ್ಣಾರೆಡ್ಡಿ, 2011).

ಆಂಧ್ರ ಪ್ರದೇಶದ ವಿಶಾಖಪಟ್ಟಣ, ಶ್ರಿಕಾಕುಳಂ, ಪೂರ್ವಗೋದಾವರಿ ಜಿಲ್ಲೆಗಳಲ್ಲಿ ವಾಸಿಸುವ ಕುಲಿಯಾ ಬುಡಕಟ್ಟುಗಳ ವೃತ್ತಿ ಬೇಸಾಯ. ಇದಲ್ಲದೆ ಕಾಡಿನಲ್ಲಿ ಸಿಗುವ ಕಟ್ಟಿಗೆ, ಗಡ್ಡೆಗೆಣಸು, ಗಿಡಮೂಲಿಕೆಗಳು, ಜೇನು ಮುಂತಾದವುಗಳನ್ನು ತಂದು ವಾರಾಂತ್ಯದ ಸಂತೆಯಲ್ಲಿ ಮಾರಿ ಜೀವನ ಸಾಗಿಸುತ್ತಿದ್ದಾರೆ. ವಿಶಾಖಪಟ್ಟಣ ಮತ್ತು ಶ್ರಿಕಾಕುಳಂ ಜಿಲ್ಲೆಯಲ್ಲಿ ವಾಸವಾಗಿರುವ ಕೊಟೊಯಾ ಬುಡಕಟ್ಟುಗಳು ಕಾಡಿನಲ್ಲಿ ಸಿಗುವ ಹುಣಸೆ ಹಣ್ಣು, ಸಿಗೇಕಾಯಿ, ಬಾರಿಗೆಹುಲ್ಲು ಮೊದಲಾದ ಕಾಡಿನ ಉತ್ಪನ್ನಗಳನ್ನು ಸಂಗ್ರಹಿಸಿ ವಾರಾಂತ್ಯದ ಸಂತೆಗಳಲ್ಲಿ ಮಾರಿ ಜೀವನ ಸಾಗಿಸುತ್ತಿದ್ದಾರೆ (ಕೃಷ್ಣಾರೆಡ್ಡಿ, 2011).

ಕಾಣಿಕ್ಕಾರ್ ಇವರು ದಕ್ಷಿಣ ತಿರುವಾಂಕೂರಿನ ಬೆಟ್ಟಗಳಲ್ಲಿ ನೆಲೆಯೂರಿರುವ ಗುಡ್ಡಗಾಡು ಜನಾಂಗದವರು. ಇವರ ಪ್ರಮುಖ ಉದ್ಯೋಗ ಕೃಷಿಯಾಗಿದ್ದು ಕೆಲವರು ಕೂಲಿ ಕೆಲಸ, ಇನ್ನೂ ಕೆಲವರು ಮರ ಕಡಿಯುವ್ಯದು ಹಾಗೂ ಬಿದಿರು ಕೆಲಸವನ್ನು ಮಾಡುತ್ತಿದ್ದಾರೆ. ಇವರು ಸರ್ಕಾರಕ್ಕಾಗಿ ಜೇನು, ಮೇಣ, ಶುಂಠಿ, ಏಲಕ್ಕಿ, ಆನೆದಂತ ಮುಂತಾದವುಗಳನ್ನು ಸಂಗ್ರಹಿಸಿಕೊಟ್ಟು ಪ್ರತಿಯಾಗಿ ಒಂದಿಷ್ಟು ಪ್ರತಿಫಲ ಪಡೆಯುತ್ತಾರೆ. (ನಜಿಮ್‌ಉದ್ದೀನ್, 2011).

ಕುರುವರ್ ಬುಡಕಟ್ಟು ತಮಿಳುನಾಡಿನ ಆದಿವಾಸಿ ಜನವರ್ಗ. ಇವರು ತಮಿಳುನಾಡಿನಲ್ಲಿ ಕಂಡುಬರುವ ಸಾಂಪ್ರದಾಯಿಕ ಕರಕುಶಲ ವೃತ್ತಿ ನಿರತರಲ್ಲಿ ಪ್ರಮುಖರು. ಪ್ರಾಚೀನ ತಮಿಳುನಾಡಿನ ಪ್ರಾದೇಶಿಕ ವಿಭಾಗಗಳಲ್ಲಿ ಒಂದಾದ ಬೆಟ್ಟ ಹಾಗೂ ಬೆಟ್ಟದ ತಪ್ಪಲಿನ ಪ್ರಾಂತ್ಯಗಳನ್ನೊಳಗೊಂಡ 'ಕುರಂಜಿ' ಎನ್ನುವ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ. ಬೆಟ್ಟ-ಗುಡ್ಡ-ಕಾಡುಗಳಲ್ಲಿ ದೊರಕುವ ಆಹಾರ ಪದಾರ್ಥಗಳನ್ನು ಸಂಗ್ರಹಿಸುವುದು ಇವರ ಮೂಲ ವೃತಿಯಾಗಿದೆ. ಇವರು ಕಾಲಕ್ರಮೇಣ ಬುಟ್ಟಿ ಹೆಣೆಯುವುದು ಮತ್ತು ವ್ಯವಸಾಯವನ್ನು ತಮ್ಮ ಆದಾಯದ ಮೂಲವನ್ನಾಗಿಸಿಕೊಂಡರು (ಪನ್ನೀರ್ ಸೆಲ್ವಮ್, 2011).

ಅರಣ್ಯಭೂಮಿಯಲ್ಲಿ ಕೃಷಿ ಮಾಡುವುದು ಹಾಗೂ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುವುದು ರಾಜಸ್ಥಾನದಲ್ಲಿ ವಾಸಿಸುತ್ತಿರುವ ಬುಡಕಟ್ಟು ಸಮುದಾಯಗಳ ಪ್ರಮುಖ ಆದಾಯದ ಮೂಲಗಳಾಗಿವೆ (ನಾಗ್ಡಾ, 2004). ಕೃಷಿ ಮತ್ತು ಕೂಲಿ ಕೆಲಸ ಇವು ಲಂಬಾಸ್ ಮತ್ತು ಇರುಳ ಬುಡಕಟ್ಟು ಸಮುದಾಯಗಳ ಪ್ರಮುಖ ಉದ್ಯೋಗವಾಗಿದೆ ಎಂದು ತಮಿಳುನಾಡಿನ ಕಾಚೇವಾಡಿ ಬೆಟ್ಟಪ್ರದೇಶ ಮತ್ತು ಕೇರಳದ ಪಶ್ಚಿಮ ಘಟ್ಟಪ್ರದೇಶದಲ್ಲಿ ವಾಸಿಸುತ್ತಿರುವ ಲಂಬಾಸ್ ಮತ್ತು ಇರುಳ ಬುಡಕಟ್ಟು ಕುರಿತಂತೆ ಅಧ್ಯಯನ ಕೈಗೊಂಡ ಚಂದ್ರಶೇಖರ್ ಮತ್ತಿತರರು (1990) ವರದಿ ಮಾಡಿದ್ದಾರೆ. ಈ ಬುಡಕಟ್ಟು ಸಮುದಾಯಗಳ ಮಹಿಳೆಯರು ತಾವು ವಾಸಿಸುವ ಸುತ್ತಮುತ್ತಲಿನ ಅರಣ್ಯ ಪ್ರದೇಶದಿಂದ ಉರುವಲನ್ನು ಸಂಗ್ರಹಿಸಿ ತಂದು ಹತ್ತಿರದ ಗ್ರಾಮ ಮತ್ತು ಪಟ್ಟಣಗಳಲ್ಲಿ ಮಾರಾಟ ಮಾಡುವುದರಲ್ಲಿ ತೊಡಗಿದ್ದಾರೆ.

ಕುರಿಚ್ಯರು ಕೇರಳದ ವಯನಾಡು, ಕಣ್ಣೂರು, ಕೋಳಿಕ್ಕೋಡು ಜಿಲ್ಲೆಯಲ್ಲಿ ವಾಸಿಸುವ ಜನ. ಕೃಷಿ, ಬೇಟೆ, ಮೀನುಗಾರಿಕೆ, ಪಶುಪಾಲನೆ, ಜೇನು ಸಂಗ್ರಹ ಇವು ಕುರಿಚ್ಯರ ಜೀವನೋಪಾಯಗಳು. ಕಾಡುಗಳಿಂದ ದೊರೆಯುವ ಬೆತ್ತ, ಮುಂಡಗೆ (ಚಾಪೆ ಹೆಣೆಯಲು ಬಳಸುವ ಸಸ್ಯ) ಬಿದಿರು ಇವುಗಳನ್ನು ಬಳಸಿಕೊಂಡು ಬುಟ್ಟಿ, ಗೆರಸೆ, ಚಾಪೆ ಮುಂತಾದವುಗಳನ್ನು ತಯಾರಿಸುತ್ತಾರೆ. ಅಡಿಗೆ ಮನೆಗೆ ಅಗತ್ಯವಾದ ವಸ್ತುಗಳನ್ನು ತಯಾರಿಸುವುದು ಇವರ ಕೈ ಕಸಬು. ಮೀನು ಹಿಡಿಯುವ ಸಲಕರನೆಗಳು, ಭತ್ತ-ಅಕ್ಕಿ ಸಂಗ್ರಹಿಸುವ ಮತ್ತು ಒಣಗಿಸುವ ವಸ್ತುಗಳು, ಪೀಠೋಪಕರಣಗಳು ಮುಂತಾದವುಗಳನ್ನು ತಯಾರಿಸುತ್ತಾರೆ (ಮಿನಿ, 2011).

ಬಿರ್ಹಾರ್ ಬುಡಕಟ್ಟು ಸಮುದಾಯದ ಆದಾಯದ ಮೂಲವು ಕೃಷಿ, ಕೂಲಿ ಹಾಗೂ ಅರಣ್ಯ ಉತ್ಪನ್ನಗಳ ಸಂಗ್ರಹಣೆ. ಅರಣ್ಯವೇ ಅವರ ವಾಸಸ್ಥಳವಾಗಿದ್ದು ಅರಣ್ಯದಲ್ಲಿ ಸಿಗುವಂತಹ ಬೇರು, ಕಾಂಡ, ಎಲೆಗಳು, ಹೂ, ಬೀಜ ಮುಂತಾದವುಗಳನ್ನು ಸಂಗ್ರಹಿಸುವುದು. ಇಲಿ, ಬೆಕ್ಕು, ಮೊಲ, ಮುಂತಾದ ಪ್ರಾಣಿಗಳನ್ನು ಬಲೆ ಹಾಕುವುದು. ಜೇನು ಸಂಗ್ರಹಿಸಿ ಮಾರಾಟ ಮಾಡುವುದು. ಅರಣ್ಯದಿಂದ ಸಿಗುವ ಹುಲ್ಲುಗಳಿಂದ ಹಗ್ಗ, ಕಾರ್ಪೆಟ್, ಬಾಸ್ಕೆಟ್, ಬುಟ್ಟಿ, ಮೊರ, ಕಸಬರಿಗೆ ತಯಾರಿಸಿ ಮಾರಾಟ ಮಾಡುವುದು. ಅಲ್ಲದೆ, ಅರಣ್ಯದಲ್ಲಿ ಸಿಗುವ ಚಿಕ್ಕ ಚಿಕ್ಕ ಪ್ರಾಣಿ ಪಕ್ಷಿಗಳಾದ

ನವಿಲು, ಗಿಳಿ, ಮೊಲ, ಬೆಕ್ಕು ಹಿಡಿದು ತಂದು ಮಾರಾಟ ಮಾಡುವುದು. ಬಿರ್ಹಾರ್ ಬುಡಕಟ್ಟು ಸಮುದಾಯವು ಕೃಷಿಯನ್ನು ಮುಖ್ಯ ಕಸುಬಾಗಿ ಅವಲಂಬಿಸಿದ್ದರೂ ಸಹ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆ ಇವರ ಆದಾಯದ ಇನ್ನೊಂದು ಮೂಲವಾಗಿದೆ. ಇವರು ಒಣ ಬೇಸಾಯ ಪದ್ಧತಿಯನ್ನು ಅಳವಡಿಸಿಕೊಂಡಿರುವುದರಿಂದ ಆರು ತಿಂಗಳು ಮಾತ್ರ ತಮ್ಮ ಸ್ವಂತ ಜಮೀನಿನಲ್ಲಿ ಕೆಲಸಮಾಡಿ ಉಳಿದ ಆರು ತಿಂಗಳು ಬೇರೆಯವರ ಜಮೀನಿನಲ್ಲಿ ಕೂಲಿಕಾರರಾಗಿ ಕೆಲಸ ನಿರ್ವಹಿಸುತ್ತಾ ಜೀವನ ಸಾಗಿಸುತ್ತಿದ್ದಾರೆ (www.jharkhand.org.in).

ರಾವ್ ಮತ್ತು ಸಿಂಗ್ (1996), ರವರು ಬಿಹಾರ್, ಪಶ್ಚಿಮ ಬಂಗಾಳ ಮತ್ತು ಕರ್ನಾಟಕದ ಕೆಲವೊಂದು ಬುಡಕಟ್ಟುಗಳ ಆರ್ಥಿಕ ಅವಲಂಬನೆ ಕುರಿತು ಕೈಗೊಂಡ ಅಧ್ಯಯನದಲ್ಲಿ ವಿಶ್ಲೇಷಿಸಿದಂತೆ ಬಿಹಾರ್ ರಾಜ್ಯದಲ್ಲಿ ಶೇಕಡ 41 ಬುಡಕಟ್ಟು ಕುಟುಂಬಗಳು ಮಹೂವಾ ಹೂವನ್ನು ಸಂಗ್ರಹಿಸುವುದು ಮತ್ತು ಇವುಗಳನ್ನು ಬೀಡಿ ಮತ್ತು ಸಿಗರೇಟ್ ಕಟ್ಟಲು ಬಳಸುವುದು, ಶೇಕಡ 23 ಕುಟುಂಬಗಳು ಅಣಬೆ ಮತ್ತು ಮಹೂವಾ ಹೂವು ಸಂಗ್ರಹಿಸುವುದು, ಶೇಕಡ 55 ಕುಟುಂಬಗಳು ಹುಣಸೆ ಹಣ್ಣು ಸಂಗ್ರಹಿಸುವುದು ಮತ್ತು ಶೇಕಡ 31 ರಷ್ಟು ಕುಟುಂಬಗಳು ಕಸಬರಿಗೆ ಕಟ್ಟುವ ಕಡ್ಡಿಗಳನ್ನು ಸಂಗ್ರಹಿಸುವುದರಿಂದ ಅರಣ್ಯದ ಮೇಲೆ ಅವಲಂಬಿತರಾಗಿದ್ದಾರೆ ಎಂದು ತಿಳಿಸುತ್ತದೆ. ಪಶ್ಚಿಮ ಬಂಗಾಳ ರಾಜ್ಯದ ಮಿಡ್ನಾಪುರ ಜಿಲ್ಲೆಯ 56.73 ಪ್ರತಿಶತ ಬುಡಕಟ್ಟು ಕುಟುಂಬಗಳು ಜೀವನೋಪಾಯಕ್ಕಾಗಿ ಅರಣ್ಯವನ್ನು ಅವಲಂಬಿಸಿವೆ.

ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದು, ಸಂಸ್ಕರಿಸುವುದು ಹಾಗೂ ಮಾರಾಟ ಮಾಡುವಲ್ಲಿ ಮಹಿಳೆಯರ ಪಾತ್ರ ಹಿರಿದಾಗಿದೆ. ಮಹಿಳೆಯರು ಎಲ್ಲ ವಿಧದ ಕಿರು ಅರಣ್ಯ ಉತ್ಪನ್ನಗಳು ಹಾಗೂ ಉರುವಲನ್ನು ಅರಣ್ಯದಿಂದ ಸಂಗ್ರಹಿಸಿ ತಂದರೆ, ಪುರುಷರು ಮನೆ ಕಟ್ಟಲು ಬೇಕಾದಂತಹ ಕಟ್ಟಿಗೆ, ಕಂಬಿಗಳು ಮತ್ತು ಕೆಲವರು ಔಷಧಿ ಸಸ್ಯಗಳನ್ನು ಸಂಗ್ರಹಿಸುತ್ತಾರೆ. ವಿವಿಧ ದೇಶಗಳಲ್ಲಿ ಅರಣ್ಯ ಉತ್ಪನ್ನಗಳ ಸಂಗ್ರಹಣೆಯಲ್ಲಿ ಮಹಿಳೆಯ ಪಾತ್ರ ಕುರಿತಾಗಿ ಕೈಗೊಂಡ ಅಧ್ಯಯನದ ವರದಿ ಪ್ರಸ್ತುತಪಡಿಸಿದಂತೆ ಪುರುಷರಿಗೆ ಹೋಲಿಸಿದರೆ ಪ್ರತಿಶತ 78 ರಷ್ಟು ಮಹಿಳೆಯರು ಮತ್ತು ಮಕ್ಕಳು ಅಣಬೆಗಳನ್ನು ಸಂಗ್ರಹಿಸುವುದು ಮತ್ತು ಒಣಗಿಸುವ ಕಾರ್ಯದಲ್ಲಿ ತೊಡಗಿಸಿಕೊಂಡರೆ, ಪುರುಷರು ಮಾರಾಟ ಮಾಡುವುದಕ್ಕೆ ಸೀಮಿತವಾಗಿಸಿಕೊಂಡಿದ್ದಾರೆ (ಇಕ್ಬಾಲ್, 1991). ಅಲ್ಲದೆ, ಪ್ರತಿಶತ 90ರಷ್ಟು ಮಹಿಳೆಯರು ಔಷಧಿ ಸಸ್ಯಗಳು ಹಾಗೂ ಗಿಡಮೂಲಿಕೆಗಳನ್ನು ಸಂಗ್ರಹಿಸುವುದು ಮತ್ತು ಒಣಗಿಸುವ ಕಾರ್ಯದಲ್ಲಿ ತೊಡಗಿದ್ದರೆ, ಪ್ರತಿಶತ 71ರಷ್ಟು ಮಹಿಳೆಯರು ಮಾರಾಟ ಮಾಡುವ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದಾಗಿ ವರದಿ ತಿಳಿಸುತ್ತದೆ.

ಫೆರ್ನಾಡ್ ಮತ್ತು ಮೆನನ್ (1987)ರವರ ಅಧ್ಯಯನದಂತೆ, ಒರಿಸ್ಸಾದ ಬುಡಕಟ್ಟು ಮಹಿಳೆಯರು ದಿನದಲ್ಲಿ 15 ಗಂಟೆ ಸಮಯ ಕೆಲಸದಲ್ಲಿ ತೊಡಗಿದರೆ ಪುರುಷರು 11 ಗಂಟೆ ಕೆಲಸದಲ್ಲಿ ತೊಡಗಿಸಿಕೊಂಡಿರುತ್ತಾರೆ. ಮಹಿಳೆಯರು ತಮ್ಮ ಹೆಚ್ಚಿನ ಸಮಯವನ್ನು ಅರಣ್ಯ ಉತ್ಪನ್ನಗಳ ಸಂಗ್ರಹಣೆ, ಸಂಸ್ಕರಣೆಗಾಗಿ ಮೀಸಲಿಡುತ್ತಾರೆ. ಇದರಿಂದ ಜೀವನ ನಿರ್ವಹಣೆಯ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವ ಮೂಲಕ ಕುಟುಂಬ ನಿರ್ವಹಣೆಗೆ ಆದಾಯದ ಮೂಲವನ್ನು ಸಹ ಅರಣ್ಯ ಉತ್ಪನ್ನಗಳಿಂದಲೇ ಪೂರೈಸಿಕೊಳ್ಳುವುದರಿಂದ ಅರಣ್ಯದ ಮೇಲೆ ಸಂಪೂರ್ಣವಾಗಿ ಅವಲಂಬಿತರಾಗಿದ್ದಾರೆ. ಈ ಮೂಲಕ ಮಹಿಳೆಯರು ಕುಟುಂಬದ ಆಹಾರ ಭದ್ರತೆಯ ಭರವಸೆಯನ್ನು ಕಂಡುಕೊಂಡಿದ್ದಾರೆ. ಅಲ್ಲದೆ ಕೆಲವೊಂದು ಕಿರು ಅರಣ್ಯ ಉತ್ಪನ್ನಗಳನ್ನು ಮಾರಾಟ

ಮಾಡಿ ಕುಟುಂಬಕ್ಕೆ ಆದಾಯವನ್ನು ಒದಗಿಸುವುದರಿಂದ ಬುಡಕಟ್ಟು ಸಮುದಾಯದಲ್ಲಿ ಮಹಿಳೆಯ ಸ್ಥಾನವು ಉನ್ನತ ಮಟ್ಟದಲ್ಲಿರುವುದನ್ನು ಕಾಣಬಹುದು.

ಬೇಟೆ, ಆಹಾರ ಸಂಗ್ರಹಣೆ ಎಂಬುದು ಬಹುಷಃ ಎಲ್ಲ ಬಗೆಯ ಮಾನವ ಸಮಾಜದ ಕೆಲಸವಾಗಿದೆ. ವಿಶೇಷತಃ ಬುಡಕಟ್ಟು ಸಮುದಾಯಗಳು ಆಹಾರ ಸಂಗ್ರಹಣೆಯನ್ನೇ ಪ್ರಮುಖ ಜೀವನೋಪಾಯ ಮಾಡಿಕೊಂಡಿರುವುದು ಕಂಡುಬರುತ್ತದೆ. ಬುಡಕಟ್ಟು ಜನರಿಗೆ ಆಹಾರ ಸಂಗ್ರಹಣೆ ಎಂಬುದು ಎಲ್ಲ ಪ್ರಕಾರದ್ದು. ಮೀನು ಹಿಡಿಯುವುದು, ಬೇಟೆಯಾಡುವುದು, ಕಾಡು ಹಣ್ಣುಗಳ ಸಂಗ್ರಹಣೆ ಇತ್ಯಾದಿ. ಅರಣ್ಯವಾಸಿ ಬುಡಕಟ್ಟುಗಳಂತೂ ತಮ್ಮ ಆರ್ಥಿಕತೆಯನ್ನು ವಿವಿಧ ಕಾಲಚಕ್ರ ಮತ್ತು ಪ್ರದೇಶಗಳ ವೈವಿಧ್ಯತೆ ಆಧಾರದಿಂದ ಆಹಾರ ಸಂಗ್ರಹಣೆಯನ್ನು ಕೈಗೊಳ್ಳುತಾರೆ.

ವೈವಿಧ್ಯಮಯ ಬುಡಕಟ್ಟುಗಳನ್ನು ಹೊಂದಿರುವ ಮಧ್ಯಪ್ರದೇಶವು ದೇಶದ ಒಟ್ಟು ಬುಡಕಟ್ಟುಗಳ ಶೇಕಡ 23ರಷ್ಟು ಬುಡಕಟ್ಟು ಜನರಿಗೆ ನೆಲೆ ಒದಗಿಸಿದ ರಾಜ್ಯವಾಗಿದೆ. ದಿಂಡೋರಿ ಜಿಲ್ಲೆಯ ಬೈಗಾಚಾಕಿಯ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿರುವ ಬೈಗಾ ಬುಡಕಟ್ಟು ಈ ರಾಜ್ಯದಲ್ಲಿ ವಾಸಿಸುವ ಬುಡಕಟ್ಟುಗಳಲ್ಲಯೇ ಆದಿವಾಸಿ ಬುಡಕಟ್ಟು, ಇವರು ಜೀವನೋಪಾಯಕ್ಕಾಗಿ ಕುಮರಿ ಬೇಸಾಯ ಅನುಸರಿಸುತ್ತಿದಾರೆ. ಇವರ ಆರ್ಥಿಕತೆಯು ಕೃಷಿ ಹಾಗೂ ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸುವುದರ ಮೇಲೆ ಅವಲಂಬಿತವಾಗಿದೆ (ಚಕ್ಮಾ, 2009).

ಜೈವಿಕ ಸಂಪತ್ತಿನಿಂದ ಸಂಪತ್ಭರಿತವಾದ ಮೈಸೂರು ಜಿಲ್ಲೆಯು ಅನಾದಿಕಾಲದಿಂದಲೂ ಜೇನುಕುರುಬರ ವಾಸಕ್ಕೆ ನೆಲೆಯೊದಗಿಸಿದೆ. ಅರಣ್ಯದೊಂದಿಗೆ ನಿರಂತರವಾಗಿ ಪರಸ್ಪರ ಅನ್ಯೋನ್ಯತೆಯನ್ನು ಹೊಂದಿರುವ ಇವರು ಜೀವನಕ್ಕೆ ಅವಶ್ಯಕವಾದ ಮೂಲ ವಸ್ತುಗಳಾದ ಆಹಾರ, ಮೇವು, ಉರುವಲು, ಹಣ್ಣು, ನಾರು ಪದಾರ್ಥಗಳನ್ನು ಅರಣ್ಯದಿಂದ ಪಡೆಯುತ್ತಿದ್ದಾರೆ. ಅರಣ್ಯದಿಂದ ಇಂತಹ ವಸ್ತುಗಳನ್ನು ಸಂಗ್ರಹಿಸುವುದು, ಸಂಸ್ಕರಿಸುವುದು ಮತ್ತು ಮಾರಾಟ ಮಾಡುವುದು ಇವರ ಪ್ರಮುಖ ಉದ್ಯೋಗವಾಗಿದ್ದು ಇದೇ ಇವರ ಜೀವನ ನಿರ್ವಹಣೆಗೆ ಆದಾಯವನ್ನು ಒದಗಿಸಿದೆ ಎಂದು ಜೇನುಕುರುಬರ ಅಧ್ಯಯನ ಕೈಗೊಂಡ ರವಿ ಮತ್ತಿತರರು (2006) ಅಭಿಪ್ರಾಯ ಪಟ್ಟಿದ್ದಾರೆ.

ಚಾಮರಾಜನಗರ ಜಿಲ್ಲೆಯ ಬಿಳಿಗಿರಿ ರಂಗನ ಬೆಟ್ಟ ಹಾಗೂ ಮಲೆಮಹದೇಶ್ವರ ಬೆಟ್ಟದ ತಪ್ಪಲಿನಲ್ಲಿ ವಾಸಿಸುವ ಸೋಲಿಗ ಬುಡುಕಟ್ಟು ಸಮುದಾಯಗಳು ನಾಗರೀಕ ಸಮಾಜದಿಂದ ದೂರವೇ ಉಳಿದು ಬೆಟ್ಟದ ಅಂಚಿನಲ್ಲಿ ವಾಸಿಸುತ್ತಿರುವ ಇವರಿಗೆ ಅರಣ್ಯವೇ ಜೀವನಾಧಾರವಾಗಿದೆ. ಇವರು ಅರಣ್ಯದಲ್ಲಿ ಸಿಗುವ ಉಪಉತ್ಪನ್ನಗಳನ್ನು ಸಂಗ್ರಹಿಸಿ ಅವನ್ನು ತಮ್ಮ ಅಗತ್ಯಗಳನ್ನು ಪೂರೈಸುವ ಇತರೇ ವಸ್ತುಗಳಿಗಾಗಿ ವಿನಿಮಯ ಮಾಡಿಕೊಳ್ಳುವರು. ಬೇಟೆ ಮತ್ತು ಕೃಷಿ ಇವರ ಇತರೆ ಕಸುಬಾಗಿವೆ. ಕೃಷಿಯಲ್ಲಿ ಕುಮರಿ ಬೇಸಾಯ ಪದ್ಧತಿಯನ್ನು ಅನುಸರಿಸುತ್ತಿದ್ದು ಅರೆಅಲೆಮಾರಿ ಜೀವನ ನಡೆಸುವವರಾಗಿದ್ದಾರೆ (ಕುಮಾರ್, 2006).

ಗುಡ್ಡಗಾಡು ಪ್ರದೇಶಗಳಲ್ಲಿ ವಾಸವಾಗಿರುವ ಬುಡಕಟ್ಟು ಜನ ಮಾಮೂಲಿಗಿಂತ ಭಿನ್ನ ರೀತಿಯ ಕೃಷಿ ಪದ್ದತಿ ಅನುಸರಿಸುತ್ತಿದ್ದಾರೆ. ಗುಡ್ಡಗಾಡು ಪ್ರದೇಶಗಳಲ್ಲಿಯೇ ಹಳ್ಳಿಗಳನ್ನು ಕಟ್ಟಿಕೊಂಡು ವಾಸಿಸುವ ಇವರು ಪರ್ವತಗಳ ಕಣಿವೆಗಳಲ್ಲಿರುವ ಬಯಲಾದ ಪ್ರದೇಶವನ್ನು ಸಾಗುವಳಿಗೆ ಉಪಯೋಗಿಸುತ್ತಾರೆ. ಮಾಮೂಲು ಬೇಸಾಯ ಕ್ರಮದಲ್ಲಿ ಬಳಸುವಂತೆ ಇವರು ಎತ್ತುಗಳನ್ನೂ ನೇಗಿಲನ್ನೂ ಬಳಸುವುದಿಲ್ಲ. ನೆಲವನ್ನು ಹದಗೊಳಿಸಲು ಗುದ್ದಲಿ, ಪಿಕಾಸಿ ಅಥವಾ ಮರದ ಕೊಕ್ಕೆ

ಕಡ್ಡಿಗಳನ್ನು ಬಳಸುತ್ತಾರೆ. ಮಳೆ ಬರುವ ಮೊದಲು ಸಾಗುವಳಿ ಮಾಡಲು ನಿರ್ಧರಿಸಿದ ಪ್ರದೇಶಗಳಲ್ಲಿ ಇರುವ ಮರಗಳನ್ನು ಕಡಿದು, ಬೇರುಗಳನ್ನು ತೆಗೆದು ಅಲ್ಲಿಯೇ ಗುಡ್ಡೆ ಹಾಕಿ ಅದಕ್ಕೆ ಬೆಂಕಿ ಹಚ್ಚುವುದು. ಹೀಗೆ ಬೆಂಕಿ ಹಚ್ಚುವುದರಿಂದ ಆ ಪ್ರದೇಶದ ಕ್ರಿಮಿ ಕೀಟಗಳು ನಾಶವಾಗುತ್ತವೆ. ಅಲ್ಲಿನ ಕಸಕಡ್ಡಿ, ಮರಗಿಡಗಳ ಕೊಂಬೆಗಳು, ಎಲೆಗಳು, ಬೇರುಗಳು ಸುಟ್ಟಾಗ ದೊರಕುವ ಬೂದಿ ಆ ನೆಲದಲ್ಲಿ ಸೇರಿ ಒಳ್ಳೆಯ ಗೊಬ್ಬರವಾಗುತ್ತದೆ. ಮಳೆ ಬಂದ ನಂತರ ಪುನಃ ನೆಲವನ್ನು ಅಗೆದು ಮಣ್ಣನ್ನು ಬುಡಮೇಲು ಮಾಡಿ, ಅಲ್ಲಿ ಬೀಜಗಳನ್ನು ಬಿತ್ತುತ್ತಾರೆ. ಬೆಳೆ ಬಂದ ನಂತರ, ಅದನ್ನು ಕಟಾವು ಮಾಡಿ, ಒಣಗಿಸಿ, ಬಡಿದು ಕಾಳುಗಳನ್ನು ಪಡೆದುಕೊಳ್ಳುತ್ತಾರೆ.

ಒಂದು ಸಲ ಒಂದು ಪ್ರದೇಶದಲ್ಲಿ ಬೆಳೆ ತೆಗೆದ ಮೇಲೆ ಪುನಃ ವ್ಯವಸಾಯಕ್ಕೆ ಆ ಜಾಗವನ್ನು ಬಳಸುವುದಿಲ್ಲ. ಮುಂದಿನ ಸಲಕ್ಕೆ ಬೇರೆ ಜಾಗವನ್ನು ಬಳಸಿಕೊಂಡು ಮೊದಲಿನ ಕ್ರಮದಂತೆಯೇ ಬೆಳೆ ಬೆಳೆದುಕೊಳ್ಳುತ್ತಾರೆ. ಹೀಗೆ ಒಂದೊಂದು ಸಲ ಬೆಳೆ ತೆಗೆದ ನಂತರವೂ ವ್ಯವಸಾಯದ ಭೂಮಿಯನ್ನು ಬದಲಾಯಿಸುವುದರಿಂದ ಈ ಬೇಸಾಯ ಕ್ರಮಕ್ಕೆ 'ಸ್ಥಳಾಂತರ ಬೇಸಾಯ' ಅಥವಾ ಕುಮ್ರಿ ಬೇಸಾಯ ಎಂದು ಕರೆಯುತ್ತಾರೆ. ಒಂದೇ ಪ್ರದೇಶದಲ್ಲಿ ಪದೇ ಪದೇ ವ್ಯವಸಾಯ ಮಾಡಿದರೆ ನೆಲದ ಸಾರ ಕಡಿಮೆಯಾಗಿ, ಬೇರೆ ಗೊಬ್ಬರ ಹಾಕದ ಹೊರತು ಬೆಳೆ ಬೆಳೆಯಲಾಗುವುದಿಲ್ಲ. ಆದರೆ ಸ್ಥಳಾಂತರ ಬೇಸಾಯ ಪದ್ಧತಿಯಲ್ಲಿ ಗೊಬ್ಬರದ ಅಗತ್ಯವಿಲ್ಲದೇ ಒಳ್ಳೆ ಬೆಳೆ ಬೆಳೆಯಬಹುದಾಗಿದೆ. ಸ್ಥಳಾಂತರ ಬೇಸಾಯವನ್ನು, ಅಸ್ಸಾಂ ಮತ್ತು ನಾಗಾಲ್ಯಾಂಡ್ ಪ್ರದೇಶಗಳಲ್ಲಿ ಝುಮ್ (jhum) ಅಥವಾ ಜಮ್ (jum) ಎಂದು, ಒರಿಸ್ಸಾದಲ್ಲಿ ಫೋಡು (podu), ದಾಹಿ (dahi), ಕಮಾನ್ (kamana) ಎಂದು ಮಧ್ಯಪ್ರದೇಶದಲ್ಲಿ ಪೆಂಡಾ (panda) ಎಂದು ಕರೆಯುತ್ತಾರೆ. ಇಂಗ್ಲೀಷ್ ನಲ್ಲಿ ಈ ಕ್ರಮವನ್ನು shifting cultivation ಎಂದು ಕರೆಯುತ್ತಾರೆ.

ನಾಗಾಲ್ಯಾಂಡ್, ತ್ರಿಪುರ, ಮಣಿಪುರ, ನೇಪಾಳ, ಮೀಜೋರಾಮ್ ಈ ಪ್ರದೇಶಗಳ ಬೆಟ್ಟಗುಡ್ಡಗಳ ಪ್ರದೇಶಗಳಲ್ಲಿ ವಾಸವಾಗಿರುವ ಎಲ್ಲಾ ಬುಡಕಟ್ಟು ಜನರು, ಬಿಹಾರ, ಒರಿಸ್ಸಾ, ಮಧ್ಯಪ್ರದೇಶಗಳಲ್ಲಿರುವ ಬಹುಪಾಲು ಬುಡಕಟ್ಟು ಜನರು ಸ್ಥಳಾಂತರ ಬೇಸಾಯದಿಂದ ಜೀವಿಸುತ್ತಿದ್ದಾರೆ. ಭಾರತವಲ್ಲದೆ, ಬರ್ಮಾ, ಸುಮಾತ್ರಾ, ಬೊರ್ನಿಯೋ, ನ್ಯೂಗಿನಿ ಹಾಗೂ ಆಫ್ರಿಕಾ ಖಂಡದಲ್ಲಿ ಸ್ಥಳಾಂತರ ಬೇಸಾಯ ಕ್ರಮ ಅನುಸರಿಸುತ್ತಿದ್ದಾರೆ (ಸಿಂಗ್ ಮತ್ತು ಇತರರು, 2006, ಜಡೇಗೌಡ ಮತ್ತು ರಮೇಶ್, 2008).

ಕರ್ನಾಟಕದ ಆದಿವಾಸಿ ಬುಡಕಟ್ಟಾದ ಕುಡುಬಿ ಸಮುದಾಯದವರ ಮೂಲ ವೃತ್ತಿ ಕುಮ್ರಿ ಬೇಸಾಯ. ಈ ವೃತ್ತಿಯನ್ನು ಇಂದಿಗೂ ಮುಂದುವರೆಸಿಕೊಂಡು ಬರುತ್ತಿದ್ದಾರೆ. ಇವರು ತಮ್ಮ ಮನೆಗಳನ್ನು ಎತ್ತರವಾದ ಪ್ರದೇಶದಲ್ಲಿ ನಿರ್ಮಿಸಿಕೊಂಡು ಮನೆಯಿಂದ ಕೂಗಳತೆ ದೂರದಲ್ಲಿ ಸಮತಟ್ಟಾದ ಭೂಮಿಯಲ್ಲಿ ವ್ಯವಸಾಯ ಮಾಡುವುದನ್ನು ರೂಢಿಸಿಕೊಂಡಿದ್ದಾರೆ. ಉಳುಮೆಯಲ್ಲಿ ಕೋಣಗಳನ್ನು ಬಳಸುತ್ತಿದ್ದು, ಕೋಣ, ಎಮ್ಮೆ, ಹಸು, ಎತ್ತು, ನಾಯಿಗಳನ್ನು ಸಾಕುತ್ತಾರೆ(ಪೂರ್ಣಿಮಾ, 2011). ಉತ್ತರ ಕನ್ನಡ ಜಿಲ್ಲೆಯಲ್ಲಿ ನೆಲೆಸಿರುವ ಹಾಲಕ್ಕಿ ಒಕ್ಕಲಿಗರ ಪ್ರಧಾನ ಕಸಬು ವ್ಯವಸಾಯ ಮತ್ತು ಹೈನುಗಾರಿಕೆ (ಭಟ್ಟ, 2011).

ಕಾಣಿಕ್ಕಾರ್ ಇವರು ದಕ್ಷಿಣ ತಿರುವಾಂಕೂರಿನ ಬೆಟ್ಟಗಳಲ್ಲಿ ನೆಲೆಯೂರಿರುವ ಗುಡ್ಡಗಾಡು ಜನಾಂಗದವರು. ಇವರ ಪ್ರಮುಖ ಉದ್ಯೋಗ ಕೃಷಿ. ಕೃಷಿಗಾಗಿ ಈ ಹಿಂದೆ ಯಾರೂ ಬಳಸಿರದ

ಭೂಮಿಯನ್ನು ಆಯ್ದುಕೊಳ್ಳುತ್ತಾರೆ. ಕೃಷಿಗಾಗಿ ಮರಗಿಡಗಳನ್ನು ಕಡಿದು ಒಂದಷ್ಟು ಜಾಗವನ್ನು ಅಣಿಗೊಳಿಸಿ ಬಳಿಕ ಕಡಿದು ಒಣಗಿದ ಮರ ಗಿಡಗಳಿಗೆ ಬೆಂಕಿ ಹಚ್ಚಿ ಭೂಮಿಯನ್ನು ಸ್ವಚ್ಛಗೊಳಿಸಿ ಎರಡು ಮೂರು ವರ್ಷ ಕೃಷಿ ಮಾಡಿ ಆ ನೆಲವನ್ನು ಬಿಟ್ಟು ಹೋಗುತ್ತಾರೆ. ಹೀಗೆ ಸ್ಥಳವನ್ನು ಆಗಾಗ ಬದಲಾಯಿಸಿಕೊಂಡು ಕೃಷಿ ಮಾಡುವುದು ಅವರಲ್ಲಿ ಇಂದಿಗೂ ಪ್ರಚಲಿತವಿರುವ ಪದ್ದತಿ. ಇವರು ನಾನಾ ರೀತಿಯ ಧಾನ್ಯ, ಕಾಳುಗಳು, ಮರಗೆಣಸು, ಸಿಹಿಗೆಣಸು, ಮತ್ತು ಹೊಗೆಸೊಪ್ಪನ್ನು ಬೆಳೆಯುತ್ತಿದ್ದಾರೆ(ನಿಜಮ್‌ಉದ್ದೀನ್, 2011).

ಆಂಧ್ರಪ್ರದೇಶದ ಕೊಂಡರೆಡ್ಲು, ಕೊಂಡದೊರ, ಕೊಂಡಕಮ್ಮರ, ಕೊಟೊಯಾ, ಕೊಯಾ, ಗೋಂಡು, ಪೋರ್ಜಾ, ಪ್ರಧಾನರು ಬುಡಕಟ್ಟುಗಳ ಕೃಷಿ ಪದ್ದತಿ ಬಗ್ಗೆ ಕೃಷ್ಣಾರೆಡ್ಡಿ (2011)ಅವರ ಅಧ್ಯಯನದ ವಿವರವನ್ನು ಈ ಕೆಳಗೆ ವಿವರಿಸಲಾಗಿದೆ.

ಆದಿಮ ಬುಡಕಟ್ಟಾದ ಕೊಂಡರೆಡ್ಲು ಬುಡಕಟ್ಟು ಒಣಬೇಸಾಯ ಮಾಡುತ್ತಿದ್ದು ಇವರು ಮೂರು ವರ್ಷಕ್ಕೊಮ್ಮೆ ಸಾಗುವಳಿ ಭೂಮಿಯನ್ನು ಬಿಟ್ಟು ಹೊಸ ಭೂಮಿಯಲ್ಲಿ ವ್ಯವಸಾಯ ಮಾಡುತ್ತಾರೆ. ಕೊಂಡದೊರ ಬುಡಕಟ್ಟುಗಳು ಒಣಬೇಸಾಯ ಪದ್ದತಿಗಳನ್ನು ಅನುಸರಿಸುತ್ತಿದ್ದು, ಇದರ ಜತೆಗೆ ಕಾಡಿನಿಂದ ಜೇನುತುಪ್ಪ, ಅಂಟು ಶೇಖರನೆ ಮಾಡಿ ಮಾರುತ್ತಾರೆ. ಚೈತ್ರ ಹಬ್ಬ, ಬಲ್ಲಿ ಹಬ್ಬ, ಹೊಸನವಣೆ, ಹೊಸವರೆ, ಮೊದಲಾದ ಹಬ್ಬಗಳನ್ನು ಆಚರಿಸುತ್ತಾರೆ. 'ಕಾಡಪಂದೊಯಿ'(ಬಿತ್ತನೆ ಪೂಜೆ) ಹಬ್ಬವನ್ನು ಆಚರಿಸುತ್ತಾರೆ. ಅಲ್ಲದೇ ಬೇಟೆ ಹಬ್ಬವನ್ನು ಆಚರಿಸುತ್ತಾರೆ.

ಶ್ರಿಕಾಕುಳಂ, ವಿಜಯನಗರಂ ಗೋದಾವರಿ ಜಿಲ್ಲೆಗಳಲ್ಲಿ ವಾಸಿಸುತ್ತಿರುವ ಕೊಂಡಕಮ್ಮರರ ಸಾಂಪ್ರದಾಯಿಕ ವೃತ್ತಿ ಕಮ್ಮಾರಿಕೆಯಾಗಿದ್ದರೂ, ಇವರಲ್ಲಿ ಬಹಳಷ್ಟು ಜನರು ಒಣಬೇಸಾಯ ಹಾಗೂ ಸ್ಥಿರ ವ್ಯವಸಾಯಗಳನ್ನು ಮಾಡುತ್ತಿದ್ದಾರೆ, ಭತ್ತ, ತೊಗರಿ, ಜೋಳ, ತರಕಾರಿ ಇವರು ಬೆಳೆಯುವ ಪ್ರಮುಖ ಬೆಳೆಗಳು. ಚೈತಾಪುರಬ್, ಮಾವಿನಬೆಳೆ, ತೊಗರಿಬೆಳೆ, ಅವರೆಬೆಳೆ, ನವಣೆ ಬೆಳೆಯಂತಹ ಕೃಷಿಗೆ ಸಂಭಂದಿಸಿದ ಹಬ್ಬಗಳನ್ನು ಆಚರಿಸುವುದನ್ನು ರೂಢಿಸಿಕೊಂಡಿದ್ದಾರೆ. ವಿಶಾಕಪಟ್ಟಣ ಜಿಲ್ಲೆಯಲ್ಲಿ ವಾಸಿಸುತ್ತಿರುವ ಕುಲಿಯಾ ಬುಡಕಟ್ಟಗಳ ಸಾಂಪ್ರದಾಯಿಕ ವೃತ್ತಿ ಬೇಸಾಯ ಮಾಡುವುದು ಮತ್ತು ಬಳೆ, ಮಣಿ, ಕೃತಕ ಆಭರಣಗಳನ್ನು ಮಾಡುವುದು. ಇವರು ಮಾವು, ತೊಗರಿ, ನವಣೆ ಮುಂತಾದ ಬೆಳೆ ಚೆನ್ನಾಗಿ ಬೆಳೆದಾಗ ಹಬ್ಬಗಳನ್ನು ಆಚರಿಸುತ್ತಾರೆ.

ವಿಶಾಕಪಟ್ಟಣ ಮತ್ತು ಶ್ರಿಕಾಕುಳಂ ಜಿಲ್ಲೆಯಲ್ಲಿ ವಾಸವಾಗಿರುವ ಕೊಟೊಯಾ ಬುಡಕಟ್ಟುಗಳು ವ್ಯವಸಾಯಗಾರರು. ಇವರು ರಾಗಿ, ಜೋಳ, ಮೆಕ್ಕೆಜೋಳ, ಭತ್ತದ ಬೆಳೆಗಳ ಜತೆಗೆ ಕೋಸು, ಬದನೆಕಾಯಿ, ಬೆಂಡೆಕಾಯಿ ಮುಂತಾದವುಗಳನ್ನು ಸಹ ಬೆಳೆಯುತ್ತಾರೆ. ಕಾಡಿನಲ್ಲಿ ವಾಸ ಮಾಡುವ ಕೊಯಾ ಬುಡಕಟ್ಟು ಸ್ಥಿರ ವ್ಯವಸಾಯಗಾರರಾಗಿದ್ದು ಜೋಳ, ರಾಗಿ, ಸಜ್ಜೆ ಬೆಳೆಯುತ್ತಾರೆ. ಆದಿಲಾಬಾದ್ ಜಿಲ್ಲೆಯಲ್ಲಿರುವ ಗೋಂಡು ಬುಡಕಟ್ಟು ಬೇಸಾಯನ್ನು ಮಾಡುತ್ತಿದ್ದು, ಬೇಸಾಯದಲ್ಲಿ ಕೂಲಿಗಳಾಗಿಯೂ ಸಹ ದುಡಿಯುತ್ತಾರೆ. ಜೋಳ, ಹತ್ತಿ, ತೊಗರಿ, ಉದ್ದು ಇವರು ಬೆಳೆಯುವ ಪ್ರಮುಖ ಬೆಳೆಗಳು. ಇವರು ನೈವೇದ್ಯವನ್ನು ಇಡದೆ ಬೆಳೆದ ಮೊದಲ ಹಣ್ಣುಗಳನ್ನಾಗಲಿ, ಧಾನ್ಯಗನ್ನಾಗಲಿ ತಿನ್ನುವುದಿಲ್ಲ. ಈ ಹಬ್ಬವನ್ನು ಗೋಂಡ ಭಾಷೆಯಲ್ಲಿ 'ಸೋವಾನ್' ಎನ್ನುತ್ತಾರೆ.

ಪೋರ್ಜಾ ಬುಡಕಟ್ಟು ಕೃಷಿಗೆ ಸಂಬಂದಿಸಿದಂತೆ ಪೊಡುಜ (ಬಿತ್ತುವ ಹಬ್ಬ) ಗೊಟ್ನಾಕಿಯಾ (ಉಳುವ ಹಬ್ಬ) ಅಲ್ಲದೆ ಗಿಲಿಯಾಬ್ ಪೋರ್ಜಾ (ಬೇಟೆಯ ಹಬ್ಬ) ಬಲಿ ದೇವತಾ ಹಬ್ಬಗಳನ್ನು ಆಚರಿಸುತ್ತಾರೆ.

ಆದಿಲ್‌ಬಾದ್ ಜಿಲ್ಲೆಯಲ್ಲಿ ವಾಸಿಸುತ್ತಿರುವ ಪ್ರಧಾನರು ಬೇಸಾಯ ಮಾಡುತ್ತಿದ್ದು ಹತ್ತಿ, ಜೋಳ, ತೊಗರಿ, ಹೆಸರು ಮೊದಲಾದ ಬೆಳೆಗಳನ್ನು ಬೆಳೆಯುವುದರ ಜೊತೆಗೆ ರೇಷ್ಮೆ ಹುಳುವಿನ ಸಾಕಾಣಿಕೆಯಲ್ಲಿ ತೊಡಗಿದ್ದಾರೆ.

ಕುರಿಚ್ಯರು ಕೇರಳದ ವಯನಾಡು, ಕಣ್ಣೂರು, ಕೊಳಿಕ್ಕೋಡು ಜಿಲ್ಲೆಯಲ್ಲಿ ವಾಸಿಸುವ ಜನ. ಕೃಷಿ, ಬೇಟೆ, ಮೀನುಗಾರಿಕೆ, ಪಶುಪಾಲನೆ, ಜೇನು ಸಂಗ್ರಹ ಇವು ಕುರಿಚ್ಯರ ಜೀವನೋಪಾಯಗಳು. ಬಿತ್ತನೆ ಹಾಗೂ ಕೊಯಿಲಿಗೆ ಸಂಬಂಧಿಸಿದಂತೆ ಕೆಲವು ಆಚರಣೆಗಳನ್ನು ಅನುಸರಿಸುತ್ತಿದ್ದು, 'ಪುತ್ತರಿಕ್ಕೋಳ್' (ಹುತ್ತರಿ) ಎಂಬ ಹಬ್ಬದ ಆಚರಣೆ ಇದೆ. ಈ ಹಬ್ಬಕ್ಕಾಗಿ ಭತ್ತ, ಅಕ್ಕಿ, ಅವಲಕ್ಕಿಗಳಿಗಾಗಿ ಪ್ರತ್ಯೇಕವಾಗಿ ಪೈರನ್ನು ಕೊಯ್ದು ತಂದು ಅವುಗಳನ್ನು ಸಿದ್ದಪಡಿಸುತ್ತಾರೆ (ಮಿನಿ, 2011).

ಪರಂಪರೆಯಿಂದ ಬಂದ ವ್ಯವಸಾಯ ಪದ್ದತಿಯನ್ನು ಬಿಟ್ಟು ಎತ್ತುಗಳ ಸಹಾಯದಿಂದ ವ್ಯವಸಾಯ ಮಾಡುವುದನ್ನು ಕೆಲವು ಸೋಲಿಗರು ಅಳವಡಿಸಿಕೊಂಡಿದ್ದಾರೆ. ಹಾಗೂ ವ್ಯವಸಾಯಕ್ಕೆ ಆಧುನಿಕ ಯಂತ್ರೋಪಕರಣಗಳನ್ನು ಬಳಸುತ್ತಿದ್ದಾರೆ. ರೇಷ್ಮೆ ಕೃಷಿಯಲ್ಲೂ ಕೆಲವರು ತೊಡಗಿಸಿಕೊಂಡಿದ್ದಾರೆ, ರಾಗಿ ಹಬ್ಬ, ರೊಟ್ಟಿ ಹಬ್ಬ, ಮತ್ತು ಕ್ಯಾತದೇವರ ಹಬ್ಬಗಳು ಇವರು ವಿಶೇಷವಾಗಿ ಆಚರಿಸುವ ಹಬ್ಬಗಳಾಗಿವೆ (ರಾಮಕೃಷ್ಣ, 2011).

ಜೈವಿಕ ವೈವಿಧ್ಯತೆಯು ಪರಿಸರ ಪೂರಕ ಸುಸ್ಥಿರ ಅಭಿವೃದ್ಧಿ ಹಾಗೂ ಆಹಾರ ಭದ್ರತೆಯನ್ನು ಒದಗಿಸುವುದಕ್ಕೆ ಅಡಿಪಾಯವಾಗಿದೆ. ಸೋಲಿಗರು ಕುಟುಂಬದ ಆಹಾರ ಭದ್ರತೆಗಾಗಿ ಕೃಷಿಯ ಜತೆಗೆ ಹಂದಿ ಸಾಕಣೆ, ಕೋಳಿ ಸಾಕಣೆ, ಹಸು ಸಾಕಣೆಯನ್ನು ಉಪಕಸುಬಾಗಿ ಕೈಗೊಂಡಿದ್ದಾರೆ. ಇವರಲ್ಲಿ ಹೆಚ್ಚು ರೈತರು ತುಂಡು ಭೂಮಿಯನ್ನು ಹೊಂದಿದ್ದು ಅಷ್ಟೇ ಭೂಮಿಯಲ್ಲಿ ತಮ್ಮ ಕುಟುಂಬದ ಸದಸ್ಯರ ಆಹಾರ ಭದ್ರತೆಗಾಗಿ ಏಕದಳಧಾನ್ಯ, ದ್ವಿದಳಧಾನ್ಯ, ಹಣ್ಣು ಮತ್ತು ತರಕಾರಿಗಳನ್ನು ಬೆಳೆಯುವ ಪದ್ದತಿಯನ್ನು ಅಳವಡಿಸಿಕೊಂಡಿದ್ದಾರೆ. ಕೃಷಿ ಚಟುವಟಿಕೆಗಳನ್ನು ಮತ್ತು ಹಬ್ಬಗಳನ್ನು ಆಚರಿಸಲು ಟಿಬೆಟಿಯನ್ ಜೋತಿಷ್ಯರು ರಚಿಸಿದ ಸಂಪ್ರದಾಯಿಕ ಪಂಚಾಂಗವನ್ನು ನೋಡುತ್ತಾರೆ. ಹಸು ಸಾಕಾಣಿಕೆ, ಕೃಷಿ ಚಟುವಟಿಕೆಗೆ ತಮ್ಮದೇ ಆದ ದೇಶಿ ಪದ್ದತಿಯನ್ನು ಅಳವಡಿಸಿಕೊಂಡು ಅನುಸರಿಸುತ್ತಾ ಬಂದಿದ್ದಾರೆ. ಆದಿಕಾಲದಿಂದಲೂ ಪರಿಸರ ಪೂರಕ ಕೃಷಿ ಪದ್ದತಿ ಹಾಗೂ ಮಣ್ಣಿನ ಫಲವತ್ತತೆ ಕುರಿತು ಅಪಾರವಾದ ಜ್ಞಾನಹೊಂದಿದವರೆಂದು ಹೆಸರು ಪಡೆದಿದ್ದಾರೆ. ನಿಸರ್ಗದೊಂದಿಗೆ ಸಾಮರಸ್ಯದಿಂದ ಬದುಕುವ ಕಲೆಯನ್ನು ಹೊಂದಿದ್ದಾರೆ. ಅರಣ್ಯ ಸಂರಕ್ಷಣೆಯ ಕುರಿತಂತೆ ಆಗಾಧವಾದ ಸ್ಥಳೀಯ ಜ್ಞಾನ ಭಂಡಾರವೇ ಇವರಲ್ಲಿದೆ ಮತ್ತು ಜೀವನಾಧಾರಿತ ಕೃಷಿಯ ಕುರಿತು ಸಹ ಹೆಚ್ಚು ಅರಿವನ್ನು ಹೊಂದಿದ್ದಾರೆ.

ಸಂರಕ್ಷಿತ ಅರಣ್ಯ ನೀತಿ–1974 ಜಾರಿಯಾದ ನಂತರದಿಂದ ಸೋಲಿಗರು ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆ ಕೆಲಸದಿಂದ ಕೃಷಿ ಕಾಯಕದ ಮೇಲೆ ಹೆಚ್ಚು ಅವಲಂಬಿತರಾಗಿದ್ದಾರೆ. ಕೃಷಿಯಲ್ಲಿ ಮಿಶ್ರ ಬೆಳೆ ಪದ್ಧತಿ, ಬಹು ಬೆಳೆ ಪದ್ಧತಿಯನ್ನು ಅನುಸರಿಸುತ್ತಿದ್ದುದಲ್ಲದೆ, ಆಂತರಿಕ ಜೈವಿಕ

ವೈವಿಧ್ಯತೆಯನ್ನು ಬೆಂಬಲಿಸುವ ವಿವಿಧ ಬೆಳೆಗಳನ್ನು ಸಹ ಬೆಳೆಯುತ್ತಾರೆ. ರಾಗಿ, ಮೆಕ್ಕೆಜೋಳ, ಅಲಸಂದೆ, ಹುರುಳಿ, ಸಾಸಿವೆ, ದಂಟಿನಬೀಜ, ನವಣೆ, ಜೋಳ ಮತ್ತು ಬರಗು ತರಕಾರಿಗಳಾದ ಸವತೆ, ಬೀನ್ಸ್, ಕುಂಬಳಕಾಯಿ, ಗೆಡ್ಡೆ ಕೋಸುಗಳು, ಪೆರಿನಿಯಲ್ ಬೀನ್ಸ್ ಇವರು ಬೆಳೆಯುವ ಪ್ರಮುಖ ಬೆಳೆಗಳು. ರಾಗಿ ಮತ್ತು ಮೆಕ್ಕೆಜೋಳ ಇವರ ಮುಖ್ಯ ಅಹಾರ. ತೊಗರಿ, ಅವರೆ, ಸಾಸಿವೆ, ಹರಳು ಮತ್ತು ದಂಟಿನ ಬೀಜವನ್ನು ರಾಗಿ ಮತ್ತು ಮೆಕ್ಕೆ ಜೋಳದ ಜತೆ ಮಿಶ್ರ ಬೆಳೆಯಾಗಿ ಬೆಳೆಯುತ್ತಿದ್ದಾರೆ. ಕೃಷಿ ಚಟುವಟಿಕೆಯ ಜತೆಜತೆಗೆ ಸಾಂಸ್ಕೃತಿಕ ಹಬ್ಬ ಹರಿದಿನಗಳನ್ನು ಬೆಳೆಯ ಹಂತವನ್ನಾಧರಿಸಿ ಆಚರಿಸುತ್ತಾರೆ. ಅದರಲ್ಲಿ "ರಾಗಿ ಹಬ್ಬ" ಸಹ ಒಂದು ಇದನ್ನು ರಾಗಿ ಕೊಯ್ಲು ಮಾಡುವ ಸಮಯದಲ್ಲಿ ಆಚರಿಸುತ್ತಾರೆ (ಜಡೇಗೌಡ ಮತ್ತು ರಮೇಶ್, 2008).

## 2.4 ಬುಡಕಟ್ಟು ಸಮುದಾಯ ಹಾಗೂ ಆಹಾರ ಭದ್ರತೆ

**2.4.1 ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ:** ಪ್ರತಿಯೊಂದು ಬುಡಕಟ್ಟು ಸಮುದಾಯಗಳು ಹೆಚ್ಚಾಗಿ ಅರಣ್ಯಕ್ಕೆ ಸಮೀಪ ಅಥವಾ ಅರಣ್ಯದ ಒಳಗೆ ವಾಸಿಸುತ್ತಿದ್ದು ಇವರು ಆದಿಕಾಲದಿಂದಲೂ ತಮ್ಮ ಸುತ್ತಮುತ್ತಲಿನ ಜೈವಿಕ ವೈವಿಧ್ಯತೆಯನ್ನು ಕಾಪಾಡಿ ಪೋಷಿಸಿ ನಿರ್ವಹಿಸುತ್ತಾ ಬಂದಿದ್ದಾರೆ. ತಮ್ಮ ಆಹಾರಕ್ಕಾಗಿ ಸಹ ಅರಣ್ಯವನ್ನೇ ಅವಲಂಬಿಸಿದ್ದು ಅಲ್ಲಿ ದೊರೆಯುವ ಅಹಾರ ಉತ್ಪನ್ನಗಳನ್ನು ಕೆಲವೊಂದು ಹಸಿಯಾಗಿ ಹಾಗೂ ಕೆಲವೊಂದು ಬೇಯಿಸಿ ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ. ಬುಡಕಟ್ಟು ಜನರು ಅರಣ್ಯದಲ್ಲಿ ಅನೇಕ ವರ್ಷಗಳಿಂದ ವಾಸಿಸುತ್ತಿದ್ದಾರೆ. ಇವರು ಅರಣ್ಯ ಉತ್ಪನ್ನಗಳು, ಉರುವಲು ಹಾಗೂ ಬಿದಿರುಗಳನ್ನು ದೈನಂದಿನ ಅಗತ್ಯಗಳನ್ನು ಪೂರೈಸಲು ಬಳಸುತ್ತ ಅರಣ್ಯದೊಂದಿಗೆ ಅನ್ಯೋನ್ಯ ಸಂಬಂಧ ಬೆಳೆಸಿಕೊಂಡು ಬಂದಿದ್ದಾರೆ.

ಭಾರತ ದೇಶವು ಜೈವಿಕ ವೈವಿಧ್ಯತೆಯಿಂದ ಸಂಪತ್ಭರಿತವಾಗಿದ್ದು ಇಲ್ಲಿ ತಮ್ಮದೆ ಆದ ಸಂಸ್ಕೃತಿಯನ್ನು ಮತ್ತು ನೀತಿಯನ್ನು ಆಧರಿಸಿದ ಅನೇಕ ಸಮುದಾಯಗಳು ಬದುಕುತ್ತಿವೆ. ನಮ್ಮ ದೇಶವು ಸುಮಾರು 45000 ವಿವಿಧ ಪ್ರಭೇದಗಳ ಸಸ್ಯಸಂಪತ್ತನ್ನು ಹೊಂದಿದ್ದು ಇದರಲ್ಲಿ 9500 ಪ್ರಬೇಧಗಳು ಜೈವಿಕ ಶಾಸ್ತ್ರೀಯ ಪ್ರಕಾರ ಮಹತ್ವವುಳ್ಳವುಗಳಾಗಿವೆ. ಇದರಲ್ಲಿ 7500 ಪ್ರಭೇದಗಳು ಔಷಧಿ ಸಸ್ಯಗಳಾಗಿದ್ದು ಆರೋಗ್ಯ ರಕ್ಷಣೆಗೋಸ್ಕರ ಉಪಯೋಗಿಸುತ್ತಿದ್ದಾರೆ. 3900 ಪ್ರಭೇದಗಳನ್ನು ಬುಡಕಟ್ಟು ಸಮುದಾಯವು ಆಹಾರಕ್ಕಾಗಿ ಉಪಯೋಗಿಸುತ್ತಿದ್ದು, ಇವುಗಳಲ್ಲಿ 145 ಗೆಡ್ಡೆ–ಗೆಣಸುಗಳು, 521 ಸೊಪ್ಪು ತರಕಾರಿಗಳು, 101 ಉಳ್ಳಿಗಳು ಹಾಗೂ ಹೂವುಗಳು 647 ಹಣ್ಣುಗಳು ಪ್ರಮುಖವಾದವುಗಳಾಗಿವೆ. ಅಲ್ಲದೆ 525 ಪ್ರಭೇದದ ಸಸ್ಯಗಳನ್ನು ನಾರು ಪದಾರ್ಥಕ್ಕಾಗಿ, 400 ಪ್ರಭೇದಗಳನ್ನು ಮೇವಿಗಾಗಿ, 300 ಪ್ರಭೇದಗಳನ್ನು ನೈಸರ್ಗಿಕ ಕೀಟನಾಶಕ, ರೋಗನಾಶಕ ರಾಸಾಯನಿಕಗಳನ್ನು ತಯಾರಿಸಲು ಮತ್ತು 300 ವಿಧದ ಪ್ರಭೇದಗಳನ್ನು ಅಂಟು, ರಾಳ ಬಣ್ಣ, ಸುವಾಸಿಕಗಳನ್ನು ತಯಾರಿಸಲು ಬಳಸಲಾಗುತ್ತಿದೆ(ಅರೋರಾ, 1991). ಇದಲ್ಲದೆ, 700 ಪ್ರಭೇದಗಳನ್ನು ಸಂಸ್ಕೃತಿಕ ಹಾಗೂ ಧಾರ್ಮಿಕ ಆಚರಣೆಗಳಲ್ಲಿ, ಸೌಂದರ್ಯೋಪಾಸಕಗಳಾಗಿ ಹಾಗೂ ಸಾಮಾಜಿಕವಾಗಿ ಮಹತ್ವವನ್ನು ಪಡೆದಿವೆ (ರೈ ಮತ್ತು ನಾಥ್, 2003).

ಭಾರತದ ಅನೇಕ ಮೂಲವಾಸಿ ಪಂಗಡಗಳ ಅಧ್ಯಯನ ಕಾಡುಗಳ ಬಗೆಗಿನ ಅವರ ಗಾಢವಾದ, ವ್ಯವಸ್ಥಿತ ಜ್ಞಾನವನ್ನು ಬೆಳಕಿಗೆ ತಂದಿದೆ. ಅರಣ್ಯ ಆಹಾರಗಳ ವೈವಿಧ್ಯ ಈ ಜ್ಞಾನದ ಫಲ. ಕರ್ನಾಟಕದ ಬಿಳಿಗಿರಿ ರಂಗನ ಬೆಟ್ಟದ ಸೋಲಿಗರ ಕುರಿತ ಅಧ್ಯಯನದಲ್ಲಿ ಅವರು ಆಹಾರಕ್ಕಾಗಿ ವರ್ಷದ ವಿವಿಧ ಕಾಲಗಳಲ್ಲಿ 27 ವಿವಿಧ ಬಗೆಯ ಎಲೆಗಳನ್ನು ಹಾಗೂ ಅನೇಕ ಎಲೆ,

ಹಣ್ಣು, ಕಾಂಡಗಳನ್ನು ಅವುಗಳ ಔಷಧೀಯ ಗುಣಗಳಿಂದಾಗಿ ಬಳಸುತ್ತಿದ್ದುದು ಕಂಡುಬಂದಿತು. ಕೊತ್ತಗಿರಿಯ ಅನಕ್ಷರಸ್ಥ ಇರುಳರ ಹುಡುಗನೊಬ್ಬ 37 ವಿವಿಧ ಸಸ್ಯಗಳನ್ನು ಗುರುತಿಸಿ, ಅವುಗಳ ದೇಶಿ ಹೆಸರನ್ನು, ಉಪಯೋಗವನ್ನು ಹೇಳಬಲ್ಲವನಾಗಿದ್ದ.

ಬಹುಪಾಲು ಬುಡಕಟ್ಟುಗಳು ವಿಶಿಷ್ಟ ಪರಿಸರದಲ್ಲಿ ವಾಸಿಸುತ್ತಿದ್ದು ಇತರೇ ಬಹುಸಂಖ್ಯಾತ ನಾಗರೀಕ ಸಮಾಜದಿಂದ ದೂರ ಉಳಿದಿದ್ದಾರೆ. ಆದ್ದರಿಂದ ಅವರ ಆಹಾರ ಪದ್ಧತಿ ಮತ್ತು ದೊರಕುವಿಕೆಯು ವಿಶಿಷ್ಟವಾಗಿರುವುದು ಅನಿವಾರ್ಯವಾಗಿದೆ. ಹೊರಪ್ರಪಂಚದ ಜನರಂತೆ ಆಹಾರ ದೊರಕುವಿಕೆಯು ವಿಶಾಲವಲ್ಲದ್ದರಿಂದ ಸೀಮಿತ ವಾತಾವರಣವನ್ನು ಅವಲಂಬಿಸಿದೆ.

ಈ ಹಿನ್ನೆಲೆಯಲ್ಲಿ ಅವರ ಆಹಾರ ಸೇವನಾಕ್ರಮಕ್ಕೂ ಪ್ರಭಾವ ಬೀರುತ್ತದೆ. ನೈಸರ್ಗಿಕ ವಿಕೋಪಗಳು, ಕಾಲದ ಬದಲಾವಣೆಗಳು, ಕೃಷಿ ಮತ್ತು ಅರಣ್ಯ ಆಹಾರದ ಉತ್ಪನ್ನಗಳು ಅವರ ಆಹಾರ ಮತ್ತು ಪೌಷ್ಟಿಕತೆಯನ್ನು ಪ್ರತಿನಿಧಿಸುತ್ತವೆ.

ಬುಡಕಟ್ಟು ಸಮುದಾಯದ ಆಹಾರಗಳು ಏಕದಳ ಧಾನ್ಯಗಳು, ತೃಣ ಧಾನ್ಯಗಳು, ಗೆಡ್ಡೆ ಗೆಣಸುಗಳನ್ನು ಒಳಗೊಂಡಿದೆ. ಈ ಹಿಂದೆ ನೆಡೆಸಿದ ಹಲವಾರು ಅಧ್ಯಯನಕಾರರು ಅಕ್ಕಿ, ಗೋಧಿ, ಮೆಕ್ಕೆಜೋಳ, ಸಜ್ಜೆ, ರಾಗಿ ಮತ್ತು ಕೆಲವು ಕಿರುಧಾನ್ಯಗಳನ್ನು ಒಳಗೊಂಡಿದೆ ಎಂದು ದಾಖಲಿಸಿದ್ದಾರೆ (ಸೇನ್ ಗುಪ್ತಾ, 1980, ಗೋರೆ ಮತ್ತಿತರರು, 1977, ರಾವ್ ಮತ್ತು ಸತ್ಯನಾರಾಯಣ, 1974). ಇವರ ಆಹಾರದಲ್ಲಿ ಬೇಳೆಕಾಳುಗಳ ಬಳಕೆಯು ಸೀಮಿತವಾಗಿದೆ. ಆದಾಗ್ಯೂ ಹುರಳಿ, ತೊಗರಿ, ಬಳಸುತ್ತಿರುವುದನ್ನು ಗಮನಿಸಲಾಗಿದೆ.

ತರಕಾರಿಗಳು ಬಹುತೇಕ ಬುಡಕಟ್ಟುಗಳ ಪೂರಕ ಆಹಾರಗಳಾಗಿವೆ. ಬುಡಕಟ್ಟು ಆಹಾರ ಪದ್ಧತಿಯು ಪ್ರಮುಖವಾಗಿ ಯಾವುದೇ ಒಂದು ಧಾನ್ಯದಿಂದ ತಯಾರಿಸಿದ ಅನ್ನ/ಖಾದ್ಯದ ಜತೆಗೆ ಆಯಾ ಕಾಲದಲ್ಲಿ ದೊರಕುವ ತರಕಾರಿಗಳಾದ ಬದನೆ, ಬೀನ್ಸ್, ಹೀರೆಕಾಯಿ, ಸೋರೆಕಾಯಿ, ಕುಂಬಳಕಾಯಿ, ಈರುಳ್ಳಿ, ಹಸಿಮೆಣಸಿನಕಾಯಿ, ಅಣಬೆ ಮುಂತಾದವುಗಳನ್ನು ಬೇಯಿಸಿ ಅನ್ನದ ಜತೆ ಸೇವಿಸುವುದು ಇವರ ಆಹಾರ ಪದ್ಧತಿಯಾಗಿದೆ(ರಾಯ್ ಮತ್ತು ರಾವ್, 1962, ರಾವ್, 1972). ನಮ್ಮ ದೇಶದಲ್ಲಿಯ ಅನೇಕ ಬುಡಕಟ್ಟುಗಳು ತಮ್ಮ ಮನೆಯ ಮುಂದೆ ಅಥವಾ ಹಿಂದೆ ಬೆಳೆದ ಅಥವಾ ಹೊಲದ ಬದುವಿನಲ್ಲಿ ಬೆಳೆದ ಅಥವಾ ಹತ್ತಿರದ ಅರಣ್ಯದಿಂದ ಸಂಗ್ರಹಿಸಿ ತಂದ ಸೊಪ್ಪುಗಳನ್ನು ದಿನನಿತ್ಯದ ಆಹಾರದಲ್ಲಿ ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ. ಇವರಲ್ಲಿ ಅನೇಕರು ಸೊಪ್ಪುಗಳನ್ನು ಇಷ್ಟ ಪಟ್ಟು ಹಾಗೂ ಹೆಚ್ಚಿನ ಪ್ರಮಾಣದಲ್ಲಿ ಸೇವಿಸುವುದು ಕಂಡುಬಂದಿದೆ(ಪಿಂಗಾಲೆ, 1973, ಸೇನ್‌ಗುಪ್ತಾ, 1980, ಶರ್ಮಾ, 1971).

ಬುಡಕಟ್ಟು ಸಮುದಾಯಗಳು ಅಣಬೆ ಟೊಮ್ಯಾಟೊ ಮತ್ತು ಬಾಳೆಕಾಯಿಗಳನ್ನು ತುಂಬಾ ಕಡಿಮೆ ಪ್ರಮಾಣದಲ್ಲಿ ಸೇವಿಸುವುದನ್ನು ನ್ಯುಮಾನ್(1975) ಮತ್ತು ಹಾರ್‍ನರ್ ಮತ್ತಿತರರು(1981) ವರದಿ ಮಡಿದ್ದಾರೆ. ವೈವಿಧ್ಯಮಯ ಹಾಗೂ ವಿವಿಧ ಬಗೆಯ ಸೊಪ್ಪುಗಳಾದ ಉದಾಹರಣೆಗೆ, ಟುಲಿಪ್, ಸಿಹಿಗೆಣಸು, ಕೆಸವು, ಅಲಸಂದೆ, ಕುಂಬಳ, ಕೋಸು ಮುಂತಾದ ತರಕಾರಗಳ ಎಲೆಗಳನ್ನು ಹಾಗೂ ಕಳಲೆಯನ್ನು ಸೊಪ್ಪಿನ ತರಕಾರಿಯಾಗಿ ಬಳಸುತ್ತಿರುವುದು ಕಂಡುಬಂದಿದೆ(ರಾಬ್ಸನ್, 1977).

ಬಹುತೇಕ ಬುಡಕಟ್ಟು ಜನರು ಇಷ್ಟಪಟ್ಟು ಸೇವಿಸುವ ಆಹಾರಗಳಲ್ಲಿ ಮಾಂಸಾಹಾರ ಕೂಡ ಒಂದು. ಇವರು ಸಾಕುಪ್ರಾಣಿಗಳನ್ನಾಗಲಿ ಅಥವಾ ವನ್ಯ ಪ್ರಾಣಿಗಳನ್ನಾಗಲಿ ಲಭ್ಯತೆಯ ಮೇರೆಗೆ ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ. ಅನೇಕ ಬುಡಕಟ್ಟು ಸಮುದಾಯಗಳು ಮಾಂಸಕ್ಕಾಗಿ ಎಂದೇ ಹಂದಿ, ಕೋಳಿ, ಹುಂಜಗಳನ್ನು ಸಾಕುತ್ತಾರೆ. 'ಹಂದಿಮಾಂಸ' ಬಹಳಷ್ಟು ಬುಡಕಟ್ಟು ಜನರ ಪ್ರಿಯವಾದ ಮಾಂಸಾಹಾರ (ರಾವ್, 1971). ಯಾಕ್ ಪ್ರಾಣಿಯ ಮಾಂಸವು ಅಮೋರ್ ಬುಡಕಟ್ಟುಗಳಿಗೆ ಅತೀ ಬೆಲೆಯುಳ್ಳ (Prized food) ಮಾಂಸಾಹಾರ (ರಾವ್, 1971). ವಿಶೇಷ ಸಂದರ್ಭಗಳಲ್ಲಿ ದನಗಳು, ಆಕಳು, ಎತ್ತು, ಹಂದಿ ಕೋಳಿ ಮುಂತಾದವುಗಳನ್ನು ದೇವರಿಗಾಗಿ ಬಲಿಕೊಡುವ ಹಾಗೂ ಬಲಿಕೊಟ್ಟ ನಂತರ ಮಾಂಸದ ಊಟವನ್ನು ಹಳ್ಳಿಯ ಎಲ್ಲರೂ ಸೇರಿ ಸೇವಿಸುವ ಪದ್ದತಿ ಅನೇಕ ಬುಡಕಟ್ಟುಗಳಲ್ಲಿ ರೂಢಿಯಲ್ಲಿದೆ(ಸೇನ್ ಗುಪ್ತಾ, 1980). ಆಹಾರಕ್ಕಾಗಿ ವೈವಿಧ್ಯಮಯ ಅಥವಾ ಅನೇಕ ಬಗೆಯ ಪ್ರಾಣಿಗಳ ಮಾಂಸವನ್ನು ಸೇವಿಸುತ್ತಿದ್ದರೂ ಸಹ ಇವರು ಸೇವಿಸುವ ಪ್ರಮಾಣ ಕಡಿಮೆ ಇರುವುದಾಗಿ ವರದಿಗಳು ತಿಳಿಸುತ್ತವೆ.

ಜಲಚರ ಪ್ರಾಣಿಗಳಾದ ಆಕ್ಟೋಪಸ್, ಶಾರ್ಕ್, ಏಡಿ, ಆಮೆ ಹಾಗೂ ವಿವಿಧ ಬಗೆಯ ಮೀನುಗಳು, ಸೀಗಡಿ, ಮುಂತಾದವುಗಳನ್ನು ಅಂಡಮಾನ್‌ನ ಓಂಗೆ ಬುಡಕಟ್ಟು ಜನರು ಸೇವಿಸುವುದಾಗಿ ಸ್ವಾಮಿನಾಥನ್(1971) ಮತ್ತು ಸೇನ್ ಗುಪ್ತಾ(1980) ವರದಿ ಮಡಿದ್ದಾರೆ.

ಮೀನನ್ನು ಎಲ್ಲ ಬುಡಕಟ್ಟು ಜನರು ಇಷ್ಟಪಟ್ಟು ತಿನ್ನುತ್ತರಾದರೂ ಎಲ್ಲರಿಗೂ ಇದನ್ನು ಕೊಂಡುಕೊಳ್ಳಲು ಸಾಧ್ಯವಿಲ್ಲದ ಕಾರಣ ನಿಯಮಿತವಾಗಿ ಸೇವಿಸುತ್ತಿಲ್ಲ. ಆದಾಗ್ಯೂ, ಒಣ ಮೀನನ್ನು ತರಕಾರಿ ಪಲ್ಯ/ಸಾಂಬರ್ ತಯಾರಿಸುವಾಗ ಸುವಾಸನೆಗಾಗಿ ಬಳಸುತ್ತಿರುವುದನ್ನು ರೂಢಿಸಿಕೊಂಡಿರುವುದಾಗಿ ರಾಯ್ ಮತ್ತು ರಾವ್ (1962) ವರದಿ ಮಾಡಿದ್ದಾರೆ. ಮೊಟ್ಟಗಳನ್ನು ಸೇವಿಸುದಕ್ಕಿಂತಲೂ ಮುಖ್ಯವಾಗಿ ಮರಿಮಾಡಲು ಬಳಸುವುದು ಬುಡಕಟ್ಟುಗಳಲ್ಲಿ ಸಾಮಾನ್ಯವಾಗಿ ಕಂಡುಬಂದಿರುವ ದೃಶ್ಯ. ಆಂದ್ರಪ್ರದೇಶದ ಚೆಂಚು ಬುಡಕಟ್ಟು ಮತ್ತು ಅಂಡಮಾನ್‌ನ ಓಂಗೆ ಬುಡಕಟ್ಟುಗಳು ಕೋಳಿಮೊಟ್ಟೆ ಮತ್ತು ಆಮೆಯ ಮೊಟ್ಟೆಯನ್ನು ಸೇವಿಸುವುದು ಕಂಡುಬಂದಿದೆ.

ಹಾಲು ಮತ್ತು ಹಾಲಿನ ಪದಾರ್ಥಗಳ ಸೇವನೆ ಬಹುತೇಕ ಬುಡಕಟ್ಟುಗಳಲ್ಲಿ ತುಂಬಾ ವಿರಳ ಎನ್ನಬಹುದು. ಅನೇಕ ಬುಡಕಟ್ಟು ಸಮುದಾಯಗಳು ಹಸುಗಳನ್ನು ಸಾಕುತ್ತಿದ್ದರೂ ಸಹ ಇವನ್ನು ಪ್ರಮುಖವಾಗಿ ಕೃಷಿ ಕೆಲಸಕ್ಕಾಗಿ ಮತ್ತು ಮಾಂಸಕ್ಕಾಗಿ ಉಪಯೋಗಿಸಿಕೊಳ್ಳುತ್ತಾರೆ(ಗೋರೆ, 1977). ತೋಡಾ ಬುಡಕಟ್ಟುಗಳ ಆಹಾರ ಪದ್ದತಿಯಲ್ಲಿ ಮಾತ್ರ ಹಾಲಿನ ಪದಾರ್ಥಗಳಾದ ಮೊಸರು, ಮಜ್ಜಿಗೆ, ಬೆಣ್ಣೆಯನ್ನು ಯಥೇಚ್ಛವಾಗಿ ಬಳಸುತ್ತಿರುವುದು ಕಂಡುಬಂದಿದೆ. ಯಾಕ್ ಮತ್ತು ಹಸುವಿನ ಹಾಲಿನಿಂದ ಪಡೆದ ಬೆಣ್ಣೆ ಮತ್ತು ಗಿಣ್ಣನ್ನು ಮೊಂಪ ಬುಡಕಟ್ಟು ಜನರು ಸೇವಿಸುವುದನ್ನು ಸೇನ್ ಗುಪ್ತಾ(1980) ವರದಿ ಮಾಡಿದ್ದಾರೆ.

ಎಳ್ಳು, ಔಡಲ, ಕಡಲೆಕಾಯಿ ಇವು ಬಹುತೇಕ ಬುಡಕಟ್ಟುಗಳು ಬೆಳೆಯುವ ಎಣ್ಣೆಕಾಳುಗಳು. ಬುಡಕಟ್ಟು ಸಮುದಾಯಗಳ ಆಹಾರ ಪದ್ದತಿಯಲ್ಲಿ ಎಣ್ಣೆ ಮತ್ತು ಎಣ್ಣೆ ಪದಾರ್ಥಗಳು ಅಷ್ಟೇನು ಮಹತ್ವ ಪಡೆದಿಲ್ಲ. ಆದಾಗ್ಯೂ, ಹಸು, ಯಾಕ್, ಕುರಿಗಳ ಹಾಲಿನಿಂದ ತೆಗೆದ ಬೆಣ್ಣೆ ಹಾಗೂ ಸಾಸಿವೆ, ಎಳ್ಳು, ಕಡಲೆಬೀಜ, ಮಹೂವಾ ಬೀಜದಿಂದ ತಯಾರಿಸಿದ ಎಣ್ಣೆಯನ್ನು ಸ್ವಲ್ಪವೇ ಸ್ವಲ್ಪ ಪ್ರಮಾಣದಲ್ಲಿ ಬಳಸುತ್ತಿರುವುದು ಕಂಡುಬಂದಿದೆ(ಪಿಂಗಾಲೆ, 1973). ಜೇನನ್ನು ಸಿಹಿ ಪದಾರ್ಥವಾಗಿ ಬಳಸುವುದು

ಬಹುತೇಕ ಬುಡಕಟ್ಟುಗಳಲ್ಲಿ ಸಾಮಾನ್ಯವಾಗಿದೆ. ಬುಡಕಟ್ಟುಗಳು ಸಕ್ಕರೆಯು ತುಂಬಾ ಕಡಿಮೆ ಪ್ರಮಾಣದಲ್ಲಿ ಬಳಸುತ್ತಿರುವ ಸಿಹಿ ಪದಾರ್ಥವಾಗಿದೆ. (ರಾವ್, 1971).

ಬುಡಕಟ್ಟು ಆಹಾರ ಪದ್ಧತಿಯಲ್ಲಿ ಮಸಾಲೆ ಪದಾರ್ಥಗಳ ಬಳಕೆ ತುಂಬಾ ಕಡಿಮೆ ಎನ್ನಬಹುದು. ಮೆಣಸಿನಕಾಯಿ ಮತ್ತು ಅರಿಶಿಣ ಇವು ಸಾಮಾನ್ಯವಾಗಿ ಬಳಸುವ ಮಸಾಲೆ ಪದಾರ್ಥಗಳು. ಮೊಂಪ ಬುಡಕಟ್ಟು ಸಮುದಾಯದವರು 'ಲೆಬಿ' ಎಂಬ ಅವರೆ ಜಾತಿಯ ಸಸ್ಯದಿಂದ 'ಚರ್ವಿನ್' ಎಂಬ ಮಸಾಲೆ ಪದಾರ್ಥವನ್ನು ತಯಾರಿಸಿ ಅಡುಗೆಗಳಿಗೆ ಬಳಸುತ್ತಾರೆ(ರಾವ್, 1971). ಕರಿಬೇವಿನ ಪುಡಿ, ಶುಂಠಿಪುಡಿ ಮತ್ತು ಉಪ್ಪು ಇವು ಆಫ್ರಿಕನ್ ಬುಡಕಟ್ಟುಗಳು ಬಳಸುವ ಮಸಾಲೆ ಪದಾರ್ಥಗಳಾಗಿವೆ (ಹೂರ್ವೆಗ್ ಮತ್ತು ನೈಮೇರ್, 1980).

ಬೆಟ್ಟ ಪ್ರದೇಶಗಳಲ್ಲಿ ವಾಸಿಸುವ ಬುಡಕಟ್ಟುಗಳಿಗೆ ಕೃಷಿಯಿಂದ ಪಡೆದ ಇಳುವರಿ ವರ್ಷಪೂರ್ತಿ ಸಾಕಾಗದ ಕಾರಣ ಮತ್ತು ಆಹಾರದ ಅಭಾವದ ದಿನಗಳಲ್ಲಿ ಇವರು ಅರಣ್ಯದಲ್ಲಿ ದೊರೆಯುವ ಗೆಡ್ಡೆ-ಗೆಣಸುಗಳು, ಹಣ್ಣುಗಳನ್ನೇ ಪ್ರಮುಖ ಆಹಾರವಾಗಿ ಬಳಸಿ ಜೀವನ ಸಾಗಿಸುತ್ತಾರೆ. ಕಾಡು ಜಾತಿಯ ಅಣಬೆ, ಭತ್ತದ ಗದ್ದೆಯ ಬದುವಿನಲ್ಲಿ ಬೆಳೆದ ಕಾಡು ಜಾತಿಯ ಭತ್ತ ಮತ್ತು ಕ್ಯಾರಿಯೋಟಾ ಪಾಮ್ ಪಿತ್ ಮುಂತಾದವುಗಳನ್ನು ಆಹಾರಕ್ಕಾಗಿ ಬಳಸುತ್ತಾರೆ(ಪಿಂಗಾಲೆ, 1973). ಇದಲ್ಲದೆ, ವಾಟರ್ ಲಿಲ್ಲಿ, ಹುಣಸೆಕಾಯಿ ಮತ್ತು ಅದರ ಬೀಜ, ಪಾಮ್ ಗಿಡದ ಚಿಗುರೆಲೆಗಳು, ಕಳಲೆ, ಕ್ಯಾರಿಯೋಟಾದ ಎಲೆ, ಮೊಗ್ಗು ಮತ್ತು ಚಿಗುರುಗಳನ್ನು ಸಹ ಆಹಾರಕ್ಕಾಗಿ ಬಳಸುವುದು ಕಂಡುಬಂದಿದೆ(ಪಿಂಗಾಲೆ, 1973).

ಮಧ್ಯಪ್ರದೇಶದಲ್ಲಿ ಅಕ್ಕಿ ಹಾಗೂ ಕೆಲವು ಒರಟು ಧಾನ್ಯಗಳು ಮೂಲ ವಾಸಿಗಳ ಪ್ರಧಾನ ಆಹಾರವಾಗಿದ್ದರೂ, ಅವರು ಅನೇಕ ವನ್ಯ ಸಸ್ಯಗಳ ಎಲೆ, ಗೆಡ್ಡೆ, ಕಾಂಡ, ಬೇರನ್ನು ಬಳಸುತ್ತಿದ್ದುದು ಕಂಡುಬಂದಿದೆ. ಬಸ್ತಾರ್‌ನಲ್ಲಿ ಬರ ಎಂದೂ ಸಮಸ್ಯೆಯಾಗಿರಲಿಲ್ಲ. ಏಕೆಂದರೆ ತಮ್ಮ ಆಹಾರದ ಅರ್ಧ ಭಾಗವನ್ನು ಅರಣ್ಯದಿಂದ ಪಡೆದುಕೊಳ್ಳುತ್ತಿದ್ದುದನ್ನು ಮತ್ತು ಮಧ್ಯ ಪ್ರದೇಶದ ಮೂಲ ವಾಸಿಗಳು ತಿನ್ನುತ್ತಿದ್ದ ವನ್ಯ ಸಸ್ಯ ಪ್ರಭೇಧಗಳನ್ನು ತಿವಾರಿ(1991) ದಾಖಲಿಸಿದ್ದಾರೆ. ಅವರು ಪಟ್ಟಿ ಮಾಡಿದ 165 ಮರ, ಪೊದೆ ಮತ್ತು ಬಳ್ಳಿಗಳಲ್ಲಿ ಮೊದಲ 31 ಸಸ್ಯಗಳ ಬೀಜವನ್ನು ಹುರಿದು ತಿನ್ನಲಾಗುತ್ತಿತ್ತು. 19 ಗಿಡಗಳ ಬೇರು ಮತ್ತು ಗೆಡ್ಡೆಗಳನ್ನು ಬೇಯಿಸಿ, ಸಂಸ್ಕರಿಸಿ ತಿನ್ನಲಾಗುತ್ತಿತ್ತು. 17 ಸಸ್ಯಗಳ ರಸವನ್ನು ಹುಳಿ ಬರಿಸಿ ಇಲ್ಲವೇ ತಾಜಾ ಆಗಿ ಕುಡಿಯಲಾಗುತ್ತಿತ್ತು. 25ರ ಎಲೆಯನ್ನು, 10 ದಳಗಳನ್ನು ತರಕಾರಿಯಂತೆ ಬಳಸುತ್ತಿದ್ದರು. 63 ಸಸ್ಯಗಳ ಹಣ್ಣುಗಳನ್ನು ತಾಜಾ ಆಗಿ, ಹಣ್ಣಾಗಿಸಿ ಇಲ್ಲವೇ ಉಪ್ಪಿನಕಾಯಿಯಂತೆ ಬಳಸುತ್ತಿದ್ದರು. 5 ಪ್ರಭೇದದ ಅಂಜೂರದ ಹಣ್ಣು, ಮುಳ್ಳುಪೊದೆಯ ಹಣ್ಣು, ಎಲಚಿಹಣ್ಣು ಇವುಗಳು ಕಾಡಿನ ವನ್ಯ ಜೀವಿಗಳ ಪ್ರೀತಿ ಪಾತ್ರ ಹಣ್ಣುಗಳಾಗಿದ್ದವು. ಮಹೂವಾದ ಪುಷ್ಪಪಾತ್ರೆಯಿಂದ ಮದ್ಯವನ್ನು ಭಟ್ಟಿ ಇಳಿಸಿ ಬಳಸಲಾಗುತ್ತಿತ್ತು. ಹಿಪ್ಪು ನೇರಳೆ ಮನುಷ್ಯರಿಗೆ ಹಾಗೂ ಪಕ್ಷಿಗಳಿಗೆ ಹಣ್ಣು ಪೂರೈಸುತ್ತಿತ್ತು (ವಂದನಾ ಶಿವಾ, 2005).

ಆದಿವಾಸಿಗಳು ಹೆಚ್ಚು ಆರೋಗ್ಯವಂತರಾಗಿರಲು ಅವರು ಸೇವಿಸುವ ಆಹಾರವೇ ಮೂಲ ಕಾರಣ. ಒಂದು ಸಮೀಕ್ಷೆಯ ಪ್ರಕಾರ ಸೋಲಿಗರು, ಕಾಡುಕುರುಬರು, ಜೇನು ಕುರುಬರು, ಮಾನವ ತಿನ್ನಬಹುದಾದ 47 ವಿವಿಧ ಗೆಡ್ಡೆ-ಗೆಣಸುಗಳನ್ನು ಅವರು ಕಾಲಮಾನಕ್ಕೆ ತಕ್ಕಂತೆ ಸೇವಿಸುತ್ತಾರೆ. ಇವೆಲ್ಲ ನಿಸರ್ಗದ ಖನಿಜಗಳು. 90 ಜಾತಿಯ ಹಣ್ಣು ಹಂಪಲುಗಳನ್ನು 60 ಜಾತಿಯ ಸೊಪ್ಪು ತರಕಾರಿಗಳನ್ನು ಆಹಾರಕ್ಕೆ ಮತ್ತು ಔಷಧಿಗೆ ಅವರು ಬಳಸುತ್ತಾರೆ. ಆದಿವಾಸಿಗಳು ಆಹಾರಕ್ಕಾಗಿ

ಬಳಸುವ ಪ್ರತಿಯೊಂದು ಸಸ್ಯದ ಬಗೆಗೆ ಸಂಪೂರ್ಣ ಜ್ಞಾನ ಹೊಂದಿರುತ್ತಾರೆ. ಯಾವ ಕಾಲಕ್ಕೆ ಯಾವ ಆಹಾರ ಸೇವಿಸಬೇಕು ಎಂಬುದನ್ನು ಅರಿತುಕೊಂಡಿರುತ್ತಾರೆ. ಮಕ್ಕಳಿಂದ ಹಿಡಿದು ವಯಸ್ಸಾದವರವರೆಗೆ ಅವರವರ ವಯಸ್ಸಿಗನುಗುಣವಾಗಿ ಆಹಾರ ಸೇವಿಸುವುದು ಕಂಡುಬರುತ್ತದೆ. ಋತುಮತಿ, ಗರ್ಭಿಣಿ, ಬಾಣಂತಿಗೆ ಯಾವ ಬಗೆಯ ಆಹಾರ ನೀಡಿದರೆ ಅವರು ಆರೋಗ್ಯದಿಂದ ಇರಲು ಸಾಧ್ಯ ಎಂಬುದನ್ನು ಅನುಭವದಿಂದ ಕಂಡುಕೊಂಡಿದ್ದಾರೆ. ಕಾಲಕಾಲಕ್ಕೆ ಕಾಡಿನಲ್ಲಿ ದೊರೆಯುವ ಅಸಂಖ್ಯಾತ ಹಣ್ಣು ಹಂಪಲುಗಳು, ಸೊಪ್ಪು, ನಾರು ಬೇರು, ಗೆಡ್ಡೆ-ಗೆಣಸು, ಜೇನು, ಮಾಂಸ ಸೇವಿಸುತ್ತಾರೆ. ಅವುಗಳಲ್ಲಿರುವ ಪೋಷಕಾಂಶಗಳು, ರೋಗ ನಿರೋಧಕ ಶಕ್ತಿಯನ್ನು ನೀಡಿ ಆದಿವಾಸಿಗಳ ದೇಹವನ್ನು ಆರೋಗ್ಯದಿಂದ ಇಡುತ್ತಿದ್ದವು. ನಿಸರ್ಗದಲ್ಲಿ ಸಮತೋಲನ ಕಾಪಾಡಿಕೊಳ್ಳಲು ಆದಿವಾಸಿಗಳು ಕಾಲಕ್ಕೆ ತಕ್ಕಂತೆ ಸೇವಿಸುವ ಆಹಾರ ಮೂಲ ಕಾರಣವಾಗಿತ್ತು. ಇವರು ಕಾಲಮಾನಕ್ಕೆ ತಕ್ಕಂತೆ ಸಿಗುವ ಆಹಾರ ಪದಾರ್ಥಗಳಲ್ಲಿ ಎಂತೆಂತಹ ರೋಗಗಳನ್ನು ಗುಣಪಡಿಸಬಲ್ಲ ಔಷಧೀಯ ಗುಣಗಳಿರುತ್ತವೆ ಎಂಬುದನ್ನು ಅನುಭವದಿಂದ ಮನಗಂಡಿರುತ್ತಾರೆ (ಗಂಗಾಧರ ದೈವಜ್ಞ, 2006).

ರಾಗಿ, ಅಕ್ಕಿ ಮತ್ತು ಕೋಲಂ ಇವು ಲಂಬಾ ಬುಡಕಟ್ಟುಗಳ ದೈನಂದಿನ ಪ್ರಮುಖ ಆಹಾರಗಳಾಗಿವೆ. ರಾಗಿಯಿಂದ ತಯಾರಿಸುವ 'ಕಲಿ' ಎಂಬ ತಿನಿಸು ಇವರ ವಿಶೇಷ ಆಹಾರ ಪದಾರ್ಥವಾಗಿದೆ. ಪ್ರತಿದಿನದ ಮಧ್ಯಾಹ್ನದ ಊಟಕ್ಕೆ ಏಕದಳ ಧಾನ್ಯ ಅಥವಾ ತೃಣ ಧಾನ್ಯದೊಂದಿಗೆ ಬೇಳೆಕಾಳು ಮತ್ತು ಸೊಪ್ಪನ್ನು ಬೆರಸಿ ಆಹಾರ ತಯಾರಿಸಿ ಸೇವಿಸುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಈ ಎರಡು ಬುಡಕಟ್ಟುಗಳಲ್ಲಿ ಎಣ್ಣೆಯ ಬಳಕೆ ತೀರಾ ವಿರಳವಾಗಿದೆ. ಬೆಟ್ಟಪ್ರದೇಶದಲ್ಲಿ ವಾಸಿಸುತ್ತಿರುವುದರಿಂದ ಎಣ್ಣೆಯ ಲಭ್ಯತೆಯು ಇವರಿಗೆ ಕಡಿಮೆ (ಚಂದ್ರಶೇಖರ್ ಮತ್ತಿತರರು, 1990).

ಸಿದ್ದಿ ಸಮುದಾಯದವರ ನಿತ್ಯದ ಆಹಾರ ಅನ್ನ ಸಾರು ಮತ್ತು ಗೆಡ್ಡೆ ತರಕಾರಿಗಳು. ಇದರೊಂದಿಗೆ ಕೆಂಜಿರುವೆಗಳನ್ನು ಬಳಸಿ ಮಾಡುವ ಕೆಂಜಿರುವೆಯ ಚಟ್ನಿ ಇವರ ಇಷ್ಟವಾದ ಆಹಾರ (ಮಂಜುನಾಥ್ ನೇಕಾರ್, 2011,)

ಅಡವಿಚೆಂಚರು ಬೇಟೆಯಾಡುವುದಕ್ಕಾಗಿ ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ವಲಸೆ ಹೋಗುತ್ತಿದ್ದರು. ಇವರು ಅರಣ್ಯದಲ್ಲಿದ್ದುಕೊಂಡು ಅಲ್ಲಿಯ ಗೆಡ್ಡೆಗೆಣಸುಗಳು, ಗಿಡಮೂಲಿಕೆ, ಬೇರು, ಜೇನುತುಪ್ಪ ಮೊದಲಾದವುಗಳನ್ನು ದಿನನಿತ್ಯದ ಆಹಾರವಾಗಿ ರೂಢಿಸಿಕೊಂಡಿದ್ದಾರೆ. ಇವರು ಬಾಣಂತಿಯರಿಗೆ ಮಗು ಹುಟ್ಟಿದ ಮೊದಲ ಎರಡು ದಿನ ಕುರಿ ತಲೆಯ ಮಾಂಸವನ್ನು ವಿಶೇಷ ಆಹಾರವಾಗಿ ನೀಡುತ್ತಾರೆ (ತಿಪ್ಪೇಸ್ವಾಮಿ, 2011).

ಆಂಧ್ರಪ್ರದೇಶದಲ್ಲಿರುವ ಬುಡಕಟ್ಟುಗಳಲ್ಲೇ ಅತ್ಯಂತ ಹಿಂದುಳಿದ ಪಂಗಡವಾದ *ಚಂಚರು* ಮಾಂಸಹಾರಿಗಳಾಗಿದ್ದು, ಉಡ ಇವರ ಪ್ರಿಯವಾದ ಮಾಂಸ (ಕೃಷ್ಟಾರೆಡ್ಡಿ, 2011).

ಗೌಳಿಗರ ಆಹಾರ ಸೇವನೆಯಲ್ಲಿ ರಾಗಿ ಮತ್ತು ಅಕ್ಕಿಗೆ ವಿಶೇಷ ಪ್ರಾಧಾನ್ಯವಿದೆ. ದಿನಕ್ಕೆ ಮೂರು ಸಲ ಊಟ ಮಾಡುವ ಪದ್ಧತಿ ಹೊಂದಿದ ಇವರು ಸಾಮಾನ್ಯವಾಗಿ ಬೆಳಗಿನ ಊಟಕ್ಕೆ ರಾಗಿ ಅಂಬಲಿ ಮತ್ತು ಮೊಸರು, ಮಧ್ಯಾಹ್ನದ ಊಟಕ್ಕೆ ಅನ್ನ-ರೊಟ್ಟಿ, ಕಾಡುಮೆಣಸಿನ ಚಟ್ನಿ ಮತ್ತು ಬೆಣ್ಣೆ, ರಾತ್ರಿ ಊಟಕ್ಕೆ ಅನ್ನ, ರೊಟ್ಟಿ, ಬೆಣ್ಣೆ ಮತ್ತು ರಾಗಿ ಅಂಬಲಿಯನ್ನು ಸೇವಿಸುತ್ತಾರೆ. ವಿಶೇಷ

ಔತಣಕೂಟಗಳಲ್ಲಿ ಅನ್ನ, ರೊಟ್ಟಿ ಸಾರು ಮತ್ತು ಸಿಹಿ ಅಂಬಲಿ ಅಡುಗೆಯನ್ನು, ಹಬ್ಬ ಹರಿದಿನಗಳಲ್ಲಿ ಹಾಲಂಬಲಿ ಪಾಯಸ ತಯಾರಿಸುವುದು(ಅಕ್ಕಿಯನ್ನು ಹಾಲಿನಲ್ಲಿ ಪಾಕಗೊಳಿಸಿ ತಯಾರಿಸುವ ಒಂದು ವಿಧವಾದ ಪಾಯಸ). ಇದನ್ನು ತುಪ್ಪ ಬೆಲ್ಲದೊಂದಿಗೆ ಸೇವಿಸುತ್ತಾರೆ. ಗೌಳಿಗರ ಹಿರಿಯರ ಹಬ್ಬವು ವಿಶೇಷವಾಗಿದ್ದು. ನವರಾತ್ರಿಗೆ ಹದಿನೈದು ದಿನ ಮುನ್ನ ಹಿರಿಯರ ಹಬ್ಬವನ್ನು ಆಚರಿಸುತ್ತಾರೆ. ಅಡವಿಯಲ್ಲಿ ದೊರಕುವ ನಾನಾ ಜಾತಿಯ ತರಕಾರಿ ಸೊಪ್ಪುಗಳ ಪಲ್ಯವನ್ನು ಅಣಿಗೊಳಿಸುವದು, ನೂರೆಂಟು ಬಗೆಯ ಕಾಡು ಹೂವುಗಳನ್ನು ದೇವರಿಗೆ ಅರ್ಪಿಸಿವುದು ಈ ಹಬ್ಬದ ವಿಶೇಷ (ಅಂಬಳಿಕೆ ಹಿರಿಯಣ್ಣ, 2011).

ಆದಿವಾಸಿ ಬುಡಕಟ್ಟಾದ ಕುಡುಬಿ ಸಮುದಾಯದವರು ಸಸ್ಯಾಹಾರ ಮತ್ತು ಮಂಸಾಹಾರ ಎರಡನ್ನೂ ಸೇವಿಸುವವರಾಗಿದ್ದಾರೆ. ಕಾಡಿನಲ್ಲೇ ವಾಸಿಸುವ ಇವರು ಅಲ್ಲಿ ಸಿಗುವ ಪ್ರಾಣಿ, ಪಕ್ಷಿಗಳನ್ನು ಆಹಾರವಾಗಿ ಬಳಸುವುದು ಕಂಡುಬರುತ್ತದೆ. ಆದರೆ, ಸಾಕು ಪ್ರಾಣಿಗಳಾದ ಕುರಿ, ಆಡು, ದನ, ಊರಹಂದಿ ಊರಕೋಳಿ, ಮಂಗಗಳ ಮಾಂಸಗಳನ್ನು ಇವರು ಸೇವಿಸುವುದಿಲ್ಲ ಜತೆಗೆ ನವಿಲಿನ ಮಾಂಸವನ್ನು ಸಹ ಸೇವಿಸುವುದನ್ನು ನಿಷೇಧಿಸಿದ್ದಾರೆ. ಕಾಡು ಹಂದಿಯ ಮಾಂಸ ಇವರಿಗೆ ಪ್ರೀಯವಾದ ಆಹಾರ. ಇವರು ತಮ್ಮ ಹೊಲ ಗದ್ದೆಗಳಲ್ಲಿ ಹಾಗೂ ಮನೆಯ ಸುತ್ತಮುತ್ತ ಬೆಳೆಯುವ ತರಕಾರಿಗಳಾದ ಮೂಲಂಗಿ, ಬದನೆ, ಇರುಳ್ಳಿ, ಟೊಮ್ಯಾಟೊ, ಗೆಣಸು, ಮೆಣಸಿನಕಾಯಿ ಇತರ ತರಕಾರಿಗಳನ್ನು ಅಡುಗೆಯಲ್ಲಿ ಬಳಸುತ್ತಾರೆ. ಹೋಳಿ, ದಸರಾ, ದೀಪಾವಳಿ, ಶಿವರಾತ್ರಿ, ಯುಗಾದಿ, ನಾಗರ ಪಂಚಮಿ, ಚೌತಿ ಹಬ್ಬ ಇವರು ಆಚರಿಸುವ ಹಬ್ಬಗಳು (ಪುಟ್ಟಸ್ವಾಮಿ, 2011).

ಕೊರಗರು ಮಾಂಸಾಹಾರಿಗಳು. ಸವರ್ಣೀಯರ ಎಂಜಲೆಲೆ ತಿನ್ನುವುದು ಇವರ ಒಂದು ಸಂಪ್ರದಾಯ. ಆಮೆ ಬೇಟೆಯಾಡುವುದು ಹಾಗೂ ಬಿಳಿಆಮೆ ಮಾಂಸ ಇವರ ತುಂಬಾ ಇಷ್ಟವಾದ ಆಹಾರವಾಗಿದೆ. ಬಿಳಿ ಆಮೆ ಮಾಂಸ ಕ್ಷಯ ರೋಗಕ್ಕೆ ಔಷಧಿ ಎಂಬ ನಂಬಿಕೆ ಇವರಲ್ಲಿದೆ. (ವಾಸುದೇವಮೂರ್ತಿ, 2011).

ನವಿಲು, ಕೋಳಿ, ಹಕ್ಕಿಗಳು ಮೊಟ್ಟೆ ಜಿಂಕೆ, ಹಂದಿ, ಮೀನು ಹಾಗೂ ಕೆಲವು ಹಣ್ಣುಗಳ ಸಿಪ್ಪೆಗಳು ಆಂದ್ರ ಮತ್ತು ಕರ್ನಾಟಕ ರಾಜ್ಯಗಳಲ್ಲಿ ಕಂಡುಬರುವ ಯಾನಾದಿ ಬುಡಕಟ್ಟು ಜನರ ಪ್ರಮುಖ ಆಹಾರಗಳು. ಮಾಂಸ ಇವರ ಪ್ರಮುಖ ಆಹಾರವಾಗಿದ್ದು, ಮಾಂಸವನ್ನು ಸಲಾಕೆಗಳಿಗೆ ಸಿಕ್ಕಿಸಿ ಹಾಗೆ ತಿನ್ನುವುದುಂಟು. ಯುಗಾದಿ, ಮದುವೆ, ನಾಮಕರಣದ ದಿನಗಳು ಇತ್ಯಾದಿ ಸಮಯಗಳಲ್ಲಿ ಹೋಳಿಗೆ, ದೋಸೆ, ಅನ್ನ, ಸಾರು, ಪಾಯಸಗಳನ್ನು ವಿಶೇಷ ಭಕ್ಷಗಳಾಗಿ ಮಾಡುವರು (ಪೂರ್ಣಿಮಾ, 2011).

ಪ್ರಕೃತಿಯ ಮಕ್ಕಳಾಗಿ ಕಾಡಿನಲ್ಲಿ ಸಂಚರಿಸುವ ಹಸಲರು ಮೊಲ, ಕಬ್ಬೆಕ್ಕು ಬರ್ಕಾ, ಮುಳ್ಳುಹಂದಿ, ಮುಂಗುಸಿ ಕಾಡುಕೋಳಿ ಇತ್ಯಾದಿಗಳನ್ನು ತಿನ್ನುತ್ತಾರೆ. ಎಲ್ಲ ತರಹದ ಮೀನುಗಳು ಇವರಿಗೆ ಪ್ರೀಯವಾದ ಆಹಾರ. ಇದಲ್ಲದೆ, ಕಾಡುಹಕ್ಕಿಗಳನ್ನು ತಿನ್ನುತ್ತಾರೆ. ಇವರು ದಿನನಿತ್ಯದ ಆಹಾರಕ್ಕಾಗಿ ಮುಖ್ಯವಾಗಿ ಅಕ್ಕಿ, ರಾಗಿ, ಜೋಳಗಳನ್ನು ಉಪಯೋಗಿಸುವರು. ಚಿಗಳಿ ಸಾರು ಇವರ ವಿಶೇಷ ಆಹಾರ. ಮರದ ಮೇಲೆ ಗೂಡು ಕಟ್ಟಿದ ಕೆಂಜಿಗಗಳಿಗೆ ಉಪ್ಪು ಹಾಕಿ ಅವನ್ನು ಗೂಡಿನಿಂದ ಅಲ್ಲಾಡಿಸಿ ಮೊರಕ್ಕೆ ತುಂಬಿ ಅನಂತರ ಉಪ್ಪನ್ನು ನೀರಿಗೆ ಹಾಕಿ ತೇಲುವ ಇರುವೆಗಳನ್ನು ಆರಿಸಿ ಖಾರ ಹಾಕಿ ಸಾರು ಮಾಡುತ್ತಾರೆ. ಯುಗಾದಿ, ನಾಗರ ಪಂಚಮಿ, ಗೌರಿ ಹಬ್ಬ, ಭೂಮಿ ಹುಣ್ಣಿಮೆ, ಸಂಕ್ರಾಂತಿ ದೀಪಾವಳಿ ಹಬ್ಬಗಳನ್ನು ಇವರು ಆಚರಿಸುತ್ತಾರೆ (ಭಟ್ಟ, 2011).

ಹಾಲಕ್ಕಿ ಒಕ್ಕಲಿಗರ ಪ್ರಧಾನ ಕಸಬು ವ್ಯವಸಾಯ ಮತ್ತು ಹೈನುಗಾರಿಕೆ. ಇವರು ಮಾಂಸಹಾರಿಗಳು. ಅಕ್ಕಿ, ಹಾಲು, ಮೀನು ಇವರ ಮುಖ್ಯ ಆಹಾರ. ಊಟದಲ್ಲಿ ಖಾರದ ಬಳಕೆ ಹೆಚ್ಚು. ಮದ್ಯಪಾನ ಮಾಡುವುದಿಲ್ಲ. ಯುಗಾದಿ, ಸಂಕ್ರಾಂತಿ ಹೋಳಿ ಹಬ್ಬ ಇವರು ಆಚರಿಸುವ ಹಬ್ಬಗಳಾಗಿವೆ (ಭಟ್ಟ, 2011). ಅಡಿಯನ್ ಬುಡಕಟ್ಟು ಜನರ ಮುಖ್ಯ ಆಹಾರ ಅಕ್ಕಿ ಮತ್ತು ಸೊಪ್ಪಿನ ಪದಾರ್ಥಗಳು. ಮಳೆಗಾಲದಲ್ಲಿ ಕಳಲೆ(ಬಿದಿರ ಮೊಳಕೆ)ಯನ್ನು ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಹೊಳೆ ಮೀನುಗಳನ್ನು, ಏಡಿಗಳನ್ನು ವಿಶೇಷ ದಿನಗಳಲ್ಲಿ ಬಳಕೆ ಮಾಡುತ್ತಾರೆ. ಬೇರೆ ಬೇರೆ ಜಾತಿಯ ಕಾಡು ಗೆಣಸುಗಳನ್ನು ಬಳಸುತ್ತಾರೆ(ಮಿನಿ, 2011).

ಗೆಡ್ಡೆ ಗೆಣಸುಗಳು ಬುಡಕಟ್ಟು ಜನಾಂಗದ ಅತೀ ಮುಖ್ಯ ಆಹಾರವಾಗಿ ಬಳಕೆಯಾಗುತ್ತಿವೆ. ಕೇರಳದ ಕೃಷಿ ಇತಿಹಾಸದಲ್ಲಂತೂ ಈ ಗೆಡ್ಡೆಗೆಣಸುಗಳು ಮುಖ್ಯ ಪಾತ್ರವಹಿಸಿವೆ. ಈ ಕುರಿತ ಹಲವಾರು ಬಗೆಯ ಗೆಡ್ಡೆಗೆಣಸುಗಳು ಕಡಿಮೆ ತೇವಾಂಶದ ಮಣ್ಣಿನಲ್ಲೂ ಅತೀ ಕಡಿಮೆ ನೀರು ಲಭ್ಯತೆ ಇರುವ ಪ್ರದೇಶಗಳಲ್ಲೂ ಬೆಳೆಯುವಂತಹ ಸಾಮರ್ಥ್ಯವನ್ನು ಗಮನಿಸಿ ಹಲವು ವಿಧದ ಗೆಣಸುಗಳನ್ನು ಪರಿಚಯಿಸಲಾಗಿದೆ. ಮರಗೆಣಸು, ಯಾಮ್ ಮತ್ತು ಆಲೂಗೆಡ್ಡೆಗಳು ಮುಖ್ಯ ಆಹಾರವಾಗಿರುವುದನ್ನು ದಾಖಲಿಸಿದ್ದಾರೆ (ಸಿಟಿಸಿಆರ್ಐ, 2009).

ಚಂದ್ರಶೇಖರ್ ಮತ್ತು ಇತರರು (1995) ಕೈಗೊಂಡ ಅಧ್ಯಯನದಲ್ಲಿ ಬಿಹಾರದ ಓರಿಯನ್ ಬುಡಕಟ್ಟಿನವರ ಆಹಾರ ಸೇವನೆ ಪದ್ಧತಿಯ ಕುರಿತು ವರದಿ ಮಾಡಿದ್ದಾರೆ. ಸಾಮಾನ್ಯ ಆಹಾರ ಕ್ರಮಗಳಂತೆಯೇ ವೈವಿಧ್ಯತೆಯ ಆಹಾರವು ಇವರದೆಂದು ಅಭಿಪ್ರಾಯ ಪಟ್ಟಿದ್ದಾರೆ. ಮಧ್ಯಪ್ರದೇಶದ ಬೈಗಾ ಬುಡಕಟ್ಟುಗಳ ದೈನಂದಿನ ಆಹಾರವು ಅಷ್ಟೇನು ವೈವಿಧ್ಯಮಯವಾಗಿಲ್ಲ. ಇವರ ಆಹಾರದಲ್ಲಿ ಮುಸುಕಿನ ಜೋಳ, ಬರಗು ಮತ್ತು ಅಕ್ಕಿ ಇವುಗಳು ಪ್ರತಿನಿತ್ಯದ ಆಹಾರಕ್ಕಾಗಿ ಬಳಸುವ ಪ್ರಮುಖ ಬೆಳೆಗಳಾಗಿವೆ. ಇವರಿಗೆ ಅರಣ್ಯವು ಕೌಟುಂಬಿಕ ಅಗತ್ಯಗಳನ್ನು ಪೂರೈಸುವ ಕಲ್ಪವೃಕ್ಷ (ಚಕ್ಮಾ, 2009).

ರಾಜ್ಯಲಕ್ಷ್ಮಿ (1999)ರವರು ಆಂಧ್ರ ಪ್ರದೇಶದ ಜಟಾಪು, ಸವಾರಾ ಹಾಗೂ ಗಡಬಾ ಬುಡಕಟ್ಟುಗಳ ಕುರಿತು ಅಧ್ಯಯನ ನಡೆಸಿ ವರದಿ ಮಾಡಿದ್ದು, ಇವರಲ್ಲಿ ಶೇಕಡ 55ರಷ್ಟು ಕುಟುಂಬಗಳು ಕಿರುಧಾನ್ಯಗಳ ಮಿಶ್ರಣವನ್ನು ಬಳಸುವುದು, ಶೇಕಡ 14 ರಷ್ಟು ಬುಡಕಟ್ಟು ಕುಟುಂಬಗಳು ಅಕ್ಕಿ ಮಾತ್ರ ಬಳಸುವುದು ಕಂಡುಬಂದಿದೆ. ಬುಡಕಟ್ಟು ಕುಟುಂಬಗಳು ಆರೋಗ್ಯಕ್ಕೆ ಅಕ್ಕಿಗಿಂತ ಕಿರುಧಾನ್ಯಗಳು ಹೆಚ್ಚು ಉತ್ತಮವೆಂದು ಭಾವಿಸಿದ್ದಾಗಿ ಸಹ ವರದಿ ಮಾಡಿರುತ್ತಾರೆ.

ಮಹಾರಾಷ್ಟ್ರದ ಮರಿಯಾ ಗೋಂಡ ಬುಡಕಟ್ಟು ಸಮುದಾಯದವರ ಪೌಷ್ಟಿಕ ಸ್ಥಿತಿ ಕುರಿತು ಹನುಮಂತರಾವ್ ಮತ್ತಿತರರು 1992ರಲ್ಲಿ ಕೈಗೊಂಡ ಅಧ್ಯಯನದ ವರದಿಯಲ್ಲಿ ತಿಳಿಸಿರುವಂತೆ, ಇವರು ಸೇವಿಸುವ ಪ್ರಮುಖ ಆಹಾರವಾದ ಏಕದಳಧಾನ್ಯಗಳ ಪ್ರಮಾಣವು ICMR ನಿಗಧಿಪಡಿಸಿದ ಪ್ರಮಾಣಕ್ಕಿಂತ ಅಧಿಕವಾಗಿದೆ. ದೇಹದ ಬೆಳವಣಿಗೆ ಮತ್ತು ರಕ್ಷಣೆಗೆ ಬೇಕಾದ ಆಹಾರಗಳಾದ ಬೇಳೆಕಾಳುಗಳು (9 ಗ್ರಾಂ), ಹಾಲು ಮತ್ತು ಹಾಲಿನ ಪದಾರ್ಥಗಳ ಸೇವನೆ ಅತೀ ಕಡಿಮೆ ಇರುವುದು ಇವರ ಅಧ್ಯಯನದಿಂದ ತಿಳಿದುಬಂದಿದೆ.

ಅಗ್ರಹಾರ್ ಮತ್ತು ಪಾಲ್ (2005)ರವರು ಕಾಸಿ, ಜೈಂಟಾಸ್ ಮತ್ತು ಗಕೋಸ್ ಬುಡಕಟ್ಟು ಕುಟುಂಬಗಳು ಹೆಚ್ಚಾಗಿ ವಾಸಿಸುವ ಮೇಘಾಲಯದ ರೈ-ಭೋಯಿ ಜಿಲ್ಲೆಯ 13 ಗ್ರಾಮಗಳಲ್ಲಿ ಬುಡಕಟ್ಟು ಜನರ ಆಹಾರ ಸೇವನೆ ಪದ್ದತಿ ಕುರಿತಂತೆ ಅಧ್ಯಯನ ನಡೆಸಿರುತ್ತಾರೆ. ಕೃಷಿ ಮತ್ತು ಹಸು

ಸಾಕಾಣಿಕೆ ಇವರ ಪ್ರಮುಖ ಆದಾಯ ನೀಡುವ ಉದ್ಯೋಗಗಳಾಗಿವೆ. ಪ್ರತಿಯೊಂದು ಬುಡಕಟ್ಟಿನವರ ಆಹಾರ ಪದ್ಧತಿಯು ಭಿನ್ನವಾಗಿದ್ದು ಪ್ರಮುಖವಾಗಿ ನಿಸರ್ಗದತ್ತವಾಗಿ ದೊರಕುವ ಆಹಾರಗಳ ಮೇಲೆ ಅವಲಂಬಿತವಾಗಿದೆ. ಭತ್ತ ಆ ಭಾಗದ ಪ್ರಮುಖ ಬೆಳೆಯಾದ್ದರಿಂದ ಇವರ ಆಹಾರದ ಪ್ರಮುಖ ಭಾಗವನ್ನು ಅಕ್ಕಿಯನ್ನಾಧರಿಸಿದೆ. ಆದರೆ ಇವರು ಪ್ರತಿದಿನ ಸೇವಿಸುವ ಏಕದಳಧಾನ್ಯಗಳ ಪ್ರಮಾಣವು ICMR ನಿದಧಿಪಡಿಸಿದ ಪ್ರಮಾಣಕ್ಕಿಂತ ಕಡಿಮೆಯೇ ಇದೆ. ದ್ವಿದಳ ಧಾನ್ಯಗಳನ್ನು ಹೆಚ್ಚಾಗಿ ಬೆಳೆಯದ ಕಾರಣ ಇವರ ಆಹಾರ ಪದ್ಧತಿಯಲ್ಲಿ ಬೇಳೆಕಾಳುಗಳು ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದಿಲ್ಲ. ಹಸಿರು ಸೊಪ್ಪು ತರಕಾರಿಗಳ ಸೇವನೆ ಪ್ರಮಾಣವು ಸಹ ಕಡಿಮೆ ಇದ್ದು ಅದೂ ಸಹ ಮಳೆಗಾಲದಲ್ಲಿ ಅರಣ್ಯದಲ್ಲಿ ದೊರಕುವ ಸೊಪ್ಪುಗಳ ಮೇಲೆ ಅವಲಂಬಿತವಾಗಿದೆ. ಚಳಿಗಾಲದಲ್ಲಿ ಮನೆಯ ಹಿತ್ತಲಲ್ಲಿ ಅಥವಾ ಮನೆಯ ಮುಂದೆ ತಾವೇ ಬೆಳೆಸಿದಂತಹ ಸಾಸಿವೆ ಸೊಪ್ಪು, ಮೆಂತ್ಯ ಸೊಪ್ಪು ಮತ್ತು ಕೊತ್ತಂಬರಿ ಸೊಪ್ಪುಗಳನ್ನು ಬಳಸುತ್ತಾರೆ.

ರಾವ್ ಮತ್ತಿತರರು (2006), ಭಾರತದ ಒಂಬತ್ತು ರಾಜ್ಯಗಳ ಬುಡಕಟ್ಟು ಸಮುದಾಯದಲ್ಲಿ ಆಹಾರ ಮತ್ತು ಪೌಷ್ಟಿಕತೆಯನ್ನು ಅಧ್ಯಯನ ಮಾಡಿದ್ದಾರೆ. ಅದರಂತೆ ಬಹುಪಾಲು ಆಹಾರವು ಭಾರತೀಯ ವೈದ್ಯಕೀಯ ಪರಿಷತ್ತಿನ (ICMR) ಶಿಫಾರಸ್ಸಿಗಿಂತಲೂ ಕಡಿಮೆ ಇರುವುದು ಕಂಡುಬಂದಿದೆ. ಇವರ ತಂಡವು ಬುಡಕಟ್ಟು ಸಮುದಾಯಗಳು ವಾಸಿಸುತ್ತಿರುವ ಎಲ್ಲ ಪ್ರಮುಖ ಒಂಭತ್ತು ರಾಜ್ಯಗಳಲ್ಲಿ ಸರ್ವೆಕ್ಷಣ ಮಾಡಿ 4775 ಕುಟುಂಬಗಳ ಸಂದರ್ಶನಗಳನ್ನಾಧರಿಸಿ ವರದಿ ಮಾಡಿದ್ದಾರೆ. ಈ ಅಧ್ಯಯನವು ಒಳಗೊಂಡ ಬುಡಕಟ್ಟು ಸಮುದಾಯಗಳ 10–20 ವಯಸ್ಸಿನ ಮಕ್ಕಳು ಸೇವಿಸುವ ಆಹಾರ ಪದಾರ್ಥಗಳ ವಿವರಗಳನ್ನು ಕೆಳಗಿನ ಕೋಷ್ಟಕ 2.2ರಲ್ಲಿ ಕೊಟ್ಟಿದೆ.

ಏಕದಳ ಧಾನ್ಯಗಳು, ತೃಣಧಾನ್ಯಗಳು ಹಾಗೂ ಹಸಿರುಸೊಪ್ಪುಗಳು ಮರಿಯಾ ಮತ್ತು ಗೊಂಡ ಬುಡಕಟ್ಟು ಸಮುದಾಯದವರ ದಿನನಿತ್ಯದ ಪ್ರಮುಖ ಆಹಾರಗಳಾಗಿವೆ. ಇವರು ಸೇವಿಸುವ ವಿವಿಧ ಬಗೆಯ ಆಹಾರಗಳು ಮತ್ತು ಸೇವಿಸುವ ಪ್ರಮಾಣವನ್ನು ವಿಶ್ಲೇಷಿಸಿದಾಗ ಇವರ ಅಹಾರದಲ್ಲಿ ಕ್ಯಾಲ್ಸಿಯಂ, 'ಎ' ಜೀವಸತ್ವ ಮತ್ತು 'ಸಿ' ಜೀವಸತ್ವವನ್ನು ಬಿಟ್ಟು ಮಿಕ್ಕೆಲ್ಲ ಪೋಷಕಾಂಶಗಳು ಭಾರತೀಯರಿಗೆ ನಿಗಧಿಪಡಿಸಿದ ಪ್ರಮಾಣಕ್ಕಿಂತ ಅಧಿಕವಾಗಿರುವುದು ಹನುಮಂತ ಮತ್ತು ಇತರರು 1992ರಲ್ಲಿ ಕೈಗೊಂಡ ಅಧ್ಯಯನದಿಂದ ತಿಳಿದುಬಂದಿದೆ.

ಅರಣ್ಯವು ಬುಡಕಟ್ಟು ಸಮುದಾಯಗಳಿಗೆ ಆದಾಯ ಒದಗಿಸುವ ಆಹಾರ ಒದಗಿಸುವ ಮೂಲಕ ಬುಡಕಟ್ಟು ಜನರ ಜೀವನಕ್ಕೆ ಪ್ರಮುಖ ಆಧಾರವಾಗಿದೆ. ಅರಣ್ಯದಿಂದ ಇವರು ವೈವಿಧ್ಯಮಯ ಆಹಾರಗಳಾದ ಗೆಡ್ಡೆ ಗೆಣಸುಗಳು, ಸೊಪ್ಪುಗಳು, ಹಣ್ಣುಗಳು, ಕಾಡುಪ್ರಾಣಿಗಳನ್ನು ಆಹಾರಕ್ಕಾಗಿ ಹಾಗೂ ಅರಣ್ಯಾಧಾರಿತ ಉಪಉತ್ಪನ್ನಗಳನ್ನು ಆದಾಯದ ಮೂಲವಾಗಿ ಬಳಸುತ್ತಿದ್ದಾರೆ(ಮೋಹನ್, 1992).

**ಕೋಷ್ಟಕ 2.2. ಬುಡಕಟ್ಟು ಸಮುದಾಯದ 10–20 ವಯಸ್ಸಿನ ಮಕ್ಕಳು ಸೇವಿಸುವ ಆಹಾರ ಪದಾರ್ಥಗಳ ಪ್ರಮಾಣ**

| ಕ್ರ ಸಂ. | ಆಹಾರ ಪದಾರ್ಥಗಳು | ಹುಡುಗರು | ಹುಡುಗಿಯರು |
|---|---|---|---|
| 1 | ಆಹಾರಧಾನ್ಯಗಳು | 350–450 | 300–400 |
| 2 | ಬೇಳೆಕಾಳುಗಳು | 20–30 | 20–30 |
| 3 | ಹಸಿರುಸೊಪ್ಪು ತರಕಾರಿಗಳು | 20–30 | 20–30 |
| 4 | ಇತರೆ ತರಕಾರಿಗಳು | 30–60 | 30–40 |
| 5 | ಗೆಡ್ಡೆಗಣಸುಗಳು | 25–50 | 20–40 |
| **6** | ಎಣ್ಣೆ ಕಾಳುಗಳು | 5–20 | 5–20 |
| **7** | ಹಣ್ಣುಗಳು | 10–25 | 10–30 |
| **8** | ಹಾಲು | 10–70 | 10–15 |
| **9** | ಎಣ್ಣೆ | 5–10 | 5–10 |
| **10** | ಸಕ್ಕರೆ/ಬೆಲ್ಲ | 10–20 | 10–20 |

(ರಾವ್ ಮತ್ತಿತರರು, 2006)

ಕುಪ್ಪುತಾಯಿ ಮತ್ತು ಮಲ್ಲಿಕಾರವರು 1993ರಲ್ಲಿ ಕೊಂಡ, ಗಡಬ, ಮತ್ತು ಪೋರ್ಜ ಬುಡಕಟ್ಟು ಸಮುದಾಯಗಳ ಆಹಾರ ಪದ್ಧತಿಯ ಕುರಿತು ಅಧ್ಯಯನ ನಡೆಸಿರುತ್ತಾರೆ. ಇವರ ಅಧ್ಯಯನದ ವಿಶ್ಲೇಷಣೆಯ ವಿವರಣೆಯಂತೆ ಇವರು ಆಹಾರದ ಗುಣಮಟ್ಟಕ್ಕಿಂತ ಪ್ರಮಾಣಕ್ಕೆ ಹೆಚ್ಚು ಮಹತ್ವವಿರುವುದು ಕಂಡುಬಂದಿದೆ. ಇವರ ಆಹಾರ ಪದ್ಧತಿಯು ವೈವಿಧ್ಯಮಯವಾಗಿರದೇ, ಒಂದೇ ತೆರನಾಗಿರುವುದು ತಿಳಿಯುತ್ತದೆ. ಇವರ ಪ್ರತಿನಿತ್ಯದ ಆಹಾರದಲ್ಲಿ ಅನ್ನ, ಬೇಳೆ ಮತ್ತು ಕೆಲವು ತರಕಾರಿಗಳನ್ನೊಳಗೊಂಡಿದ್ದು ಹಬ್ಬ ಹರಿದಿನಗಳಲ್ಲಿ ಮಾತ್ರ ಮಾಂಸಾಹಾರ ಸೇವಿಸುವುದು ಕಂಡುಬಂದಿದೆ.

ಸುಗಲ್ಲಿ ಬುಡಕಟ್ಟು ಸಮುದಾಯದವರು ಸೇವಿಸುವ ಆಹಾರದಿಂದ ದೊರಕುವ ಪ್ರೋಟೀನ್ ಮತ್ತು ಶಕ್ತಿಯ ಪ್ರಮಾಣವು ಭಾರತೀಯರಿಗೆ ನಿಗಧಿಪಡಿಸಿದ ಪ್ರಮಾಣಕ್ಕಿಂತ 59ಪ್ರತಿಶತ ಹಾಗೂ 53ಪ್ರತಿಶತದಷ್ಟು ಕಡಿಮೆ ಇರುವುದು ರೆಡ್ಡಿ ಮತ್ತು ಪಪಾರಾವ್(1995) ರವರ ಸುಗಲ್ಲಿ ಬುಡಕಟ್ಟು ಸಮುದಾಯದವರ ಆಹಾರ ಪದ್ಧತಿ ಕುರಿತ ಅಧ್ಯಯನದಿಂದ ತಿಳಿದುಬಂದಿದೆ.

ಉತ್ತರ ಪ್ರದೇಶದ ಝೂನ್ಸರಿ ಬುಡಕಟ್ಟು ಸಮುದಾಯರಿಗೆ ಕೃಷಿಯಿಂದ ಪಡೆಯುವ ಇಳುವರಿಯು ವರ್ಷ ಪೂರ್ತಿ ಸಾಕಾಗದ ಕಾರಣ ಆಹಾರಕ್ಕಾಗಿ ಅರಣ್ಯದ ಮೇಲೆಯೇ ಹೆಚ್ಚು ಅವಲಂಬಿತರಾಗಿರುವುದಾಗಿ ಸಿಂಘ್ ಮತ್ತು ಕಾವಾತ್ರಾ (1998) ಅಭಿಪ್ರಾಯಪಟ್ಟಿದ್ದಾರೆ.

ಆಂಧ್ರ ಪ್ರದೇಶದ ಗೋದಾವರಿ ಜಿಲ್ಲೆಯಲ್ಲಿ ವಾಸಿಸುವ ಬುಡಕಟ್ಟು ಸಮುದಾಯಗಳು ಕೆಲವೊಂದು ಋತುಮಾನದಲ್ಲಿ ಸಬ್ಬಕ್ಕಿ ಮತ್ತು ಕ್ಯಾರಿಯೋಟಾ ಪಾಮ್ ಅನ್ನು ಪ್ರಮುಖ ಮತ್ತು ವಿಶಿಷ್ಟ ಆಹಾರಗಳಾಗಿ ಬಳಸುತ್ತಿರುವುದನ್ನು ಅನಿಲಾ ಮತ್ತು ರಾಜಲಕ್ಷ್ಮಿಯವರ (2000) ಅಧ್ಯಯನದ ವರದಿ ಮಂಡಿಸಿದೆ.

ಗೆಡ್ಡೆ ಗೆಣಸುಗಳಾದ ಆಲೂಗೆಡ್ಡೆ, ಶಾಮಗೆಡ್ಡೆ, ಕೊಲಕೇಸಿಯಾ ಟ್ಯಾಪಿಯೋಕಾ ಮತ್ತು ಸಿಹಿಗೆಣಸುಗಳನ್ನು ಪ್ರಮುಖ ಆಹಾರವಾಗಿ ಹಾಗೂ ಅರಣ್ಯದಲ್ಲಿ ದೊರಕುವ ಸೊಪ್ಪುಗಳನ್ನು ದಿನನಿತ್ಯದ ಆಹಾರದ ಭಾಗವಾಗಿ ಬಳಸುತ್ತಾರೆ. ಹುದುಗುಬರಿಸಿದ ಸೋಯಾ ಅವರೆ ಮತ್ತು ಒಣ ಮೀನುಗಳನ್ನು ಅದೂ ಹಣದ ಅನುಕೂಲವಿದ್ದಾಗ ಮಾತ್ರ ವಾರಕ್ಕೆ ಒಂದು ಬಾರಿಯಂತೆ ಉಮ್ರೊಇಲಬನ್ಸಾರೋ ಮತ್ತು ಉಮರಿ ಬಿತಹಾ ಬುಡಕಟ್ಟಿನವರು ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ (ಅಗ್ರಹಾರ ಮತ್ತಿತರರು, 2001).

**2.4.2 ಬುಡಕಟ್ಟುಗಳ ವಿಶೇಷ ಸಂದರ್ಭದ ಆಹಾರ ಪದಾರ್ಥಗಳು**

ಮೇಘಾಲಯದ ಬಾರೇ ಬುಡಕಟ್ಟು ಜನರು ವಾಂತಿಭೇದಿ, ಜ್ವರ ಮತ್ತು ಚಿಕನ್ ಫಾಕ್ಸ್ ತೊಂದರೆಯಿಂದ ಬಳಲುವವರಿಗೆ ಸಪ್ಪೆ ಆಹಾರವನ್ನು ನೀಡುವ ಪದ್ಧತಿಯನ್ನು ಅನುಸರಿಸುತ್ತಿದ್ದಾರೆ. ಇವರು ಅಜೀರ್ಣ, ಹೊಟ್ಟೆ ಉಬ್ಬರ, ಹೊಟ್ಟೆ ನೋವು ಇದ್ದಾಗ ಹಸಿರು ಸೊಪ್ಪು, ಹಾಲು ಮತ್ತು ಅಧಿಕ ಮಸಾಲೆಯುಕ್ತ ಆಹಾರಗಳನ್ನು ಸೇವಿಸಲು ಕೊಡುವುದಿಲ್ಲ. ಹಾಗೂ ಹೃದಯ ಸಂಬಂಧಿ ಕಾಯಿಲೆಯಿಂದ ಬಳಲುವವರಿಗೆ ಬೆಳ್ಳುಳ್ಳಿಯನ್ನು ಔಷಧಿಯಾಗಿ ಬಳಸುವುದು ಇವರಲ್ಲಿ ರೂಢಿಯಲ್ಲಿದೆ ಮತ್ತು ಇಂತವರಿಗೆ ಉಪ್ಪು, ಎಣ್ಣೆ, ಬೆಣ್ಣೆ ಮತ್ತು ಮಾಂಸಾಹಾರ ಸೇವನೆಯನ್ನು ಮಿತಗೊಳಿಸುತ್ತಾರೆ ಎಂದು ಈಶ್ವರನ್ ಮತ್ತು ಗೊಸ್ವಾನಿ(1989)ವರದಿ ಮಾಡಿದ್ದಾರೆ.

ನುಗ್ಗೆಸೊಪ್ಪು, ಸಾಸಿವೆ ಮತ್ತು ಬೆಲ್ಲವನ್ನು ಬಾಣಂತಿಯರಿಗೆ ವಿಶೇಷ ಆಹಾರವಾಗಿ ನೀಡುವ ಪದ್ದತಿಯನ್ನು ಕಾಚೇವಾಡಿ ಬೆಟ್ಟ ಪ್ರದೇಶದಲ್ಲಿ ವಾಸಿಸುವ ಲಂಬಾ ಬುಡಕಟ್ಟಿನಲ್ಲಿ ಕಾಣಬಹುದು. ಹಸಿರು ಸೊಪ್ಪುಗಳ ಸೇವನೆಯಿಂದ ಬಾಣಂತಿಯರಲ್ಲಿ ಹಾಲಿನ ಉತ್ಪಾದನೆ ಹೆಚ್ಚಾಗುತ್ತದೆಂದು ನಂಬಿದ ಅಪ್ಪಪಾಡಿ ಬೆಟ್ಟ ಪ್ರದೇಶದಲ್ಲಿ ವಾಸಿಸುತ್ತಿರುವ ಇರುಳರು ಬಾಣಂತಿಯಿರಿಗೆ ಸೊಪ್ಪುಗಳನ್ನು ಹೆಚ್ಚಾಗಿ ಸೇವಿಸಲು ಕೊಡುವ ಪದ್ದತಿಯನ್ನು ರೂಢಿಸಿಕೊಂಡಿದ್ದಾರೆ (ಚಂದ್ರಶೇಖರ್ ಮತ್ತಿತರರು, 1990). ಹಾಗೆಯೇ ನೀಲಗಿರಿ ಬೆಟ್ಟ ಪ್ರದೇಶದಲ್ಲಿ ವಾಸಿಸುವ ಕೋಟಾ ಬುಡಕಟ್ಟು ಸಮುದಾಯದಲ್ಲಿ ಬಾಣಂತಿಯರಿಗೆ *'ಪುಲಿಚಕೀರು'* ಸೊಪ್ಪಿನ ರಸವನ್ನು ಪ್ರತಿದಿನ ಸೇವಿಸಲು ಕೊಡುವ ಪದ್ದತಿಯು ರೂಢಿಯಲ್ಲಿದೆ. ಈ ಸೊಪ್ಪು ಬಾಣಂತಿಯರಲ್ಲಿ ಅಧಿಕ ಹಾಲಿನ ಉತ್ಪಾದನೆಗೆ ಕಾರಣ ಎಂದು

ಇವರು ನಂಬಿದ್ದಾರೆ. ದಿನಂಪ್ರತಿ ಪ್ರಮುಖ ಆಹಾರವಾಗಿ ಬಳಸುವ ಗಂಜಿಯನ್ನು ಬಾಣಂತಿಯರು ಸೇವಿಸಿದರೆ ಹೊಟ್ಟನೋವು ಕಾಣಿಸಿಕೊಳ್ಳತ್ತದೆಂದು ತಿಳಿದು ಅವರಿಗಾಗಿ ವಿಶೇಷವಾಗಿ ಧಾನ್ಯದಿಂದ ತಯಾರಿಸಿದ *'ಕದಮ್'* ಎಂಬ ಗಂಜಿಯನ್ನು ಕೊಡುವುದು ರೂಢಿಸಿಕೊಂಡಿದ್ದಾರೆ. ಇವರು ಬಾಣಂತಿಯರಿಗಾಗಿ ತಯಾರಿಸುವ ಕದಮ್ ಜತೆಗೆ ಬಳಸುವ ಉಪ್ಪು ಮತ್ತು ಒಣಮೆಣಸಿನಕಾಯಿಯಿಚಿದ ತಯಾರಿಸಿದ ಚಟ್ನಿಯು ಗರ್ಭಾಶಯ ಸ್ವಚ್ಛಗೊಳಿಸುತ್ತದೆಂದೂ ಮತ್ತು ಹಾಲಿನ ಉತ್ಪಾದನೆಗೆ ಉತ್ತೇಜನಕಾರಿ ಆಹಾರವೆಂದು ನಂಬಿದ್ದಾರೆ (ಚಂದ್ರಶೇಖರ್ ಮತ್ತು ಚಿತ್ರಾ 1990).

ಮರಾಠವಾಡಾದ ಗೊಂಡ, ಅಂಧ, ಪರ್ಧಾನ ಮತ್ತು ಕೋಲಂ ಬುಡಕಟ್ಟುಗಳಲ್ಲಿ ಕರಿದ ತಿಂಡಿ ತಿನಿಸುಗಳು ಮತ್ತು ಒಗ್ಗರಣೆ ಪದಾರ್ಥಗಳು ಬಾಣಂತಿಯರಿಗೆ ನಿಷಿದ್ಧ ಆಹಾರಗಳು. ಇವರು ಬಾಣಂತಿಯರಿಗಾಗಿ ಅನ್ನ ಮತ್ತು ಬೇಳೆಯನ್ನು ಪ್ರಮುಖ ಆಹಾರವಾಗಿ ನೀಡುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ(ಪಾಂಡೆ ಮತ್ತು ರೋಹಿಣಿದೇವಿ, 1990).

ರಾಗಿ, ಹಣ್ಣುಗಳು, ಮೊಟ್ಟೆ, ಹಾಲು, ಕೋಳಿ ಮಾಂಸ ಇವು ಗರ್ಭಿಣಿಯರ ಆರೋಗ್ಯಕ್ಕೆ ಉತ್ತಮ ಆಹಾರಗಳೆಂದು ಇರುಳರು ಮತ್ತು ಲಂಬಾಸ್ ಬುಡಕಟ್ಟು ಜನರು ನಂಬಿದ್ದಾರೆ. ಪಪ್ಪಾಯ ಹಣ್ಣಿನ ಸೇವನೆಯು ಗರ್ಭಪಾತಕ್ಕೆ ಕಾರಣವಾಗುತ್ತದೆಂದೂ, ಎಳ್ಳು ಉಷ್ಣವೆಂತಲೂ, ಗೆಡ್ಡೆ ಗೆಣಸು ಮತ್ತು ದ್ವಿದಳ ಧಾನ್ಯಗಳು ಹೊಟ್ಟೆಯಲ್ಲಿ ಗ್ಯಾಸ್ ಉತ್ಪತ್ತಿ ಮಾಡುತ್ತವೆಂದು ನಂಬಿ ಇಂತಹ ಆಹಾರಗಳನ್ನು ಗರ್ಭಿಣಿಯರಿಗೆ ಮಿತಗೊಳಿಸಿರುವುದಾಗಿ ಚಂದ್ರಶೇಖರ್ ಮತ್ತಿತರರು (1990) ತಿಳಿಸಿದ್ದಾರೆ.

ಮರಾಠವಾಡ ಜಿಲ್ಲೆಯಲ್ಲಿ ವಾಸಿಸುತ್ತಿರುವ ಗೊಂಡ, ಅಂಧ, ಪಿರ್ಧಾರಾ ಮತ್ತು ಕೋಲಂ ಬುಡಕಟ್ಟು ಸಮುದಾಯಗಳ ಆಹಾರ ಪದ್ಧತಿಯಲ್ಲಿ ಗರ್ಭಿಣಿಯರಿಗಾಗಿ ಯಾವುದೇ ವಿಶೇಷ ಭಕ್ಷಗಳನ್ನು ತಯಾರಿಸಿ ಕೊಡುವ ಸಂಪ್ರದಾಯ ಕಂಡುಬಂದಿರುವುದಿಲ್ಲ. ಗರ್ಭಿಣಿ ಸ್ತ್ರೀ ಅಧಿಕ ಮಸಾಲೆಯುಕ್ತ ಪದಾರ್ಥಗಳನ್ನು ಸೇವವಿಸುವುದರಿಂದ ಹೆರಿಗೆ ತೊಂದರೆಯಾಗುತ್ತದೆಂದು ಇವರು ನಂಬಿರುವುದರಿಂದ ಇಂತಹ ಆಹಾರಗಳ ಸೇವನೆ ಇವರಲ್ಲಿ ಗರ್ಭಿಣಿಯರಿಗೆ ನಿಷಿದ್ಧ. ಆದರೆ ಇವರು ಗರ್ಭಿಣಿಯರಿಗೆ ಪಪ್ಪಾಯವನ್ನು ಯಾವುದೇ ಮೂಢನಂಬಿಕೆಯ ಭಯವಿಲ್ಲದೆ ನಿರ್ಭಯದಿಂದ ಸೇವಿಸಲು ನೀಡುತ್ತಾರೆ ಎಂದು ಪಾಂಡೇ ಮತ್ತು ರೋಹಿಣಿದೇವಿ(1990) ವರದಿ ಮಾಡಿದ್ದಾರೆ.

ಗರ್ಭಿಣಿಯರು ಪಪ್ಪಾಯ ಹಣ್ಣನ್ನು ಸೇವಿಸಿದರೆ ಗರ್ಭಪಾತಕ್ಕೆ ಎಡೆಮಾಡಿಕೊಡುತ್ತದೆಂತಲೂ, ಮೀನು ಉಷ್ಣಾಹಾರ ಹಾಗೂ ಅಧಿಕ ರಕ್ತದೊತ್ತಡಕ್ಕೆ ಕಾರಣವಾಗುತ್ತದೆಂತಲೂ, ಶುಂಠಿ, ಮೆಣಸುಕಾಳು, ಕುಂಬಳಕಾಯಿ ಉಷ್ಣ ಆಹಾರಗಳೆಂದು ತಿಳಿದು ಬಂಜಾರಾ ಬುಡಕಟ್ಟು ಸಮುದಾಯದವರು ಇಂತಹ ಆಹಾರಗಳನ್ನು ಗರ್ಭಿಣಿಯರಿಗೆ ಸೇವಿಸಲು ಕೊಡುವುದಿಲ್ಲ (ಜ್ಯೋತಿಲಕ್ಷ್ಮಿ, 1995). ಬಿಹಾರದ ಬಡಕಟ್ಟು ಜನರಲ್ಲಿ ಇಂತಹ ಯಾವುದೇ ನಂಬಿಕೆಗಳು ಕಂಡುಬರದಿದ್ದರೂ ಇವರು ಗರ್ಭಿಣಿಯರಿಗೆ ಆಯಾ ಋತುಮಾನಗಳಲ್ಲಿ ದೊರೆಯುವ ಹಣ್ಣುಗಳು

ಮೀನು ಮತ್ತು ದ್ವಿದಳ ಧಾನ್ಯಗಳನ್ನು ಹೆಚ್ಚಿಗೆ ಸೇವಿಸಲು ನೀಡುತ್ತಾರೆ (ಆರತಿ ಮತ್ತು ಹೇಮಾ, 1998).

ಒಣಗಿಸಿದ ಮೀನು, ಮಾಂಸಾಹಾರ ದಂಟಿನಬೀಜದಿಂದ ತಯಾರಿಸಿದ ಅರಳು, ಪಾಮ್ ಗಿಡದಿಂದ ತಯಾರಿಸಿದ ಬೆಲ್ಲವನ್ನು ಬಾಣಂತಿಯರಿಗೆ ವಿಶೇಷ ಆಹಾರವಾಗಿ ನೀಡುವ ಪದ್ಧತಿಯನ್ನು ತಮಿಳುನಾಡಿನ ಪೆರಿಯಾರ್ ಬುಡಕಟ್ಟು ಸಮುದಾಯದವರು ಪಾಲಿಸುತ್ತಿದ್ದಾರೆ. ಇವರು ವಾಂತಿಭೇದಿ ಮತ್ತು ಚಿಕನ್ ಫಾಕ್ಸ್ ನಿಂದ ಬಳಲುವವರಿಗೆ ಬೇಗ ಗುಣಮುಖರಾಗಲು ಹುರಿದ ಅರಿಶಿಣದ ಬೇರಿನ ಪುಡಿಯನ್ನು ಬಿಸಿನೀರಿನಲ್ಲಿ ಬೆರಸಿ ಸೇವಿಸಲು ಕೊಡುತ್ತಾರೆ (ಮುರುಗೇಶನ್ ಮತ್ತು ಅನಂತಲಕ್ಷ್ಮಿ, 1991).

ಕೊಬ್ಬರಿಖಾರ, ಸಬ್ಬಕ್ಕಿ ಪಾಯಸ ಮತ್ತು ಮಾಂಸವನ್ನು ಲಂಬಾಣಿ ಬುಡಕಟ್ಟು ಜನರು ಬಾಣಂತಿಯರಿಗೆ ವಿಶೇಷ ಆಹಾರಗಳಾಗಿ ಕೊಡುತ್ತಿರುವುದಾಗಿ ಜ್ಯೋತಿಲಕ್ಷ್ಮಿ ರವರ (1995)ಅಧ್ಯಯನದ ವರದಿ ತಿಳಿಸುತ್ತದೆ. ಬಾಣಂತಿಯರಿಗೆ ಅಕ್ಕಿಯಿಂದ ಹುದುಗುಬರಿಸಿ ತಯಾರಿಸಿದ '*ಮಂದಿ*' ಎಂಬ ಪಾನೀಯವನ್ನು ಮತ್ತು ಅರಿಶಿಣದಿಂದ ತಯಾರಿಸಿದ ಸೂಪ್ ಹಾಗೂ ಉದ್ದಿನಬೇಳೆ, ಪಪ್ಪಾಯ ಮತ್ತು ಶತಾವರಿ ಸೊಪ್ಪನ್ನು ವಿಶೇಷ ಆಹಾರವಾಗಿ ಕೊಡುವ ಪದ್ದತಿಯನ್ನು ಮತ್ತು ಮೊಸರು, ಕರಿದ ತಿಂಡಿ ತಿನಿಸುಗಳು ಬಾಣಂತಿಯರಿಗೆ ನಿಷಿದ್ಧಗೊಳಿಸಿರುವುದನ್ನು ಆರತಿ ಮತ್ತು ಹೇಮಾರವರು 1998ರಲ್ಲಿ ಬಿಹಾರ್‌ನ ಹೋ ಬುಡಕಟ್ಟು ಜನಾಂಗದ ಆಹಾರ ಪದ್ದತಿಯ ಕುರಿತು ದಾಖಲಿಸಿದ ವರದಿಯು ತಿಳಿಸುತ್ತದೆ.

ಇವರು ಸೇವಿಸುವ ಆಹಾರದಲ್ಲಿ ರಕ್ಷಕ ಆಹಾರಗಳಾದ ಹಣ್ಣು ಮತ್ತು ಸೊಪ್ಪುಗಳ ಪ್ರಮಾಣ ತುಂಬಾ ಕಡಿಮೆ ಇರುವುದು ತಿಳಿದುಬಂದಿದೆ. ಸೊಪ್ಪನ್ನು ಹೆಚ್ಚಾಗಿ ಬಳಸುತ್ತಿದ್ದರೂ ಇದರಲ್ಲಿ ವೈವಿಧ್ಯತೆ ಇರದೆ ಎರಡು ಮೂರು ಬಗೆಯ ಸೊಪ್ಪುಗಳನ್ನು ಮಾತ್ರ ಬಳಸುತ್ತಾರೆ. ಸೊಪ್ಪು ಮತ್ತು ಹಣ್ಣುಗಳನ್ನು ಅವರು ವಾಸಿಸುವ ಸುತ್ತಮುತ್ತಲ ಪ್ರದೇಶಗಳಲ್ಲಿ ಮತ್ತು ಮನೆಯ ಹಿತ್ತಲಿನಲ್ಲಿ ಬೆಳೆದಿದ್ದನ್ನು ಮಾತ್ರ ಬಳಸುತ್ತಿದ್ದು ಇದಕ್ಕಾಗಿ ಮಾರುಕಟ್ಟೆಯಿಂದ ಖರೀದಿಸಿ ತಂದು ಸೇವಿಸುವ ರೂಢಿ ಇಲ್ಲ. ಇವರ ದಿನನಿತ್ಯದ ಆಹಾರವನ್ನು ಗಮನಿಸಿದರೆ, ಹಾಲಿನ ಸೇವನೆ ಇಲ್ಲವೇ ಇಲ್ಲ ಎನ್ನಬಹುದು. ಇವರು ಪ್ರತಿನಿತ್ಯ ಟೀ ಸೇವಿಸುತ್ತಿದ್ದರೂ ಸಹ ಟೀ ತಯಾರಿಸಲು ಹಾಲು ಹಾಕದೆ ಉಪ್ಪು ಬೆರಸಿ ಸೇವಿಸುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಇವರ ಇನ್ನೊಂದು ವಿಶಿಷ್ಟ ಬಗೆಯ ಆಹಾರ ಪದ್ದತಿಯೆಂದರೆ, ಊಟಕ್ಕಾಗಿ ತಯಾರಿಸಿದ ಅನ್ನವು ಮಿಕ್ಕಿದರೆ ಅದನ್ನು ಹಾಳು ಮಾಡದೆ, ಅದರಿಂದ ಹುದುಗುಬರಿಸಿದ ಪಾನೀಯ ತಯಾರಿಸಿ ಸೇವಿಸುತ್ತಾರೆ. ಇಲ್ಲಿ ಗಮನಿಸಬೇಕಾದದ್ದೇನೆಂದರೆ, ಅನ್ನವನ್ನು ಹುದುಗುಬರಿಸುವುದರಿಂದ ಅಕ್ಕಿಯಲ್ಲಿರುವ ನೀರಿನಲ್ಲಿ ಕರಗುವ ಜೀವಸತ್ವಗಳ ನಾಶವನ್ನು ಸಂಪೂರ್ಣವಾಗಿ ತಡೆಗಟ್ಟಿ ಉಪಯೋಗಿಸಿದಂತಾಗುತ್ತದೆ. ಬೇಯಿಸುವುದು ಹಾಗೂ ಹುರಿಯುವುದು ಇವರು ಅಡುಗೆ ತಯಾರಿಸಲು ಪ್ರಮುಖವಾಗಿ ಬಳಸುವ ವಿಧಾನಗಳಾಗಿವೆ. ಟೊಮ್ಯಾಟೊ ಹಣ್ಣನ್ನು ಬಳಸಿ ಮಾಂಸಾಹಾರದಲ್ಲಿರುವ ಹೆಚ್ಚಿನ ಪ್ರಮಾಣದ ಕೊಬ್ಬನ್ನು ಬೇರ್ಪಡಿಸುವ ವಿಧಾನವನ್ನು

ಕಂಡುಕೊಂಡಿದ್ದಾರೆ. 'ಹದಿಯಾ' ಎಂಬ ಪಾನೀಯ ಇವರು ತಯಾರಿಸುವ ಸಂಪ್ರದಾಯಿಕ ಆಹಾರ. ಇದನ್ನು ಅಕ್ಕಿಯನ್ನು ಹುದುಗುಬರಿಸಿ ಇದಕ್ಕೆ 14 ಬಗೆಯ ವಿವಿಧ ಗಿಡಮೂಲಿಕೆಗಳನ್ನು ಬಳಸಿ ತಯಾರಿಸುತ್ತಾರೆ. ಅಲ್ಲದೆ ಬೆಲ್ಲ ಮತ್ತು ಗಿಡಮೂಲಿಕೆಗಳನ್ನು ಹುದುಗುಬರಿಸಿ ಸಹ ತಯಾರಿಸುತ್ತಾರೆ. ಹದಿಯಾವನ್ನು ಉದರದ ಆಮ್ಲತೆಯ ತೊಂದರೆಗೆ ಔಷಧಿಯಾಗಿ ಸಹ ಬಳಸುತ್ತಾರೆ.

ಹೆಣ್ಣುಮಕ್ಕಳ ಜೀವನಚಕ್ರದಲ್ಲಿ ಪ್ರಮುಖ ಘಟ್ಟವಾದ ಹದಿಹರೆಯ, ಗರ್ಭಿಣಿ ಹಾಗೂ ಬಾಣಂತನದ ಅವಧಿಯಲ್ಲಿ ಆಹಾರದ ಬೇಡಿಕೆಯು ಹೆಚ್ಚಾಗಿರುತ್ತದೆ. ಈ ಕುರಿತು ವಿವಿಧ ಬುಡಕಟ್ಟುಗಳು ರೂಢಿಸಿಕೊಂಡಿರುವ ಸಂಪ್ರದಾಯಗಳ ಕುರಿತು ದುರ್ಗಾ ರಾವ್ ಮತ್ತಿತರರು(2006) ಆಂದ್ರ ಪ್ರದೇಶದ ಮೂರು ಜಿಲ್ಲೆಗಳಲ್ಲಿ ವಾಸಿಸುತ್ತಿರುವ 3000 ಬುಡಕಟ್ಟು ಕುಟುಂಬಗಳಿಂದ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಕೊಂಡ ಬುಡಕಟ್ಟು ಸಮುದಾಯದವರು ಬೆಲ್ಲದಿಂದ ತಯಾರಿಸಿದ ಸಿಹಿ ತಿನುಸುಗಳನ್ನು ಹೆಣ್ಣುಮಕ್ಕಳು ಋತುಮತಿಯಾದಾಗ ಹೆಚ್ಚಾಗಿ ಕೊಡುವ ರೂಢಿಯಿದ್ದು ಈ ಸಮಯದಲ್ಲಿ ತರಕಾರಿಗಳು ಹಾಗೂ ಮಾಂಸಾಹಾರವನ್ನು ಇವರಿಗೆ ಕೊಡುವುದಿಲ್ಲ. ಗರ್ಭಿಣಿಯರಿಗೆ ಉತ್ತತ್ತಿಯನ್ನು ಎಂಟರಿಂದ ಹತ್ತು ಗಂಟೆಕಾಲ ತುಪ್ಪದಲ್ಲಿ ನೆನೆಸಿಟ್ಟು ನಂತರ ಇದರ ಪೇಸ್ಟ್ ತಯಾರಿಸಿ ಸೇವಿಸಲು ಕೊಡುತ್ತಾರೆ. ಹೀಗೆ ಸೇವಿಸುವುದರಿಂದ ಹೆರಿಗೆ ಸುಲಭವಾಗುತ್ತದೆಂದು ಅವರ ನಂಬಿಕೆ.

ಸೋರೆಕಾಯಿ, ನುಗ್ಗೆಕಾಯಿ, ಕೋಸು, ಬೀನ್ಸ್, ದಂಟುಸೊಪ್ಪು, ಪುಂಡಿಸೊಪ್ಪು, ಕಳಲೆ, ಯಾಮ್, ಬಾಳೆಹಣ್ಣು, ಪಪ್ಪಾಯ, ಕುಂಬಳಕಾಯಿ, ಹುಚ್ಚೆಳ್ಳು, ಉದ್ದಿನಬೇಳೆ, ಹೆಸರುಬೇಳೆ, ಮಾಂಸಾಹಾರವಾದ ಕೋಳಿ, ಆಡು ಮತ್ತು ದನದ ಮಾಂಸ, ಏಡಿಯನ್ನು ಗರ್ಭಿಣಿ ಹಾಗೂ ಬಾಣಂತಿಯರ ಆರೋಗ್ಯಕ್ಕೆ ಉತ್ತಮ ಆಹಾರಗಳೆಂದು ನಂಬಿರುವ ಇವರು ಇಂತಹ ಆಹಾರಗಳನ್ನು ಗರ್ಭಿಣಿ ಬಾಣಂತಿಯರಿಗೆ ಹೆಚ್ಚಾಗಿ ಸೇವಿಸಲು ಕೊಡುತ್ತಾರೆ. ಹಾಗಲಕಾಯಿ, ಪಡುವಲಕಾಯಿ, ಆಲೂಗೆಡ್ಡೆ, ಬದನೆ, ಟೊಮ್ಯಾಟೊ, ಅಣಬೆ ಹಸಿ/ತಾಜಾ ಹುಣಸೆಕಾಯಿ, ತೆಂಗಿನಕಾಯಿ, ಮಾವು, ಕಲ್ಲಂಗಡಿ, ಒಣಗಿಸಿದ ಮತ್ತು ಸಂಸ್ಕರಿಸಿದ ಮೀನು, ಕಾಡುಬೆಕ್ಕಿನ ಮಾಂಸ, ಜಿಂಕೆಮಾಂಸ, ಮೊಟ್ಟೆ, ಮುಸುಕಿನಜೋಳ, ಬಾರ್ಲಿ, ಕಡಲೆಬೇಳೆ/ಕಡಲೆಕಾಳು, ಹೆಸರುಕಾಳು, ಹುರಳಿ, ಗಿಣ್ಣು ಸ್ಥಳೀಯವಾಗಿ ತಯಾರಿಸಿದ ಮದ್ಯವನ್ನು ಗರ್ಭಿಣಿ ಹಾಗೂ ಬಾಣಂತಿಯರ ಆರೋಗ್ಯಕ್ಕೆ ಒಳ್ಳೆಯದಲ್ಲವೆಂದು ತಿಳಿದು ಇಂತಹ ಆಹಾರಗಳನ್ನು ಸೇವಿಸಲು ನೀಡುವುದಿಲ್ಲ.

ನಿಂಬೆಎಲೆ, ಜೀರಿಗೆ ಮತ್ತು ಅರಿಶಿಣದಿಂದ ತಯಾರಿಸಿದ ಪೇಸ್ಟ್‌ನ್ನು ಚಿಕ್ಕಮಕ್ಕಳಿಗೆ ನೆಕ್ಕಿಸುವುದರಿಂದ ಜೀರ್ಣಕ್ರಿಯೆ ಸರಾಗವಾಗಲು ಸಹಕಾರಿಯಾಗುತ್ತದೆಂದು ನಂಬಿದ್ದಾರೆ. ಜೇನಿನೊಂದಿಗೆ ಉಪ್ಪನ್ನು ಬೆರಸಿ ಕೊಡುವುದರಿಂದ ಮಕ್ಕಳ ಚರ್ಮ ಕಾಂತಿಯುಕ್ತವಾಗುತ್ತದೆಂದು ನಂಬಿದ ಇವರು ಇಂತಹ ಆಹಾರಗಳನ್ನು ಮಕ್ಕಳಿಗೆ ವಿಶೇಷವಾಗಿ ಕೊಡುತ್ತಾರೆ.

ರಾಜಸ್ಥಾನದ ಬಹಳಷ್ಟು ಬುಡಕಟ್ಟುಗಳು ತುಪ್ಪ, ಎಣ್ಣೆಕಾಳುಗಳು, ಮೊಸರು ಮತ್ತು ಇತರೆ ಉಷ್ಣ ಆಹಾರಗಳು ಗರ್ಭಿಣಿ ಸ್ತ್ರೀಯರ ಆರೋಗ್ಯಕ್ಕೆ ಒಳ್ಳೆಯ ಆಹಾರಗಳಲ್ಲವೆಂದು ನಂಬಿದ ಇವರು ಇಂತಹ ಆಹಾರಗಳನ್ನು ಗರ್ಭಿಣಿ ಸ್ತ್ರೀಯರಿಗೆ ಸೇವಿಸಲು ಕೊಡುವುದಿಲ್ಲ, ಏಕೆಂದರೆ ಇವು ಗರ್ಭದ ನಂಜು ರೋಗಕ್ಕೆ ಕಾರಣವಾಗುತ್ತವೆಂದು ತಿಳಿದಿದ್ದಾರೆ. ಆದರೆ, ಬಾಣಂತಿಯರಿಗೆ ತುಪ್ಪವನ್ನು ವಿಶೇಷ ಆಹಾರವಾಗಿ ಕೊಡುವುದನ್ನು ರೂಢಿಸಿಕೊಂಡಿದ್ದಾರೆ. ಹಾಗೂ ಅನೇಕ ಗಿಡಮೂಲಿಕೆಗಳಿಂದ ತಯಾರಿಸಿದ ಕಷಾಯವನ್ನು ಬಾಣಂತಿಯರ ಆರೋಗ್ಯ ವೃದ್ಧಿಸಲು ಕೊಡುತ್ತಾರೆ(ನಾಗ್ದಾ, 2004).

ಲಂಬಾಸ್ ಮತ್ತು ಇರುಳರು ರಾಗಿಯಿಂದ ತಯಾರಿಸಿದ ಕಲಿ, ಮೊಟ್ಟೆ ಮತ್ತು ಹಾಲು ಇವು ಗರ್ಭಸ್ಥ ಶಿಶುವಿನ ಬೆಳವಣಿಗೆಗೆ ಉತ್ತಮ ಆಹಾರವೆಂದು ನಂಬಿದ ಇವರು ಇವನ್ನು ಗರ್ಭಿಣಿಯರಿಗೆ ವಿಶೇಷ ಆಹಾರವಾಗಿ ಕೊಡುವುದು ಕಂಡುಬಂದಿದೆ. ಗರ್ಭಿಣಿ ಸ್ತ್ರೀ ಪಪ್ಪಾಯ ತಿನ್ನುವುದರಿಂದ ಗರ್ಭಪಾತಕ್ಕೆ ಕಾರಣವೆಂದು, ಹಲಸು ಮತ್ತು ಎಳ್ಳು ಉಷ್ಣ ಆಹಾರವೆಂದು, ಗೆಡ್ಡೆಗೆಣಸುಗಳು ಮತ್ತು ದ್ವಿದಳ ಧಾನ್ಯಗಳು ಹೊಟ್ಟೆಯಲ್ಲಿ ಉದರದ ಆಮ್ಲತೆಯ ತೊಂದರೆಗೆ ಎಡೆಮಾಡಿಕೊಡುತ್ತದೆಂದು ನಂಬಿದ ಇವರು ಗರ್ಭಿಣಿಯರಿಗೆ ಇಂತಹ ಆಹಾರಗಳನ್ನು ಕೊಡುವುದಿಲ್ಲ (ಚಂದ್ರಶೇಕರ್ ಮತ್ತು ಇತರರು 1990). ಲಂಬಾ ಬುಡಕಟ್ಟು ಜನರು ಬಾಣಂತಿಯರಿಗೆ ನುಗ್ಗೆಸೊಪ್ಪು, ಜೀರಿಗೆ ಮತ್ತು ಬೆಲ್ಲವನ್ನು ಮತ್ತು ಇರುಳರು ವಿವಿಧ ಸೊಪ್ಪುಗಳನ್ನು ಬರಸಿ ತಯಾರಿಸಿದ ಪದಾರ್ಥವನ್ನು ವಿಶೇಷ ಆಹಾರವಾಗಿ ಕೊಡುವುದು ರೂಢಿಯಲ್ಲಿದ್ದು ಇಂತಹ ಆಹಾರಗಳು ಹಾಲಿನ ಉತ್ಪತ್ತಿಯನ್ನು ಹೆಚ್ಚಿಸುತ್ತವೆಂದು ನಂಬಿದ್ದಾರೆ.

### 2.4.3 ಬುಡಕಟ್ಟುಗಳಲ್ಲಿ ಆಹಾರ ಸಂಗ್ರಹಣೆ ಹಗೂ ಸಂಸ್ಕರಣೆ

ಬುಡಕಟ್ಟು ಸಮುದಾಯಗಳ ಆಹಾರ ಪದ್ಧತಿಯು ಪ್ರಮುಖವಾಗಿ ಕೃಷಿ ಮತ್ತು ಅರಣ್ಯ ಉತ್ಪನ್ನಗಳ ಮೇಲೆಯೇ ಹೆಚ್ಚು ಅವಲಂಬಿತವಾಗಿದೆ. ಅದಾಗ್ಯೂ ವರ್ಷದ ಕೆಲವೊಂದು ಋತುಮಾನಗಳಲ್ಲಿಯ ಆಹಾರದ ಅಭಾವವನ್ನು ನೀಗಿಸಲು ಆಹಾರವನ್ನು ಸಂಗ್ರಹಿಸಿಡುವ ಪದ್ದತಿಯನ್ನು ರೂಢಿಸಿಕೊಂಡಿರುವುದನ್ನು ಬೆಟ್ಟ ಪ್ರದೇಶ ಮತ್ತು ಅರಣ್ಯದ ಸುತ್ತಮುತ್ತಲ ಪ್ರದೇಶದಲ್ಲಿ ವಾಸಿಸುತ್ತಿರುವ ಅನೇಕ ಬುಡಕಟ್ಟುಗಳಲ್ಲಿ ಕಾಣಬಹುದು.

ಅರಣ್ಯವಾಸಿ ಬುಡಕಟ್ಟುಗಳು ವನ್ಯ ಜಾತಿಯ ಬೇರು ಗಡ್ಡೆಗಳು, ದಾಸವಾಳದ ಹೂ ಮತ್ತು ಎಲೆ *ಕ್ಯಾರಿಯೋ ಪಾಮ್ ಪಿತ್* ಮತ್ತು ಮಾಂಸವನ್ನು ಸೂರ್ಯನ ಶಾಖಕ್ಕೆ ಒಡ್ಡಿ ಒಣಗಿಸಿಡುವುದನ್ನು ರಾವ್(1971), ಸ್ವಾಮಿನಾಥನ್ ಮತ್ತಿತರರು(1971) ಮತ್ತು ಸೇನ್ ಗುಪ್ತಾ, (1980)ರವರ ಅಧ್ಯಯನದ ವರದಿಯಲ್ಲಿ ದಾಖಲಿಸಿದ್ದಾರೆ.

ಮಾಂಸ, ಮೀನು, ಆಮೆ ಇವುಗಳನ್ನು ಝಳ ಮತ್ತು ಹೊಗೆಯ ಶಾಖದಲ್ಲಿ ಒಣಗಿಸುವುದು ಅಥವಾ ಉಪ್ಪಿನ ನೀರಿನಲ್ಲಿ ಅರ್ಧ ಬೇಯಿಯುವವರೆಗೆ ಬೇಯಿಸಿ ನಂತರ ಬಿಸಿಲಿನಲ್ಲಿ ಒಣಗಿಸುವುದು, ಬೇಯಿಸಿದ ಕಾರಿಯೋಟಾ ಪಿತ್ತನ್ನು ಎಲೆಯಲ್ಲಿ ಸುತ್ತಿಡುವುದು, ಒಣದ್ರಾಕ್ಷಿ,

ಹಣ್ಣುಗಳು ಮತ್ತು ಯೋಗರ್ಟನ್ನು ಬಿಸಿಲಿನಲ್ಲಿ ಒಣಗಿಸುವುದು, ಕರ್ಜೂರವನ್ನು ಸ್ವಲ್ಪ ನೀರಲ್ಲಿ ನೆನಸಿ ನಂತರ ಅದನ್ನು ಆಡು ಅಥವಾ ಕುರಿಯ ಚರ್ಮದಿಂದ ತಯಾರಿಸಿದ ಚೀಲದಲ್ಲಿ ಶೇಖರಿಸಿಡುವ ವಿಧಾನವನ್ನು ಬುಡಕಟ್ಟುಗಳು ಅನುಸರಿಸುತ್ತಿರುವುದಾಗಿ ಅಧ್ಯಯನಕಾರರು ತಿಳಿಸಿದ್ದಾರೆ (ಗ್ರಿವೆಟ್ಟಿ, 1979, ರಾಬ್ಸನ್ ಮತ್ತಿತರರು, 1976).

ಲಂಬಾಸ್ ಮತ್ತು ಇರುಳ ಬುಡಕಟ್ಟು ಸಮುದಾಯಗಳು ಬೆಳೆದ ಧಾನ್ಯಗಳನ್ನು ಮಣ್ಣಿನ ಪಾತ್ರೆ ಮತ್ತು ಗೋಣಿಚೀಲಗಳಲ್ಲಿ ಸಂಗ್ರಹಿಸಿಟ್ಟು ವರ್ಷ ಪೂರ್ತಿ ಬಳಸುತ್ತಾರೆ. ಅರಣ್ಯದಿಂದ ಸಂಗ್ರಹಿಸಿ ತಂದ ಬೇರುಗಳಿಂದ ತಯಾರಿಸಿದ ಉಪ್ಪಿನಕಾಯಿ ಇವರು ಸಂಸ್ಕರಿಸಿಡುವ ಪ್ರಮುಖ ಮತ್ತು ಏಕೈಕ ಆಹಾರ (ಚಂದ್ರಶೇಕರ್ ಮತ್ತು ಇತರರು, 1990).

ಆಂದ್ರ ಪ್ರದೇಶದ ಜಟಾಪು, ಸವರಾ, ಗಡಬಾ ಮತ್ತು ಕೊಂಡದೊರಾ ಬುಡಕಟ್ಟುಗಳು ಆಹಾರ ಧಾನ್ಯವನ್ನು ಪ್ರಮುಖವಾಗಿ ಮುಂಬರುವ ವರ್ಷದ ಬಿತ್ತನೆಗಾಗಿ ಮತ್ತು ಆಹಾರದ ಅಭಾವವನ್ನು ನೀಗಿಸಲು ಸಂಗ್ರಹಿಸಿಡುವ ಪದ್ದತಿಯನ್ನು ರೂಢಿಸಿಕೊಂಡಿರುವುದಾಗಿ ರಾಜ್ಯಲಕ್ಷ್ಮಿ(1999) ಅಧ್ಯಯನದಿಂದ ತಿಳಿದುಬಂದಿದೆ. ಇವರು ಬುಡಕಟ್ಟು ಸಮುದಾಯಗಳ ಆಹಾರ ಸಂಗ್ರಹಣೆ ಕುರತಂತೆ 300 ಬುಡಕಟ್ಟು ಕುಟುಂಬಗಳ ಮಾಹಿತಿಯನ್ನು ಸಂಗ್ರಹಿಸಿದ್ದಾರೆ. ಇವರಲ್ಲಿ 76 ಪ್ರತಿಶತ ಕುಟುಂಬಗಳು ಮಣ್ಣಿನ ಮಡಿಕೆಯನ್ನು, ಶೇಕಡ 23 ಕುಟುಂಬಗಳು ಬಾಸ್ಕೆಟ್ ಅನ್ನು ಮತ್ತು ಶೇಕಡ ಒಂದರಷ್ಟು ಕುಟುಂಬಗಳು ಆಹಾರ ಧಾನ್ಯಗಳನ್ನು ಸಂಗ್ರಹಿಸಿಡಲು ಗೋಣಿಚೀಲಗಳನ್ನು ಬಳಸುತ್ತಾರೆ. ಇವರಲ್ಲಿ ಶೇಕಡ 78 ಕುಟುಂಬಗಳು ಆಹಾರ ಧಾನ್ಯವನ್ನು ಒಂದರಿಂದ ಆರು ತಿಂಗಳವರೆಗೆ, ಶೇಕಡ 15 ಕುಟುಂಬಗಳು ಒಂದು ವರ್ಷದವರೆಗೆ ಆಹಾರ ಧಾನ್ಯಗಳನ್ನು ಸಂಗ್ರಹಿಸಿಡುವುದಾಗಿ ವರದಿಯಲ್ಲಿ ಮಂಡಿಸಿದ್ದಾರೆ. ಧಾನ್ಯವನ್ನು ಸಂಗ್ರಹಿಸಿಡುವುದಕ್ಕಿಂತ ಮೊದಲು ಪ್ರಖರವಾದ ಸೂರ್ಯನ ಬಿಸಿಲಿನಲ್ಲಿ ಒಣಗಿಸುವುದು ಸಾಮಾನ್ಯವಾಗಿ ಇವರು ಅನುಸರಿಸುವ ಪದ್ಧತಿಯಾಗಿದೆ. ಆದರೆ ಬಿತ್ತನೆಗಾಗಿ ಬಳಸುವ ತೊಗರಿಯನ್ನು ಸಂಗ್ರಹಿಸಿಡಲು ಬೂದಿಯನ್ನು ಬೆರಸಿ(1ಕಿಲೊ ಗ್ರಾಂ/ಚೀಲಕ್ಕೆ) ಅಥವಾ ಬೇವಿನ ಎಲೆಯನ್ನು ಬೆರಸಿ ಅಥವಾ *Senecarpus anacardium* ಬೀಜಗಳನ್ನು(4–6ಬೀಜ/ಚೀಲಕ್ಕೆ) ಬೆರಸಿ ಸಂಗ್ರಹಿಸಿಡುತ್ತಾರೆ.

ಆಯಾ ಕಾಲದಲ್ಲಿ ದೊರಕುವ ಕ್ಯಾರಿಯೋಟಾ ಪಾಮ್ ಪಿತ್, ಮಾವಿನಕಾಯಿ ಗೋಟಿ, ಕಳಲೆ ಮತ್ತು ಅಣಬೆ ಇವುಗಳನ್ನು ಅರಣ್ಯದಿಂದ ಸಂಗ್ರಹಿಸಿ ತಂದು ಬಿಸಿಲಿನಲ್ಲಿ ಚನ್ನಾಗಿ ಒಣಗಿಸಿ ಒಂದು ವರ್ಷದವರೆಗೆ ಸಂಗ್ರಹಿಸಿಡುತ್ತಾರೆ.

ಹುಣಸೆ ಹಣ್ಣನ್ನು ಬೀಜದಿಂದ ಬೇರ್ಪಡಿಸಿ ಬಿಸಿಲಿನಲ್ಲಿ ಒಣಗಿಸುವುದು, ಹುಣಸೆ ಹಣ್ಣಿಗೆ ಸ್ವಲ್ಪ ಪ್ರಮಾಣದಲ್ಲಿ ಉಪ್ಪು ಬೆರಸಿದ ನೀರನ್ನು ಚಿಮುಕಿಸಿ ಒಣಗಿಸುವುದು ಮತ್ತು ಹುಣಸೆಹಣ್ಣಿಗೆ ಉಪ್ಪು ಮತ್ತು ಅರಿಶಿಣಪುಡಿ (30 ಕಿಲೊ ಗ್ರಾಂ ಹಣ್ಣಿಗೆ 2 ಕಿಲೊ ಗ್ರಾಂ ಉಪ್ಪು ಮತ್ತು 1/4ಕಿಲೋ

ಅರಿಶಿಣಪುಡಿ) ಬೆರಸಿ ಚಿಕ್ಕ ಚಿಕ್ಕ ಉಂಡೆಗಳಾಗಿ ಮಾಡಿ ಸಂಗ್ರಹಿಸಿಡುವ ಪದ್ದತಿಯನ್ನು ಅನುಸರಿಸುತ್ತಿದ್ದಾರೆ.

ಮಾಂಸವನ್ನು ಚಿಕ್ಕ ಚಿಕ್ಕ ತುಂಡುಗಳಾಗಿ ಮಾಡಿ ಈ ತುಂಡುಗಳನ್ನು ಒಣಗಿಸಲು ಅಗ್ನಿ ಕುಂಡದ ಮೇಲೆ ಸ್ವಲ್ಪ ಅಂತರದಲ್ಲಿ ನೇತುಹಾಕಿ ಒಣಗಿಸುವ ಪದ್ದತಿಯನ್ನು ಅಥವಾ ಒಡೆದ ಬಿದಿರಿನ ಕೊಳಗದಲ್ಲಿ ಮಾಂಸದ ತುಂಡನ್ನು ತುಂಬಿಸಿ ಮನೆಯ ಒಳಗಡೆ ಎತ್ತರದಲ್ಲಿ ನೇತು ಹಾಕಿಡುವ ಪದ್ದತಿಯನ್ನು ಅನುಸರಿಸುತ್ತಿದ್ದು ಹೀಗೆ ಒಣಗಿಸಿದ ತುಂಡುಗಳನ್ನು ಒಂದು ವರ್ಷದವರೆಗೆ ಸಂಗ್ರಹಿಸಿಡುತ್ತಾರೆ(ನಂದಿ ಮತ್ತು ಭಟ್ಟಾಚಾರ್ಯ.2003).

ಬುಡಕಟ್ಟು ಸಮುದಾಯಗಳು ಅನೇಕ ಸ್ಥಳೀಯ ಆಹಾರ ಧಾನ್ಯಗಳ ತಳಿಗಳನ್ನು ಸಂರಕ್ಷಿಸಿಕೊಂಡು ಬಂದಿದ್ದಾರೆ. ಅವುಗಳಲ್ಲಿ ಭತ್ತ, ಮೆಕ್ಕೆಜೋಳ, ತೃಣಧಾನ್ಯಗಳು, ದ್ವಿದಳ ಧಾನ್ಯಗಳು, ಹಣ್ಣುಗಳು ಮತ್ತು ತರಕಾರಿ ತಳಿಗಳು. ಈ ತಳಿಗಳು ವೈವಿಧ್ಯಮಯ ಪರಿಸರದಲ್ಲಿ ಹುಟ್ಟಿದಂತಹುಗಳು. ಮಧ್ಯಪ್ರದೇಶದ ಮುಂಡಾ, ಬಿರ್ಹಾರ್, ಗೊಂಡ ಬುಡಕಟ್ಟುಗಳು 150 ಬಗೆಯ ಭತ್ತದ ನಾಟಿ ತಳಿಗಳನ್ನು ಇಂದಿಗೂ ಸಂರಕ್ಷಣೆ ಮಾಡಿ ಜತನದಿಂದ ಕಾಯ್ದುಕೊಂಡು ಬಂದಿವೆ. ಈ ತಳಿಗಳು ಉತ್ತಮ ಜೈವಿಕ ಗುಣವುಳ್ಳದ್ದಾಗಿದ್ದು, ಒಳ್ಳೆಯ ಸುವಾಸನೆ, ಧಾನ್ಯದ ಗುಣಮಟ್ಟ, ಸಸಾರಜನಕದ ಪ್ರಮಾಣ, ಜೀರ್ಣವಾಗುವಿಕೆ ಮತ್ತು ಕೀಟ, ರೋಗಗಳಿಗೆ ಈಡಾಗದಂತೆ ರಕ್ಷಣಾ ಶಕ್ತಿಯನ್ನು ಹೊಂದಿದವುಗಳಾಗಿವೆ. ಇವುಗಳನ್ನು ಅಖಿಲ ಭಾರತ ಸುಸಂಘಟಿತ ಪ್ರಾಯೋಜನೆಯ ಜೈವಿಕ ತಂತ್ರಜ್ಞರು ಸಂಶೋಧನೆಗಾಗಿ ಬಳಸುತ್ತಿದ್ದಾರೆ (ನಂದಿ ಮತ್ತು ಭಟ್ಟಾಚಾರ್ಯ.2003).

### 2.4.4 ಬುಡಕಟ್ಟು ಸಮುದಾಯ ಮತ್ತು ಆರೋಗ್ಯ

ಬುಡಕಟ್ಟುಗಳ ಆರೋಗ್ಯ ಕುರಿತಂತೆ ಅನೇಕ ಅಧ್ಯಯನಗಳು ನಡೆದಿದ್ದು ಇವರ ಆರೋಗ್ಯ ಸ್ಥಿತಿಯು ಇವರು ವಾಸಿಸುವ ಪ್ರದೇಶ, ಕಾಲ, ಶೈಕ್ಷಣಿಕ ಮಟ್ಟ, ಆದಾಯದ ಮೇಲೆ ಅವಲಂಬಿತವಾಗಿವೆ.

ಬುಡಕಟ್ಟು ಸಮುದಾಯಗಳು ಆಹಾರಕ್ಕಾಗಿ ಬಳಸುತ್ತಿದ್ದ ವಿವಿಧ ಬಗೆಯ 200 ಸಸ್ಯಗಳಲ್ಲಿಯ ಪೋಷಕಾಂಶಗಳನ್ನು ವಿಶ್ಲೇಷಣೆ ಮಾಡಲಾಗಿದ್ದು, ಇವುಗಳು ಉತ್ತಮ ಗುಣಮಟ್ಟದ ಮತ್ತು ಅಧಿಕ ಪೋಷಕಾಂಶಗಳನ್ನು ಹೊಂದಿರುವುದು ವಿಶ್ಲೇಷಣೆಯಿಂದ ತಿಳಿದುಬಂದಿದೆ ಹಾಗೂ ಇವರು ಸಂಪ್ರದಾಯಿಕ ಆಹಾರ ತಯಾರಿಕೆ ಮತ್ತು ಸೇವನೆ ಪದ್ದತಿಗಳನ್ನು ಅಳವಡಿಸಿಕೊಂಡಿರುವುದರಿಂದ ಇವರು ಆರೋಗ್ಯವಾಗಿ ರೋಗರುಜಿನಗಳಿಂದ ದೂರವಿರುವುದು ಕಂಡುಬಂದಿದೆ.

ಮಿತ್ತಲ್, ಮತ್ತು ಶ್ರೀವಾತ್ಸವ್(2006) ರವರು ಓರಿಯನ್ ಬುಡಕಟ್ಟುಗಳ ಆಹಾರ, ಪೌಷ್ಟಿಕ ಸ್ಥಿತಿ ಮತ್ತು ಆಹಾರ ಸಂಬಂಧಿತ ಸಂಪ್ರದಾಯಗಳ ಕುರಿತು ಅಧ್ಯಯನ ಕೈಗೊಂಡಿರುತ್ತಾರೆ. ಇವರ ಅಧ್ಯಯನದ ವರದಿಯಂತೆ ಓರಿಯನ್ ಬುಡಕಟ್ಟು ಜನರು ಮಾಂಸಾಹಾರಗಳಾಗಿದ್ದು ಹಂದಿ, ಇಲಿ,

ದನ ಮತ್ತು ವಿವಿಧ ಪಕ್ಷಿಗಳ ಮಾಂಸವನ್ನು ಸೇವಿಸುತ್ತಾರೆ. ಇವರು ಮಾಂಸಾಹಾರಿಗಳಾಗಿದ್ದರೂ ಮಾಂಸಾಹಾರವನ್ನು ತಿಂಗಳಿಗೆ 2–3 ಬಾರಿ ಮಾತ್ರ ಸೇವಿಸುವ ಪದ್ಧತಿಯನ್ನು ರೂಢಿಸಿಕೊಂಡಿದ್ದಾರೆ. ಇವರು ಸೇವಿಸುವ ದಿನನಿತ್ಯದ ಆಹಾರದಲ್ಲಿನ ಪೋಷಕಾಂಶಗಳ ಪ್ರಮಾಣದ ವಿಶ್ಲೇಷಣೆಯಂತೆ ಆಹಾರದಲ್ಲಿನ ಎಲ್ಲ ಪ್ರಮುಖ ಪೋಷಕಾಂಶಗಳು ಭಾರತೀಯರಿಗೆ ನಿಗದಿಪಡಿಸಿದ ಪ್ರಮಾಣಕ್ಕಿಂತ ಕಡಿಮೆ ಇರುವುದಾಗಿ ಕಂಡುಬಂದಿದೆ. ಅದರಲ್ಲಿಯೂ ಪ್ರೋಟೀನ್‌ಯುಕ್ತ ಆಹಾರದ ಸೇವನೆಯ ಪ್ರಮಾಣ ಕುಟುಂಬದ ಇತರ ಜನರಿಗಿಂತ ಹೆಣ್ಣುಮಕ್ಕಳಲ್ಲಿ ಕಡಿಮೆ ಇರುವುದು ತಿಳಿದುಬಂದಿದೆ.

ಬೇಳೆಕಾಳುಗಳು, ಹಾಲು ಮತ್ತು ಹಾಲಿನ ಪದಾರ್ಥಗಳು, ಹಸಿರು ತರಕಾರಿಗಳು, ಹಣ್ಣುಗಳು, ಎಣ್ಣೆ ಮತ್ತು ಎಣ್ಣೆ ಪದಾರ್ಥಗಳು, ಸಕ್ಕರೆ, ಬೆಲ್ಲವನ್ನು ಕೊರವ ಬುಡಕಟ್ಟು ಸಮುದಾದಯರು ಅಗತ್ಯಕ್ಕಿಂತ ಕಡಿಮೆ ಪ್ರಮಾಣದಲ್ಲಿ ಸೇವಿಸುತ್ತಿರುವುದರಿಂದ ಶಕ್ತಿ, ಪ್ರೋಟೀನ್, ಶರ್ಕರಪಿಷ್ಟ, ನಯಾಸಿನ್, ಕ್ಯಾಲ್ಸಿಯಂ, 'ಎ' ಜೀವಸತ್ವ ಮತ್ತು ರೈಬೋಫ್ಲೆವಿನ್ ಪೋಷಕಾಂಶಗಳನ್ನು ಅವಶ್ಯಕತೆಗೆ ತಕ್ಕಷ್ಟು ದೊರಕುತ್ತಿಲ್ಲವೆಂದು ಅರುಣಾ ಮತ್ತು ಮೇಘಾರವರು(2001)ಛತ್ತೀಸ್‌ಘಡದಲ್ಲಿ ಕೈಗೊಂಡ ಅಧ್ಯಯನದಿಂದ ತಿಳಿದುಬಂದಿದೆ. ಹಾಗೆಯೇ ಕಾಮಾರ ಬುಡಕಟ್ಟು ಜನರೂ ಸಹ ಹಾಲು, ಮಾಂಸಾಹಾರ, ಸಕ್ಕರೆ, ಕೊಬ್ಬು ಮತ್ತು ಎಣ್ಣೆ ಹಾಗೂ ತರಕಾರಿಗಳನ್ನು ಅಗತ್ಯ ಪ್ರಮಾಣಕ್ಕಿಂತ ಕಡಿಮೆ ಸೇವಿಸುತ್ತಿರುವುದಾಗಿ ನಿಶಾ ಮತ್ತಿತರರು(2001)ವರದಿ ಮಾಡಿದ್ದಾರೆ.

ಚಕ್ಮಾ(2009)ರವರು ಬೈಗಾ ಬುಡಕಟ್ಟು ಸಮುದಾಯಗಳ ಆಹಾರ ಪದ್ಧತಿ ತಿಳಿಯಲು 400 ಬೈಗಾ ಕುಟುಂಬಗಳ ಆಹಾರ ಕುರಿತಾದ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಿದ್ದಾರೆ. ಇವರ ಅಧ್ಯಯನದ ವರದಿಯಂತೆ ಬೈಗಾ ಬುಡಕಟ್ಟು ಸಮುದಾಯದವರ ಆಹಾರ ಪದ್ಧತಿಯಲ್ಲಿ ಏಕದಳ ಧಾನ್ಯಗಳು ಪ್ರಮುಖ ಭಾಗವಾಗಿದೆ. ಇವರು ಪ್ರತಿನಿತ್ಯ 478 ಗ್ರಾಂ ಏಕದಳ ಧಾನ್ಯಗಳ ಸೇವನೆ ಇರುವುದು ತಿಳಿದುಬಂದಿದೆ. ಇದು ಭಾರತೀಯರಿಗೆ ICMR ಸಿಫಾರಸ್ಸು ಮಾಡಿದ ಪ್ರಮಾಣಕ್ಕಿಂತ ಅಧಿಕವಾಗಿದೆ. ಅದರೆ ಈ ಧಾನ್ಯವನ್ನು ಬಿಟ್ಟು ಮಿಕ್ಕೆಲ್ಲ ಆಹಾರಪದಾರ್ಥಗಳ ಸೇವನೆಯ ಪ್ರಮಾನವು ಸಿಫಾರಸ್ಸು ಮಾಡಿದ ಪ್ರಮಾಣಕ್ಕಿಂತ ಕಡಿಮೆ ಇರುವುದಾಗಿ ಅಧ್ಯಯನಕಾರರು ವರದಿ ಮಾಡಿದ್ದಾರೆ.

ರಾಜಸ್ಥಾನದ ಬುಡಕಟ್ಟುಗಳಲ್ಲಿ 1–5 ವರ್ಷದ ಮಕ್ಕಳ ಸಾವಿನ ಸಂಖ್ಯೆಯು (155/1000)ಇತರ ಸಮುದಾಯಗಳಿಗಿಂತ ಹೆಚ್ಚಾಗಿರುವುದನ್ನು ರಾಷ್ಟ್ರೀಯ ಕೌಟುಂಬಿಕ ಹಾಗೂ ಆರೋಗ್ಯ ಸಮೀಕ್ಷೆ(1998–99) ವರದಿ ಮಾಡಿದೆ. ಸ್ವಾಶಕೋಶದ ಸೋಂಕುಗಳು, ಜ್ವರ, ವಾಂತಿ–ಭೇದಿ, ಮತ್ತು ರಕ್ತಹೀನತೆ ಇವೇ ಮಕ್ಕಳ ಸಾವಿಗೆ ಪ್ರಮುಖ ಕಾರಣಗಳಾಗಿವೆ. ಶೇಕಡ 80ರಷ್ಟು ಮಹಿಳೆಯರು ರಕ್ತಹೀನತೆಯಿಂದ ಬಳಲುತ್ತಿದ್ದು ಇದಕ್ಕೆ ಅಪೌಷ್ಟಿಕ ಆಹಾರ ಸೇವನೆ, ಆರೋಗ್ಯದ ಬಗ್ಗೆ ತಿಳುವಳಿಕೆ ಇಲ್ಲದಿರುವುದು, ವೈಯಕ್ತಿಕ ಹಾಗೂ ಪರಿಸರ ಸ್ವಚ್ಛತೆಗೆ ಗಮನ ಕೊಡದಿರುವುದು, ಅನಕ್ಷರತೆ, ಶುದ್ಧ ಕುಡಿಯುವ ನೀರಿನ ಲಭ್ಯತೆ ಇಲ್ಲದಿರುವುದು ಮುಂತಾದವುಗಳಿಂದ ಅನೇಕ ಆರೋಗ್ಯ ಸಮಸ್ಯೆಗಳಿಗೆ ಈಡಾಗುತ್ತಿದ್ದಾರೆ (NFHS, 1998).

ಸ್ವೇತಾ ಮತ್ತು ಕುಮಾರ್ ರವರು(2001)ಉತ್ತರಪ್ರದೇಶದ ನೈನಿತಾಲ್ ಜಿಲ್ಲೆಯ ಗುಡ್ಡಗಾಡು ಪ್ರದೇಶದಲ್ಲಿ ವಾಸಿಸುತ್ತಿರುವ ಬುಡಕಟ್ಟು ಮಹಿಳೆಯರ ಆರೋಗ್ಯ ಮತ್ತು ಪೌಷ್ಟಿಕತೆ ಕುರಿತಾದ ಅಧ್ಯಯನದ ವರದಿಯನ್ನು ಮಂಡಿಸಿರುತ್ತಾರೆ. ಇವರ ಅಧ್ಯಯನದ ವಿಶ್ಲೇಷಣೆಯಿಂದ ತಿಳಿದುಬಂದ ಮಾಹಿತಿಯಂತೆ ಮಹಿಳೆಯರ ರಕ್ತದಲ್ಲಿನ ಹಿಮೊಗ್ಲೋಬಿನ್‌ನ ಸರಾಸರಿ ಮಟ್ಟವು 10.44ಗ್ರಾಂ/ಡೆಸಿಲೀಟರ್ ಇದೆ. ಇವರಲ್ಲಿ 59.20ಪ್ರತಿಶತ ಮಹಿಳೆಯರು ಸೂಕ್ಷ್ಮ(mild)ಹಂತದ ರಕ್ತಹೀನತೆ, ಶೇಕಡ 26.30 ಪ್ರತಿಶತ ಮಹಿಳೆಯರು ಮಾಧ್ಯಮಿಕ ಹಂತದ ರಕ್ತಹೀನತೆಯಿಂದ ಬಳಲುತ್ತಿದ್ದು ಕೇವಲ 14.47 ಪ್ರತಿಶತ ಮಹಿಳೆಯರು ಆರೋಗ್ಯಕರ ಹಿಮೋಗ್ಲೋಬಿನ್ ಮಟ್ಟವನ್ನು ಹೊಂದಿದ್ದಾರೆ.

ಮಹಿಳೆಯರಲ್ಲಿ ಸಾಮಾನ್ಯವಾಗಿ ಕಂಡುಬರುವ ರಕ್ತಹೀನತೆ ಕುರಿತಾಗಿ ತಮಿಳುನಾಡಿನ ಕೊಯಮತ್ತೂರು ಜಿಲ್ಲೆಯ ಗ್ರಾಮೀಣ ಪ್ರದೇಶದಲ್ಲಿ ವಾಸಿಸುತ್ತಿರುವ ಮಹಿಳೆಯರ ಅಧ್ಯಯನವನ್ನು ಮೂರ್ತಿ ಮತ್ತಿತರರು(1989) ಅಭ್ಯಸಿಸಿದ್ದಾರೆ. ಇವರಲ್ಲಿ 23 ಪ್ರತಿಶತ ಮಹಿಳೆಯರು ತೀವ್ರಗತಿಯ ರಕ್ತಹೀನತೆ(<7ಗ್ರಾಂ/ಡೆಸಿ ಲೀಟರ್), 26.6 ಪ್ರತಿಶತ ಮಹಿಳೆಯರು ಮಾಧ್ಯಮಿಕ ಹಂತದ ರಕ್ತಹೀನತೆ (8.0–9.9ಗ್ರಾಂ/ಡೆಸಿ ಲೀಟರ್) ಹಾಗೂ 16.6 ಪ್ರತಿಶತ ಮಹಿಳೆಯರಲ್ಲಿ ನಮ್ರಗತಿಯ ರಕ್ತಹೀನತೆ(10.0–11.9/ಡೆಸಿ ಲೀಟರ್) ಇರುವುದನ್ನು ಗುರುತಿಸಿದ್ದಾರೆ. ಶೇಕಡ 87.50 ಬುಡಕಟ್ಟು ಮಹಿಳೆಯರಲ್ಲಿ ರಕ್ತಹೀನತೆಯಿರುವುದನ್ನು ಪ್ರಿಯಾಂಕ(2001)ಗುರುತಿಸಿದ್ದಾರೆ.

ಸೋಲಿಗ ಬುಡಕಟ್ಟು ಮಹಿಳೆಯರ ರಕ್ತದಲ್ಲಿನ ಹಿಮೊಗ್ಲೋಬಿನ್ ಮಟ್ಟವನ್ನು ಮಾರತೇಶ್(2002)ರವರು ವಿಶ್ಲೇಷಿಸಿದ್ದಾರೆ. ಇವರ ಅಧ್ಯಯನದ ವರದಿಯಂತೆ, 25 ಪ್ರತಿಶತ ಮಹಿಳೆಯರು ಅತೀ ಕಡಿಮೆ ಹಿಮೊಗ್ಲೋಬಿನ್ (10ಗ್ರಾ/ಡೆಸಿ ಲೀಟರ್ ಗಿಂತ ಕಡಿಮೆ), ಶೇಕಡ 55 ಮಹಿಳೆಯರು ಕಡಿಮೆ ಹಿಮೋಗ್ಲೋಬಿನ್ (10.0ರಂದ 11.9ರಷ್ಟು) ಹಾಗೂ ಶೇಕಡ 20 ಮಹಿಳೆಯರು ಆರೋಗ್ಯಕರ (>12ಗ್ರಾಂ/ಡೆಸಿ ಲೀಟರ್) ಹಿಮೊಗ್ಲೋಬಿನ್ ಹೊಂದಿದ್ದಾರೆ.

ಚರ್ಮವ್ಯಾದಿ ಮತ್ತು ಸೋಂಕು ರೋಗಗಳು ಇವು ಬುಡಕಟ್ಟು ಸಮುದಾಯಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಆರೋಗ್ಯ ಸಮಸ್ಯೆಗಳೆಂದು ತಿಲಕ್ ಮತ್ತು ಮಂಡಲ್(1998)ರವರು ಪಶ್ಚಿಮ ಭಾರತದ ಬುಡಕಟ್ಟುಗಳ ಆರೋಗ್ಯ ಕುರಿತಾದ ಅಧ್ಯಯನದಲ್ಲಿ ಮಂಡಿಸಿದ್ದಾರೆ.

ಅಪೌಷ್ಟಿಕ ಆಹಾರ ಸೇವನೆ, ಅನಾರೋಗ್ಯ, ಕೌಟುಂಬಿಕ ಆಹಾರ ಪದ್ಧತಿ, ಅಸುಚಿತ್ವ ಮುಂತಾದವುಗಳಿಂದಾಗಿ ರಾಜಸ್ಥಾನದ ಬುಡಕಟ್ಟು ಮಹಿಳೆಯರು ಪದೇ ಪದೇ ವಾಂತಿಭೇದಿ, ಸೋಂಕುರೋಗಗಳಿಗೆ ಈಡಾಗುತ್ತಿದ್ದಾರೆ (ನಾಗ್ಡಾ, 1999).

ಬಾಯಿಹುಣ್ಣು, ಅಗ್ರ, ಇರುಳು ಕುರುಡು, ಫೋಟೋಫೋಬಿಯಾ, ನ್ಯೂನ್ಯಪೋಷಣೆ, ಚರ್ಮವ್ಯಾಧಿ, ಹುಳುಕುಹಲ್ಲು, ಮಲೇರಿಯಾ ಮುಂತಾದವುಗಳು ಆಂಧ್ರಪ್ರದೇಶದ ಬುಡಕಟ್ಟು

ಜನರನ್ನು ಕಾಡುವ ಆರೋಗ್ಯ ಮತ್ತು ಅಪೌಷ್ಟಿಕತೆಯ ಸಮಸ್ಯೆಗಳಾಗಿವೆ (NIN,1973, ಪಿಂಗಾಲೆ, 1973).

ಒರಿಸ್ಸಾದ ಕೊಂಡ ಬುಡಕಟ್ಟುಗಳಲ್ಲಿ ಶೇಕಡ 19.58 ರಷ್ಟು ಉದರ ಸಂಬಂಧಿ ವ್ಯಾಧಿ, ಗಂಟಲು ಮತ್ತು ಶ್ವಾಶಕೋಶದ ಸೋಂಕುಗಳು (18.36), ಚರ್ಮವ್ಯಾಧಿ (16.99%), ಮಲ್ಛೆರಿಯಾ (10.81%), ಮೈಕೈನೋವು (03.69%) ಮುಂತದವುಗಳಿಂದ ಬಳಲುತ್ತಿರುವುದನ್ನು ಶರ್ಮಾ (1971) ರವರು ಆರೋಗ್ಯ ಸ್ಥಿತಿಯ ಅಧ್ಯಯನದ ವರದಿಯಲ್ಲಿ ಮಂಡಿಸಿದ್ದಾರೆ.

ವಾಂತಿ–ಬೇಧಿ, ಜಂತುಹುಳುವಿನ ಬಾಧೆ, ಮಲೇರಿಯಾ, ಟೈಫಾಯಿಡ್, ಸಿಕೆಲ್‌ಸೆಲ್ ಅನೀಮಿಯಾ ಹಾಗೂ ಆನುವಂಶಿಕ ಕಾಯಿಲೆಗಳಿಂದ ಒರಿಸ್ಸಾದ ಕುಟಿಯಾ ಮತ್ತು ಕೊಂಡ ಬುಡಕಟ್ಟುಗಳು ಹೆಚ್ಚಾಗಿ ಬಳಲುತ್ತಿದ್ದಾರೆ ಎಂದು ಅಲಿ (1979)ಯವರು ವರದಿ ಮಾಡಿದ್ದಾರೆ.

ಅಸ್ಸಾಮ್‌ನ ಅಮೋರ್ ಬೆಟ್ಟ ಪ್ರದೇಶದಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳಲ್ಲಿ, ಅಯೋಡಿನ್ ಕೊರತೆಯಿಂದ ಉಂಟಾಗುವ ಗಳಗಂಡವು ಶೇಕಡ 13 ರಷ್ಟು ಪದಮ್ ಬುಡಕಟ್ಟುಗಳಲ್ಲಿ ಶೇಕಡ 13.1ರಷ್ಟು ಹಾಗೂ ಮಿನಿಯಾಂಗ್ ಬುಡಕಟ್ಟುಗಳಲ್ಲಿ ಶೇಕಡ 9.1ರಷ್ಟು ಕಂಡುಬಂದಿದೆ(ಸೇನ್‌ಗುಪ್ತಾ, 1960). ಮೊಂಪಾ ಬುಡಕಟ್ಟು ಜನರಲ್ಲಿ ಶೇಕಡ 3.6ರಷ್ಟು ಗಳಗಂಡ ಇರುವುದಾಗಿ NIN,1969 ರಲ್ಲಿ ವರದಿ ಮಾಡಿದೆ.

ಗೋರೆ ಮತ್ತಿತರರು(1977) ಮಧ್ಯ ಪ್ರದೇಶದಲ್ಲಿ ವಾಸಿಸುತ್ತಿರುವ ಸುಮಾರು 4000 ಬುಡಕಟ್ಟು ಜನರ ಆರೋಗ್ಯ ಸ್ಥಿತಿಯ ಕುರಿತ ಅಧ್ಯಯನದ ವರದಿಯಲ್ಲಿ ಮಂಡಿಸಿದಂತೆ ಇವರಲ್ಲಿ 23ಪ್ರತಿಶತ ಜನರು ಯಾವುದೇ ಕಾಯಿಲೆ ಇಲ್ಲದೆ ಆರೋಗ್ಯದಿಂದ ಇರುವುದನ್ನು ತಿಳಿಸುತ್ತದೆ. ಆದರೆ, ಶೇಕಡ 33ರಷ್ಟು ಜನರು ಯಾವುದಾದರೊಂದು ಆರೋಗ್ಯ ಸಮಸ್ಯೆಯಿಂದ ಬಳಲುತ್ತಿರುವುದನ್ನು ವರದಿ ಮಾಡಿದ್ದಾರೆ ಮಲೇರಿಯಾ ಇವರಲ್ಲಿ ಸಾಮಾನ್ಯವಾಗಿ ಕಂಡುಬರುವ ಆರೋಗ್ಯ ಸಮಸ್ಯೆ. ಅಲ್ಲದೆ ಶೇಕಡ 17 ಜನರಲ್ಲಿ ಹುಳುಕು ಹಲ್ಲು, ಶೇಕಡ 11 ಜನರಲಿರಕ್ತಹೀನತೆ, ಶೇಕಡ 5 ಜನರು ಜೀವಸತ್ವಗಳ ಕೊರತೆಯಿಂದ ಬಲಲುತ್ತಿದ್ದಾರೆ.

ಆಂದ್ರ ಪ್ರದೇಶದ ಗೋದಾವರಿ ಜಿಲ್ಲೆಯಲ್ಲಿ ವಸಿಸುತ್ತಿರುವ ಬುಡಕಟ್ಟು ಜನರು ಶ್ವಾಶಕೋಶದ ಸೋಂಕು, ಜ್ವರ, ಉದರಬಾಧೆ, ಮೈಕೈನೋವುಗಳು ಇವು ಸಾಮಾನ್ಯವಾಗಿ ಕಂಡುಬರುವ ಆರೋಗ್ಯ ಸಮಸ್ಯೆಗಳಾಗಿವೆ. ಇವರಲ್ಲಿ ಶೇಕಡ 9.7 ರಷ್ಟು ಜನರು ರಕ್ತಹೀನತೆ ಮತ್ತು ಶೇಕಡ 0.9ರಷ್ಟು ಮಕ್ಕಳು ಇರುಳುಗುರುಡಿನಿಂದ ಬಳಲುತ್ತಿದ್ದಾರೆ (ರಾಜ್ಯಲಕ್ಷ್ಮಿ, 1999).

# ಅಧ್ಯಾಯ 3. ಸಂಶೋಧನಾ ವಿಧಾನ

ಉಗಮದಿಂದಲೂ ಮನುಷ್ಯ ತನ್ನ ಆಹಾರಕ್ಕಾಗಿ ಜೈವಿಕ ಸಂಪತ್ತಿನ ಮೇಲೆ ಅವಲಂಬಿತನಾಗಿದ್ದಾನೆ. ಆಧುನಿಕ ನಾಗರೀಕತೆಯೂ ಜೀವರಾಶಿಯನ್ನು ಆಧರಿಸಿದ್ದಾಗಿದೆ. ಆದ್ದರಿಂದ ಜೈವಿಕ ಜಗತ್ತಿನೊಂದಿಗೆ ಅವಿನಾಭಾವ ಸಂಬಂಧ ಬೆಳೆಸಿಕೊಂಡು ಬಂದಿದ್ದಾನೆ. ಇಂತಹ ಒಂದು ಅನ್ಯೋನ್ಯ ಸಂಬಂಧವನ್ನು ಇಂದಿಗೂ ಸಹ ನಿಸರ್ಗಕ್ಕೆ ಹತ್ತಿರವಾಗಿ ಬದುಕುತ್ತಿರುವ ಬುಡಕಟ್ಟು ಕುಟುಂಬಗಳಲ್ಲಿ ಕಾಣಬಹುದಾಗಿದೆ. ನಿಸರ್ಗದ ಮಡಿಲಲ್ಲಿ ಹುಟ್ಟಿ ನಿಸರ್ಗದ ಜತೆ ಆಡಿ ಬೆಳೆದು ನಿಸರ್ಗವನ್ನೇ ಪೂಜಿಸಿ ಬದುಕುತ್ತಿರುವ ಬುಡಕಟ್ಟು ಸಮುದಾಯವು ಜೀವ ಸಂಪತ್ತಿನ ಬಳಕೆ ಮತ್ತು ಸಂರಕ್ಷಣೆ ವಿಧಾನಗಳನ್ನು ಕಂಡುಕೊಂಡಿದೆ. ಆಹಾರ ಭದ್ರತೆಯ ನಿರಂತರತೆಗಾಗಿಯೇ ಇಂದಿನವರೆಗೂ ಎಲ್ಲಾ ಜೀವರಾಶಿಯ ಹುಡುಕಾಟ ತಮ್ಮೊಳಗಿನ ಪರಿಸರ ಪರಿಸ್ಥಿತಿಯಲ್ಲಿ ನಡೆದೇ ಇದೆ. ಅದು ಮಾನವ ಸಮಾಜಕ್ಕೂ ಹೊರತಲ್ಲ. ಹಾಗಾಗಿ ನೈಸರ್ಗಿಕ ಸಮಾಜದಿಂದ ಸಮಕಾಲೀನ ನಾಗರೀಕ ಜಗತ್ತಿನ ನಡೆಗಳೆಡೆಗಿನ ಹುಡುಕಾಟ ಒಂದಷ್ಟು ನಿರುಮ್ಮಳ ಸ್ಥಿತಿಯ ವಿವರ ಕೊಡುವ ಸಾಧ್ಯತೆಗಳಿವೆ. ಈ ಹಿನ್ನೆಲೆಯೇ ಅರಣ್ಯವಾಸಿ ಬುಡಕಟ್ಟುಗಳ ಪರಿಸರದಿಂದ ನಮ್ಮ ದೇಶ ಸದ್ಯಕ್ಕೆ ಸಾಧ್ಯ ಮಾಡಿರುವ ಆಯಾಮಗಳ ಅಧ್ಯಯನಕ್ಕೆ ಅವಕಾಶ ನೀಡಿದೆ.

ನಿಸರ್ಗ ಜೀವನದ ಜನರು ಕಂಡುಕೊಂಡ ವಿವಿಧ ಆಯಾಮಗಳ ಕುರಿತು ಅಭ್ಯಸಿಸಲು ಕರ್ನಾಟಕದಲ್ಲಿ ವಾಸಿಸುತ್ತಿರುವ ಬುಡಕಟ್ಟು ಜನರ ಜೀವನ ಶೈಲಿ, ಸಾಮಾಜಿಕ, ಆರ್ಥಿಕ, ಪೌಷ್ಟಿಕ ಸ್ಥಿತಿಗತಿ, ಆಹಾರ ಬಗೆಗಿನ ಪಾರಂಪರಿಕ ಜ್ಞಾನ, ಆಹಾರದ ಭದ್ರತೆಗಾಗಿ ಅವರು ರೂಢಿಸಿಕೊಂಡು ಬಂದಿರುವ ಸಂಪ್ರದಾಯಗಳು, ಆಚಾರ ವಿಚಾರಗಳು ಆಚರಣೆಗಳು ಅನುಸರಿಸುತ್ತಿರುವ ವಿಧಾನಗಳು ಮುಂತಾದುವುಗಳನ್ನು ಸಂದರ್ಶನ, ಗುಂಪು ಚರ್ಚೆ, ಅಭ್ಯಾಸ ಸೂಚಿ ಮಾಗದರ್ಶಿಯ ಮೂಲಕ ಸಂಗ್ರಹಿಸಿದೆ. ಈ ಅಧ್ಯಾಯದಲ್ಲಿ ಅಧ್ಯಯನದ ವಿಧಾನಗಳನ್ನು ವರ್ಗೀಕರಿಸಿ ಸಮಕಾಲೀನ ಆಹಾರ ಭದ್ರತೆಯ ಆಯಾಮಗಳೊಂದಿಗೆ ಸಮೀಕರಿಸಿ ಅವುಗಳ ವಿವರಗಳನ್ನು ಕೊಟ್ಟಿದೆ.

3.1 ಅಧ್ಯಯನ ಪ್ರದೇಶ

3.2 ಬುಡಕಟ್ಟು ಸಮುದಾಯಗಳ ಆಯ್ಕೆ

3.3 ಅಧ್ಯಯನದ ಮಾರ್ಗಸೂಚಿ

3.4 ಆಹಾರ ಭದ್ರತೆಯ ಆಯಾಮಗಳು

3.4.1 ಆಹಾರ ಭದ್ರತೆಯ ನಿಸರ್ಗ ದೃಷ್ಟಿ

3.4.2 ಆಹಾರ ಭದ್ರತೆಯ ಪಾರಂಪರಿಕ ದೃಷ್ಟಿ

3.4.3 ಆಹಾರ ಭದ್ರತೆಯ ಲೋಕ ದೃಷ್ಟಿ

3.5 ಸಮಕಾಲೀನ ಆಹಾರ ಭದ್ರತೆ

3.6 ಮಾಹಿತಿ ಕ್ರೋಢೀಕರಣ ಮತ್ತು ವಿಶ್ಲೇಷಣೆ

### 3.1 ಅಧ್ಯಯನ ಪ್ರದೇಶ

ನಾಗರಿಕ ಸಮಾಜದಿಂದ ದೂರವೇ ಉಳಿದು ಅರಣ್ಯಕ್ಕೆ ಹತ್ತಿರವಾಗಿ ಬದುಕುತ್ತಿರುವ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಹೆಚ್ಚಾಗಿ ವಾಸಿಸುತ್ತಿರುವ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಳ್ಳಲಾಯಿತು.




ಚಿತ್ರ 3.1 ಕರ್ನಾಟಕದಲ್ಲಿ ಅಧ್ಯಯನ ಪ್ರದೇಶ

### 3.1.1 ಮೈಸೂರು ಜಿಲ್ಲೆಯ ಮಾಹಿತಿ

**ಭೌಗೋಳಿಕ ವಿವರಗಳು :**

ಸಾಂಸ್ಕೃತಿಕ ನಗರಿ ಎಂಬ ಹಿರಿಮೆಗೆ ಪಾತ್ರವಾದ ಮೈಸೂರು ದಕ್ಷಿಣ ಕರ್ನಾಟಕದ ಪ್ರಮುಖ ನಗರಗಳಲ್ಲೊಂದು. ಮೈಸೂರು ಜಿಲ್ಲೆ $11^{0}30^{\backslash}$ ನಿಂದ $12^{0}50^{\backslash}$ ಉತ್ತರ ಅಕ್ಷಾಂಶ ಹಾಗೂ $75^{0}45^{\backslash}$ ರಿಂದ $77^{0}45^{\backslash}$ ಪೂರ್ವ ರೇಖಾಂಶದಲ್ಲಿ ಸ್ಥಿತವಾಗಿದ್ದು, ಕರ್ನಾಟಕದ ದಕ್ಷಿಣ ಭಾಗದಲ್ಲಿದೆ. ಮೈಸೂರು ಜಿಲ್ಲೆಯು ಸಮುದ್ರ ಮಟ್ಟದಿಂದ 610 ಮೀಟರ್ ಎತ್ತರದಲ್ಲಿದೆ. ದಕ್ಕನ್ ಪ್ರಸ್ಥಭೂಮಿಯ ವಿಸ್ತರಣೆಯು ಈ ಜಿಲ್ಲೆಯನ್ನು ಒಳಗೊಂಡಿದೆ. ಈ ಜಿಲ್ಲೆಯನ್ನು ಭೌತಿಕ ಲಕ್ಷಣಗಳಿಗೆ ಅನುಗುಣವಾಗಿ ಮೈದಾನ ಪ್ರದೇಶ, ಅರೆಮಲೆನಾಡು ಪ್ರದೇಶ ಎಂದು ವಿಂಗಡಿಸಲಾಗಿದೆ. ಜಿಲ್ಲೆಯು ಪೂರ್ವಕ್ಕೆ ತಮಿಳುನಾಡು, ಪಶ್ಚಿಮಕ್ಕೆ ಕೊಡಗು ಜಿಲ್ಲೆ, ಉತ್ತರಕ್ಕೆ ಮಂಡ್ಯ ಜಿಲ್ಲೆ ಹಾಗೂ ದಕ್ಷಿಣೋತ್ತರಕ್ಕೆ ಹಾಸನ ಜಿಲ್ಲೆಗಳಿಂದ ಸುತ್ತುವರೆದಿದೆ. ಜಿಲ್ಲೆಯ ಒಟ್ಟು ವಿಸ್ತಾರವು 6854 ಚದರ ಕಿಲೋಮೀಟರ್ ಇದ್ದು, ಇದು ರಾಜ್ಯದ ಶೇಕಡ 3.57ರಷ್ಟು ಭೌಗೋಳಿಕ ಪ್ರದೇಶವನ್ನು ಹೊಂದಿದೆ.

ಜಿಲ್ಲೆಯನ್ನು ಆಡಳಿತಾತ್ಮಕವಾಗಿ ಒಂದು ಕಂದಾಯ ಉಪವಿಭಾಗ, ಏಳು ತಾಲ್ಲೂಕುಗಳು (ಹೆಗ್ಗಡದೇವನಕೋಟೆ, ಹುಣಸೂರು, ಕೆ.ಆರ್.ನಗರ, ಮೈಸೂರು, ನಂಜನಗೂಡು, ಪಿರಿಯಾಪಟ್ಟಣ, ಮತ್ತು ಟಿ. ನರಸೀಪುರ) ಮತ್ತು ಮೂವತ್ತಮೂರು ಹೋಬಳಿಗಳನ್ನಾಗಿ ವಿಂಗಡಿಸಲಾಗಿದೆ. ಚಿತ್ರ 3.2 ತಾಲ್ಲೂಕುಗಳನ್ನು ಒಳಗೊಂಡ ನಕ್ಷೆಯನ್ನು ಹೊಂದಿದೆ.




**ಚಿತ್ರ 3.2 ಅಧ್ಯಯನ ತಾಲ್ಲೂಕನ್ನೊಳಗೊಂಡ ಮೈಸೂರು ಜಿಲ್ಲೆಯ ನಕ್ಷೆ**

**ಜನಸಂಖ್ಯೆ ವಿವರಗಳು :**

ವಿಸ್ತೀರ್ಣದಲ್ಲಿ ಆರನೇ ಸ್ಥಾನ ಪಡೆದಿರುವ ಜಿಲ್ಲೆಯ ಜನಸಂಖ್ಯೆಯ ಪ್ರಮಾಣ 2001ರ ಜನಗಣತಿಯಂತೆ 2641 ದಶಲಕ್ಷ ಇದೆ. ಇದರಲ್ಲಿ ಶೇಕಡ 50.91ರಷ್ಟು ಪುರುಷರು ಮತ್ತು ಶೇಕಡ 49.09ರಷ್ಟು ಮಹಿಳೆಯರಿದ್ದಾರೆ. ಜಿಲ್ಲೆಯ ಬಹಳಷ್ಟು ಜನ ಅಂದರೆ ಶೇಕಡ 62.81ರಷ್ಟು ಜನರು ಹಳ್ಳಿಗಳಲ್ಲಿ ಮತ್ತು ಶೇಕಡ 37.19ರಷ್ಟು ಜನರು ನಗರ ಪ್ರದೇಶಗಳಲ್ಲಿ ವಾಸವಾಗಿದ್ದಾರೆ. ನಗರ ಪ್ರದೇಶದ ಸಾಕ್ಷರತೆ ಪ್ರಮಾಣ ಶೇಕಡ 82.8 ಇದ್ದರೆ ಗ್ರಾಮೀಣ ಪ್ರದೇಶದಲ್ಲಿ ಸಾಕ್ಷರರ ಪ್ರಮಾಣವು ಶೇಕಡ 51.80 ರಷ್ಟಿದೆ. ಜಿಲ್ಲೆಯಲ್ಲಿ ವಾಸಿಸುವ ಒಟ್ಟು ಜನಸಂಖ್ಯೆಯ ಶೇಕಡ 87.44 ಜನರು ಹಿಂದು ಜನಾಂಗದವರು ಮತ್ತು ಶೇಕಡ 8.87 ಜನರು ಮುಸ್ಲೀಮರಿದ್ದಾರೆ. ಕ್ರಿಶ್ಚಿಯನ್ನರು, ಮತ್ತು ಬುದ್ದರು ಈ ಜಿಲ್ಲೆಯಲ್ಲಿ ವಾಸಿಸುವ ಇತರ ಜನಾಂಗಗಳಾಗಿವೆ.

ಜೇನುಕುರುಬ, ಬೆಟ್ಟ ಕುರುಬ, ಸೋಲಿಗರು, ಪನಿಯ, ಪಂಜಾರಿ ಮತ್ತು ಯರವ ಜಿಲ್ಲೆಯಲ್ಲಿ ವಾಸಿಸುವ ಬುಡಕಟ್ಟುಗಳಾಗಿವೆ. ಇವರು ಜಿಲ್ಲೆಯ ಹೆಗ್ಗಡದೇವನಕೋಟೆ, ಹುನಸೂರು ತಾಲ್ಲೂಕುಗಳಲ್ಲಿ ಮತ್ತು ನಾಗರಹೊಳೆ ರಾಷ್ಟ್ರೀಯ ಉದ್ಯಾನವನದ ಸುತ್ತಮುತ್ತಲ ಪ್ರದೇಶದಲ್ಲಿ ಹೆಚ್ಚಾಗಿ ವಾಸವಾಗಿದ್ದಾರೆ.

**ಹವಾಮಾನ ಹಾಗೂ ಕೃಷಿ :**

ತಂಪಾದ ಹಿತಕರ ಹಾಗೂ ಉಲ್ಲಾಸಕರ ಹವಾಮಾನ ಈ ಜಿಲ್ಲೆಯ ಇನ್ನೊಂದು ವೈಶಿಷ್ಟತೆ ಎನ್ನಬಹುದು. ಏಕೆಂದರೆ, ಇಲ್ಲಿನ ತಾಪಮಾನವು ಎಲ್ಲ ಕಾಲಗಳಲ್ಲಿ ಸಹ ಅಷ್ಟೇನು ವ್ಯತ್ಯಾಸ ಕಾಣುವುದಿಲ್ಲ. ಜಿಲ್ಲೆಯ ವರ್ಷದ ಸರಾಸರಿ ಕನಿಷ್ಠ ತಾಪಮಾನ $20^0$ ಸೆಲ್ಸಿಯಸ್ ಮತ್ತು ಗರಿಷ್ಠ ತಾಪಮಾನ $30^0$ ಸೆಲ್ಸಿಯಸ್ ಇರುತ್ತದೆ.

ಜಿಲ್ಲೆಯು ಒಟ್ಟು 6,76,382 ಹೆಕ್ಟರ್ ಭೂಪ್ರದೇಶವನ್ನು ಒಳಗೊಂಡಿದ್ದು ಇದರಲ್ಲಿ 62,851 ಹೆಕ್ಟರ್ ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶವಿದೆ. ಅದಲ್ಲದೆ 4,86,410 ಹೆಕ್ಟರ್ ಪ್ರದೇಶವು ಸಾಗುವಳಿಗೆ ಲಭ್ಯವಿದೆ. ಜಿಲ್ಲೆಯ ಜೀವನಾಡಿ ಕಾವೇರಿ ನದಿಯು ಇಲ್ಲಿನ ಪ್ರಮುಖ ನದಿ. ಅಭಿವೃದ್ಧಿ ಪಥದತ್ತ ಸಾಗುತ್ತಿರುವ ಜಿಲ್ಲೆಯು ಅರಣ್ಯ, ರೇಷ್ಮೆ ಹಾಗೂ ನೀರಾವರಿ ಸೌಲಭ್ಯಗಳಿಂದ ಸಂಪತ್ಭರಿತವಾಗಿದೆ.

ದಕ್ಷಿಣ ಒಣ ವಲಯ ಹಾಗೂ ದಕ್ಷಿಣ ಸ್ಥಿತ್ಯಂತರ ವಲಯಗಳನ್ನು ಒಳಗೊಂಡಿರುವ ಮೈಸೂರು ಜಿಲ್ಲೆಯ ಹವಾಮಾನವು ಭತ್ತ, ರಾಗಿ, ಬೇಳೆಕಾಳುಗಳು, ಕಬ್ಬು ಹಾಗೂ ತಂಬಾಕು ಬೆಳೆಯಲು ಸೂಕ್ತವಾಗಿದೆ. ಜಿಲ್ಲೆಯ ಭೂ ಪ್ರದೇಶದ ಹೆಚ್ಚಿನ ಭಾಗವು ಫಲವತ್ತಾದ ಕೆಂಪು ಜೇಡಿಮಣ್ಣನ್ನು ಹೊಂದಿದೆ. ಜಿಲ್ಲೆಯ ವಾರ್ಷಿಕ ಸರಾಸರಿ ಮಳೆಯ ಪ್ರಮಾಣ 782 ಮಿಲಿ ಮೀಟರ್ ಇದ್ದು, ಒಣ ವಲಯದಲ್ಲಿ 670 ರಿಂದ 888.6 ಮಿಲಿ ಮೀಟರ್ ಹಾಗೂ ಸ್ಥಿತ್ಯಂತರ ವಲಯ ಪ್ರದೇಶದಲ್ಲಿ 612 ರಿಂದ 1054 ಮಿಲಿಮೀಟರ್ ಮಳೆ ಬೀಳುತ್ತದೆ.

ಕೃಷಿ ಜಿಲ್ಲೆಯ ಪ್ರಮುಖ ಉದ್ಯೋಗವಾಗಿದೆ. ಹತ್ತಿ, ಬೇಳೆಕಾಳುಗಳು, ನೆಲಗಡಲೆ, ಜೋಳ, ಮುಸುಕಿನ ಜೋಳ, ರಾಗಿ, ಭತ್ತ, ಕಬ್ಬು ಮತ್ತು ತೊಗರಿ ಇಲ್ಲಿನ ಪ್ರಮುಖ ಬೆಳೆಗಳಾಗಿವೆ. ಅಲ್ಲದೆ, ತೋಟಗಾರಿಕೆ ಬೆಳೆಗಳು ಸಹ ಜಿಲ್ಲೆಯ ಆರ್ಥಿಕತೆಯಲ್ಲಿ ಮುಖ್ಯವಾದ ಪಾಲನ್ನು ಹೊಂದಿದೆ.

**ನದಿಗಳು :**

ಕಾವೇರಿ ನದಿಯು ಮೈಸೂರು ಜಿಲ್ಲೆಯ ಜೀವನದಿ. ಇದು ಜಿಲ್ಲೆಯಲ್ಲಿ ಪಶ್ಚಿಮದಿಂದ ಪೂರ್ವಕ್ಕೆ ಹರಿಯುತ್ತದೆ. ಕಪಿಲಾ(ಕಬಿನಿ), ಲಕ್ಷ್ಮಣತೀರ್ಥ ನದಿಗಳು ಕಾವೇರಿ ನದಿಯ ಉಪನದಿಗಳಾಗಿವೆ. ಈ ನದಿಗಳು ಕೆಲವು ಪಟ್ಟಣಗಳಿಗೆ, ಹಳ್ಳಿಗಳಿಗೆ ಕುಡಿಯುವ ನೀರಿನ ಆಸರೆಯನ್ನು ಒದಗಿಸಿದ್ದು ಕೃಷಿ ಚಟುವಟಿಕೆಗಳ ಅಭಿವೃದ್ಧಿಗೆ ಸಹಾಯಕವಾಗಿವೆ.

**ನೆಲ ಮತ್ತು ಖನಿಜ ಸಂಪತ್ತು :**

ಕೆಂಪು ಮಣ್ಣು, ಕಲ್ಲು ಮಿಶ್ರಿತ ಕೆಂಪು ಗೋಡು ಮಣ್ಣು, ಕೆಂಪು ಗೋಡು ಮಣ್ಣು, ಕಲ್ಲು ಮಿಶ್ರಿತ ಕೆಂಪು ಜೇಡಿ ಮಣ್ಣು, ಕೆಂಪು ಜೇಡಿ ಮಣ್ಣು, ಲ್ಯಾಟರೈಟ್ ಮಣ್ಣು, ಆಳವಾದ ಕಪ್ಪು ಮಣ್ಣು, ಮೆಕ್ಕಲು ಮಣ್ಣು, ಕ್ಷಾರೀಯ ಮೆಕ್ಕಲು ಮಣ್ಣು ಮುಂತದವು ಸಾಮಾನ್ಯವಾಗಿ ಕಂಡುಬರುತ್ತವೆ. ಈ ಜಿಲ್ಲೆಯ ಸಾಮನ್ಯ ಖನಿಜಗಳೆಂದರೆ, ಕಯೋನೈಟ್, ಸಿಲಿಮೊನೈಟ್, ಬೆಣಚುಕಲ್ಲು, ಕ್ರೋಮೈಟ್, ಬಳಪ ಕೊರಂಡಂ, ಗ್ರಾಫೈಟ್, ಮುಂತಾದವುಗಳು. ಚಿತ್ರ 3.3 ರಲ್ಲಿ ಭೂ ಹರಹು ನೋಡಬಹುದು.

**ಜೀವಿ ಸಂಕುಲ/ ಜೀವ ಹರಹು :**

ಜಿಲ್ಲೆಯ ಉತ್ತರ ಭಾಗವನ್ನು ಬಿಟ್ಟು ಮಿಕ್ಕೆಲ್ಲ ಪ್ರದೇಶವು ಪಶ್ಚಿಮ ಘಟ್ಟದಿಂದ ಸುತ್ತುವರೆದಿದ್ದು ಈ ಬೆಟ್ಟಪ್ರದೇಶವು ಸಮುದ್ರದ ಮಟ್ಟದಿಂದ ಸುಮಾರು 1200 ಮೀಟರ್ ಎತ್ತರದಲ್ಲಿವೆ. ಜಿಲ್ಲೆಯ ದಕ್ಷಿಣದ ಗಡಿ ಪ್ರದೇಶದಿಂದ ಆರಂಭಗೊಂಡ ನೀಲಗಿರಿ ಬೆಟ್ಟಗಳು ಪಶ್ಚಿಮೋತ್ತರ ಹಾಗೂ ಪೂರ್ವೋತ್ತರ ದಿಕ್ಕಿನತ್ತ ತನ್ನ ವಿಸ್ತಾರವನ್ನು ಚಾಚಿಕೊಂಡಿದೆ.

**ಸಸ್ಯವರ್ಗ:** ಜಿಲ್ಲೆಯ ಒಟ್ಟು ಭೂ ಪ್ರದೇಶದ ಶೇಕಡ 34.52 ಭಾಗವು ಅಂದರೆ 4,12,645 ಚದರ ಕಿಲೋಮೀಟರ್ ಅರಣ್ಯ ಪ್ರದೇಶವನ್ನೊಳಗೊಂಡಿದೆ. ಇದರಲ್ಲಿ 38,756 ಚದರ ಕಿಲೋ ಮೀಟರ್ ಸಂರಕ್ಷಿತ ಅರಣ್ಯ ಪ್ರದೇಶವಾಗಿದೆ. ಇಲ್ಲಿನ ಅರಣ್ಯ ಪ್ರದೇಶವನ್ನು ಮುಖ್ಯವಾಗಿ ತೇವಾಂಶಭರಿತ ಎಲೆ ಉದುರುವ(moist deciduous) ಕಾಡು ಹಾಗೂ ಒಣ ಎಲೆ ಉದುರುವ ಕಾಡು ಎಂದು ವಿಂಗಡಿಸಲಾಗಿದೆ. ಕರ್ನಾಟಕ ರಾಜ್ಯದ ಅರಣ್ಯ ಸಂಪತ್ಭರಿತ ಜಿಲ್ಲೆಗಳಲ್ಲಿ ಮೂರನೆ ಸ್ಥಾನ ಮೈಸೂರು ಜಿಲ್ಲೆಯದು. ವೈವಿಧ್ಯಮಯ ಪ್ರಾಕೃತಿಕ ಪರಿಸರವನ್ನು ಹೊಂದಿ ಅನೇಕ ಬಗೆಯ ಸಸ್ಯವರ್ಗವನ್ನು ಪೋಷಿಸುತ್ತ ಬಂದಿರುವ ಇಲ್ಲಿ ನಂದಿ, ಸಾಗವಾನಿ, ಮತ್ತಿ, ಮುಂತಾದವುಗಳು ಜಿಲ್ಲೆಯ ತೇವಾಂಶಭರಿತ ಅರಣ್ಯ ಪ್ರದೇಶದಲ್ಲಿ ಪ್ರಮುಖವಾಗಿ ಕಂಡುಬರುವ ಮರಗಳು. ಇದಲ್ಲದೆ, ಮೈಸೂರು ಜಿಲ್ಲೆಯಲ್ಲಿ 170 ಕುಟುಂಬಗಳಿಗೆ ಸೇರಿದ 1601 ಪ್ರಭೇದದ ಆವೃತ ಬೀಜ ಸಸ್ಯಗಳು ಕಂಡುಬರುತ್ತವೆ. ಚಿತ್ರ 3.4 ರಲ್ಲಿ ಅರಣ್ಯ ಪ್ರದೇಶದ ಮಾದರಿಯನ್ನು ಕಾಣಬಹುದು

**ಪ್ರಾಣಿ ಸಂಕುಲ:** ಅರಣ್ಯ ಸಂಪತ್ತಿನಿಂದ ಸಮೃದ್ಧವಾಗಿರುವ ಮೈಸೂರು ಜಿಲ್ಲೆಯು ವಿವಿಧ ವನ್ಯ ಪ್ರಾಣಿಗಳಿಗೆ ನೆಲೆಯಾಗಿದೆ. ಸಾಂಬರ್ ಮತ್ತು ಜಿಂಕೆಗಳು ಮೈಸೂರಿನ ತೇವಾಂಶಭರಿತ ಅರಣ್ಯ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವ ವನ್ಯಜೀವಿಗಳು. ಇವುಗಳಲ್ಲದೆ, ಕಾಡು ಬೆಕ್ಕು, ಪುನುಗಿನ ಬೆಕ್ಕು, ಕಾಡು ನಾಯಿ ಸೀಳು ನಾಯಿ ಮುಂಗಲಿ, ಕೋತಿಗಳು, ಕೆಂದಳಿಲು, ನಾಮದ ಅಳಿಲು ಇಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಾಣಿಗಳು.

**ಸಾಂಸ್ಕೃತಿಕ ವಿವರಗಳು :**

ಹಿಂದುಗಳ ಪುರಾಣ ಅಥವಾ ಸಾಹಿತ್ಯದಿಂದ ತಿಳಿದುಬಂದ ಸಂಗತಿಯಂತೆ ಈಗಿನ ಮೈಸೂರನ್ನು ಮಹಿಷಾಸುರ ಎಂಬ ಅಸುರ ಆಳುತ್ತಿದ್ದುದರಿಂದ. ಇದಕ್ಕೆ 'ಮಹಿಷರು' ಎಂಬ ಹೆಸರಿರುವುದನ್ನು ಉಲ್ಲೇಖಿಸಿದ್ದಾರೆ. ಈ ಅಸುರನನ್ನು ದೇವಿ ಚಾಮುಂಡೇಶ್ವರಿ ಸಂಹಾರ ಮಾಡಿರುವುದಾಗಿ ಪ್ರತೀತಿ ಇದೆ. ಹಾಗೂ ಈ ದೇವಿಯ ದೇವಸ್ಥಾನವು ಮೈಸೂರಿನ ಬೆಟ್ಟದಲ್ಲಿರುವುದು ಇದಕ್ಕೆ ಸಾಕ್ಷಿ ಎಂಬತಿದೆ. ಮಹಿಷರು ಎಂದು ಕರೆಯುತ್ತಿದ್ದ ಊರನ್ನು ನಂತರ ಮಹಿಸುರು ಎಂದು ಕಾಲಕ್ರಮೇಣ ಮೈಸೂರು ಎಂದು ಕರೆಯಲಾಗುತ್ತಿದೆ.

### 3.1.2 ಚಾಮರಾಜನಗರ ಜಿಲ್ಲೆಯ ಮಾಹಿತಿ

**ಭೌಗೋಳಿಕ ವಿವರಗಳು :**

ಮೈಸೂರು ಜಿಲ್ಲೆಯಿಂದ 1998ರಲ್ಲಿ ಚಾಮರಾಜನಗರವು ವಿಭಜನೆಗೊಂಡು ಹೊಸ ಜಿಲ್ಲೆಯಾಗಿ ಕಾರ್ಯನಿರ್ವಹಿಸುತ್ತಿದೆ. ಕರ್ನಾಟಕ ರಾಜ್ಯದ ದಕ್ಷಿಣದ ತುತ್ತತುದಿಯಲ್ಲಿರುವ ಚಾಮರಾಜನಗರ ಜಿಲ್ಲೆಯು ವಿಶಿಷ್ಟ ಭೌಗೋಳಿಕ ಪ್ರದೇಶವನ್ನೊಳಗೊಂಡಿದ್ದು ಚಾರಿತ್ರಿಕವಾಗಿ, ಪಾರಿಸರಿಕವಾಗಿ ವಿಶೇಷ ಹಿನ್ನೆಲೆಯನ್ನು ಹೊಂದಿದೆ.

ಚಾಮರಾಜನಗರ ಜಿಲ್ಲೆಯು ಸಮುದ್ರ ಮಟ್ಟದಿಂದ 662ಮೀಟರ್ ಎತ್ತರದಲ್ಲಿದೆ. ಜಿಲ್ಲೆಯು $11^0 92^\backslash$ಉತ್ತರ ಅಕ್ಷಾಂಶ ಹಾಗೂ $76^0 95^\backslash$ ಪೂರ್ವ ರೇಖಾಂಶಗಳಿಂದ ಸ್ಥಿತವಾಗಿದ್ದು ಇದು ಕರ್ನಾಟಕದ ದಕ್ಷಿಣದ ಗಡಿ ಭಾಗದಲ್ಲಿದೆ. ತಮಿಳುನಾಡು ಮತ್ತು ಕೇರಳ ರಾಜ್ಯದ ಜಿಲ್ಲೆಗಳ ಗಡಿಯನ್ನು ಹಂಚಿಕೊಂಡಿದ್ದು ಪಶ್ಚಿಮಕ್ಕೆ ಮೈಸೂರು ಜಿಲ್ಲೆ, ಉತ್ತರಕ್ಕೆ ಮಂಡ್ಯ ಜಿಲ್ಲೆ, ಪೂರ್ವಕ್ಕೆ ಸೇಲಮ್ ಮತ್ತು ಈರೋಡ್ ಜಿಲ್ಲೆಗಳು ದಕ್ಷಿಣ-ಪೂರ್ವ ಭಾಗದಲ್ಲಿ ತಮಿಳುನಾಡಿನ ನೀಲಗಿರಿ ಮತ್ತು ಕೇರಳದ ವೈನಾಡು ಜಿಲ್ಲೆಗಳಿಂದ ಸುತ್ತುವರೆದಿದೆ.

ಈ ಜಿಲ್ಲೆಯ ಒಟ್ಟು ವಿಸ್ತೀರ್ಣ 5101 ಚದರ ಕಿಲೊ ಮೀಟರ್ ಆಗಿರುತ್ತದೆ. ಜಿಲ್ಲೆಯನ್ನು ಆಡಳಿತಾತ್ಮಕವಾಗಿ ಒಂದು ಕಂದಾಯ ಉಪವಿಭಾಗ, ನಾಲ್ಕು ತಾಲ್ಲೂಕುಗಳು (ಕೊಳ್ಳೆಗಾಲ, ಯಳಂದೂರು, ಚಾಮರಾಜನಗರ ಮತ್ತು ಗುಂಡ್ಲುಪೇಟೆ) ಮತ್ತು ಹದಿನಾರು ಹೋಬಳಿಗಳನ್ನಾಗಿ ವಿಂಗಡಿಸಲಾಗಿದೆ. ಚಿತ್ರ 3.5 ತಾಲ್ಲೂಕುಗಳನ್ನು ಒಳಗೊಂಡ ನಕ್ಷೆಯನ್ನು ಹೊಂದಿದೆ.



ಚಿತ್ರ 3.3 ಮೈಸೂರು ಜಿಲ್ಲೆಯ ಭೂ ಹರಹು



ಚಿತ್ರ 3.4 ಮೈಸೂರು ಜಿಲ್ಲೆಯ ಅರಣ್ಯ ಪ್ರದೇಶ

**ಜನಸಂಖ್ಯೆ ವಿವರಗಳು :**

2001ರ ಜನಗಣತಿಯಂತೆ ಜಿಲ್ಲೆಯ ಒಟ್ಟು ಜನಸಂಖ್ಯೆ 9,65,462. ಇದರಲ್ಲಿ ಪುರುಷರ ಸಂಖ್ಯೆ 489940 ಹಾಗೂ ಮಹಿಳೆಯರ ಸಂಖ್ಯೆ 475522. ಪ್ರತಿ ಸಾವಿರ ಪುರುಷರಿಗೆ 971 ಮಹಿಳೆಯರಿದ್ದಾರೆ. ಜಿಲ್ಲೆಯ ಜನಸಾಂದ್ರತೆಯು ಪ್ರತಿ ಚದರ ಕಿಲೋ ಮೀಟರ್‌ಗೆ 189 ಆಗಿದ್ದು, ಇದು ಕರ್ನಾಟಕದಲ್ಲಿ 25ನೇ ಸ್ಥಾನವನ್ನು ಪಡೆದಿರುತ್ತದೆ. ಜಿಲ್ಲೆಯ 51 ಪ್ರತಿಶತ ಜನರು ಅಕ್ಷರಸ್ತರಾಗಿದ್ದಾರೆ.

ಜಿಲ್ಲೆಯ ಶೇಕಡ 46.36 ಭಾಗವು ಅರಣ್ಯ ಪ್ರದೇಶದಿಂದ ಸಮೃದ್ಧವಾಗಿದ್ದು ಅನೇಕ ಬುಡಕಟ್ಟುಗಳಿಗೆ ನೆಲೆ ಒದಗಿಸಿದೆ. ಸೋಲಿಗರು, ಎರವರು, ಜೇನುಕುರಬರು ಮತ್ತು ಬೆಟ್ಟ ಕುರುಬರು ಇಲ್ಲಿ ಅರಣ್ಯವನ್ನೇ ಜೀವನಾಧಾರವಾಗಿಸಿಕೊಂಡು ವಾಸಿಸುತ್ತಿರುವ ಬುಡಕಟ್ಟುಗಳು. 2001ರ ಜನಗಣತಿಯಂತೆ 82000 ಬುಡಕಟ್ಟು ಜನರು ಜಿಲ್ಲೆಯಲ್ಲಿ ನೆಲೆ ಪಡೆದಿದ್ದಾರೆ.




**ಚಿತ್ರ 3.5 ಅಧ್ಯಯನ ತಾಲ್ಲೂಕನ್ನೊಳಗೊಂಡ ಚಾಮರಾಜನಗರ ಜಿಲ್ಲೆಯ ನಕ್ಷೆ**

**ಹವಾಮಾನ ಮತ್ತು ಕೃಷಿ :**

ಜಿಲ್ಲೆಯ ಹವಾಮಾನ ಸಾಮಾನ್ಯವಾಗಿ ಸಮಶೀತೋಷ್ಣದಿಂದ ಕೂಡಿರುತ್ತದೆ. ಏಪ್ರಿಲ್‌ನಿಂದ ಜೂನ್ ತಿಂಗಳವರೆಗೆ ಜಿಲ್ಲೆಯಲ್ಲಿನ ಉಷ್ಣಾಂಶವು $33^0$ ಸೆಂಟಿಗ್ರೇಡ್‌ನಿಂದ $37^0$ ಸೆಂಟಿಗ್ರೇಡ್ ನಷ್ಟು ಗರಿಷ್ಠ ಮಟ್ಟವನ್ನು ತಲುಪುವುದು. ಜಿಲ್ಲೆಯ ವಾಡಿಕೆ ಮಳೆಯು 696 ಮಿಲಿ ಮೀಟರ್ ಇರುತ್ತದೆ.

ಕೃಷಿ ಜಿಲ್ಲೆಯ ಮುಖ್ಯ ಕಸುಬು. ನೀರಾವರಿ ಸೌಲಭ್ಯ ಹೆಚ್ಚಾಗಿ ಇಲ್ಲದ್ದರಿಂದ ರೈತರು ಬೇಸಾಯಕ್ಕಾಗಿ ಮಳೆಯ ಮೇಲೆಯೇ ಹೆಚ್ಚು ಅವಲಂಬಿತರಾಗಿದ್ದಾರೆ. ಜಿಲ್ಲೆಯಲ್ಲಿ ಒಟ್ಟು 1.75 ಲಕ್ಷ ಹೆಕ್ಟರ ಪ್ರದೇಶ ಸಾಗುವಳಿಗೆ ಲಭ್ಯವಿದ್ದು, ಇದರಲ್ಲಿ ಶೇಕಡ 30 ಭಾಗಕ್ಕೆ ಮಾತ್ರ ನೀರಾವರಿ

ಸೌಲಭ್ಯವಿದೆ. ರಾಗಿ, ಮುಸುಕಿನಜೋಳ, ಜೋಳ, ಹುರುಳಿ, ಉದ್ದು, ತೊಗರಿ, ಅಲಸಂದೆ, ನೆಲಗಡಲೆ, ಹತ್ತಿ, ಸೂರ್ಯಕಾಂತಿ ಹಾಗೂ ಕಬ್ಬು ಇಲ್ಲಿನ ಪ್ರಮುಖ ಬೆಳೆಗಳು. ರೇಷ್ಮೆ ಜಿಲ್ಲೆಯ ಸಂಪ್ರದಾಯಿಕ ಹಾಗೂ ಪ್ರಮುಖ ಬೆಳೆಯಾಗಿದ್ದು ಒಟ್ಟು 8,601,59 ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದೆ. ತೆಂಗು, ಬಾಳೆ, ಅರಿಶಿಣ, ತರಕಾರಿಗಳನ್ನು ಸಹ ಸ್ವಲ್ಪ ಮಟ್ಟದಲ್ಲಿ ಬೆಳೆಯುತ್ತಿದ್ದಾರೆ.

**ನದಿಗಳು :**

ಜಿಲ್ಲೆಯಲ್ಲಿ ಯಾವುದೇ ನದಿಗಳು ಹುಟ್ಟಿ ಹರಿಯುವುದಿಲ್ಲವಾದರೂ ಕಾವೇರಿ ನದಿಯ ಉಪನದಿಗಳಾದ ಸುವರ್ಣಾವತಿ ಮತ್ತು ಚಿಕ್ಕಹೊಳೆಗಳು ನೀರಾವರಿ ಸೌಲಭ್ಯ ಒದಗಿಸುವಲ್ಲಿ ಉಪಯುಕ್ತವಾಗಿವೆ. ಜಿಲ್ಲೆಯ ಪಶ್ಚಿಮ ಭಾಗದಲ್ಲಿರುವ ಗುಜ್ಜರಹಳ್ಳಿಯಲ್ಲಿ ಹುಟ್ಟಿದ ಸುವರ್ಣಾವತಿಯು ಜಿಲ್ಲೆಯಲ್ಲಿ ಉತ್ತರಾಭಿಮುಖವಾಗಿ ಹರಿಯುವ ಇದು ಚಾಮರಾಜನಗರ ತಾಲ್ಲೂಕು ಮತ್ತು ಯಳಂದೂರು ತಾಲ್ಲೂಕುಗಳ ಮುಖಾಂತರ ಹಾದು ಹೋಗಿದೆ. ಜಿಲ್ಲೆಯಲ್ಲಿ 88 ಮೀಟರ್ ಉದ್ದ ಕ್ರಮಿಸುವ ಇದು 1787 ಚದರ್ ಕಿಲೋ ಮೀಟರ್ ಪ್ರದೇಶದ ಜಲಾನಯನಕ್ಕೆ ಕಾರಣವಾಗಿದೆ. ಹುಣಸೂರು ಘಟ್ಟ ಪ್ರದೇಶದಲ್ಲಿ ಹುಟ್ಟಿದ ಚಿಕ್ಕಹೊಳೆ ಚಾಮರಾಜನಗರ ತಾಲ್ಲೂಕಿನ ಮುಖಾಂತರ ಹಾದು ಹೋಗಿದೆ.

**ನೆಲ ಮತ್ತು ಖನಿಜ ಸಂಪತ್ತು :**

ಕೆಂಪು ಮಣ್ಣು, ಕಲ್ಲು ಮಿಶ್ರಿತ ಕೆಂಪು ಗೋಡು ಮಣ್ಣು, ಕೆಂಪು ಗೋಡು ಮಣ್ಣು, ಕಲ್ಲು ಮಿಶ್ರಿತ ಕೆಂಪು ಜೇಡಿ ಮಣ್ಣು, ಕೆಂಪು ಜೇಡಿ ಮಣ್ಣು, ಲ್ಯಾಟರೈಟ್ ಮಣ್ಣು, ಆಳವಾದ ಕಪ್ಪು ಮಣ್ಣು, ಮೆಕ್ಕಲು ಮಣ್ಣು, ಕ್ಷಾರೀಯ ಮೆಕ್ಕಲು ಮಣ್ಣು ಮುಂತದವು ಸಾಮಾನ್ಯವಾಗಿ ಕಂಡುಬರುತ್ತವೆ. ಈ ಜಿಲ್ಲೆಯ ಸಾಮನ್ಯ ಖನಿಜಗಳೆಂದರೆ, ಕಯೋನೈಟ್, ಸಿಲಿಮೊನೈಟ್, ಬೆಣಚುಕಲ್ಲು, ಕ್ರೋಮೈಟ್, ಬಳಪ, ಕೊರಂಡಂ, ಗ್ರಾಫೈಟ್, ಮುಂತಾದವುಗಳು. ಜಿಲ್ಲೆಯ ಭೂ ಹರಹು ಮಾದರಿಯ ಚಿತ್ರವನ್ನು 3.6 ರಲ್ಲಿ ಕಾಣಬಹುದು.

**ಜೀವಿ ಸಂಕುಲ/ ಜೀವ ಹರಹು :**

**ಸಸ್ಯವರ್ಗ:** ದಿಂಡಿಗ, ಅಳಲೆ, ಅರಿಶಿನ ಬುರುಗ, ತನುಕು ಒಣ ಕಾಡನ್ನು ಪ್ರಮುಖವಾಗಿ ಆವರಿಸಿದೆ. ದಾಲ್ಚಿನ್ನಿ, ಗುಡ್ಡದ ರೆಂಬೆ, ಮಸ್ಸೀವನ ಮುಂತಾದವುಗಳು ಬಿಳಿಗಿರಿ ರಂಗನ ಬೆಟ್ಟದ ಸುತ್ತಲ ಅರಣ್ಯ ಪ್ರದೇಶದಲ್ಲಿ ಸಾಮಾನ್ಯವಾಗಿ ಕಂಡುಬರುವ ಸಸ್ಯವರ್ಗ. ಅಲ್ಲದೆ, ಚಿನ್ನದವರೆ, ದೊಡ್ಡ ಚಿರಿಯತೆ ಇವು ಬಿಳಿಗಿರಿ ರಂಗನ ಬೆಟ್ಟ ಮತ್ತು ಮಲೆ ಮಹದೇಶ್ವರ ಬೆಟ್ಟದ ಇಳಿಜಾರು ಪ್ರದೇಶವನ್ನು ಆವರಿಸಿರುವ ಸಸ್ಯವರ್ಗ. ಚಿತ್ರ 3.7 ಬಿಳಿಗಿರಿ ರಂಗನ ಬೆಟ್ಟದ ಅರಣ್ಯ ಪ್ರದೇಶವನ್ನು ಬಿಂಬಿಸುತ್ತದೆ.

**ಪ್ರಾಣಿ ವರ್ಗ:** ಆನೆಗಳು ಕೊಳ್ಳೆಗಾಲ ತಾಲ್ಲೂಕಿನ ಅರಣ್ಯ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವ ವನ್ಯಜೀವಿ ಅಲ್ಲದೆ ಗಾರ್, ಸಾಂಬರ್, ಜಿಂಕೆಗಳು ಸಹ ಹೆಚ್ಚಾಗಿ ಕಂಡುಬರುವ ಪ್ರಾಣಿಗಳು. ಹುಲಿ ಮತ್ತು ಪ್ಯಾಂಥರ್ ನಂತಹ ದೈತ್ಯಾಕಾರದ ಪ್ರಾಣಿಗಳು ವಿರಳವಾಗಿ ಕಂಡುಬಂದಿವೆ. ಇವುಗಳಲ್ಲದೆ,



ಚಿತ್ರ 3.6 ಚಾಮರಾಜನಗರ ಜಿಲ್ಲೆಯ ಭೂ ಹರಹು



ಚಿತ್ರ 3.7 ಚಾಮರಾಜನಗರ ಜಿಲ್ಲೆಯ ಬಿಳಿಗಿರಿ ರಂಗನ ಬೆಟ್ಟದ ಅರಣ್ಯ ಪ್ರದೇಶ

ಕಾಡು ಬೆಕ್ಕು, ಪುನುಗಿನ ಬೆಕ್ಕು, ಕಾಡು ನಾಯಿ ಸೀಳು ನಾಯಿ ಮಂಗೂಸ್, ಕೋತಿಗಳು, ಕೆಂದಳಿಲು, ನಾಮದ ಅಳಿಲು ಇಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಾಣಿಗಳು.

**ಸಾಂಸ್ಕೃತಿಕ ವಿವರಗಳು :**

ಚಾಮರಾಜನಗರದ ಹಳೆಯ ಹೆಸರು 'ಅರಕೊಟ್ಟರು' ಎಂದಿತ್ತು. ಮೈಸೂರು ಅರಸರಲ್ಲೊಬ್ಬರಾದ ಒಂಬತ್ತನೇ ಚಾಮರಾಜ ಒಡೆಯರ್ ಚಾಮರಾಜನಗರದಲ್ಲಿ 1774ರಲ್ಲಿ ಜನಿಸಿದ್ದರು. ಅವರ ಮಗ ಮುಮ್ಮಡಿ ಕೃಷ್ಣರಾಜ ಒಡೆಯರ್ 1818ರಲ್ಲಿ ತಂದೆಯ ಜನ್ಮಸ್ಥಳವನ್ನು ನವೀಕರಿಸಿ ಹೊಸ ಪಟ್ಟಣವಾಗಿಸಿ ಚಾಮರಾಜನಗರ ಎಂದು ಹೆಸರಿಟ್ಟರು. ಆದ್ದರಿಂದ ಇದಕ್ಕೆ ಚಾಮರಾಜನಗರ ಎಂಬ ಹೆಸರು ಬಂದಿತೆಂದು ಐತಹ್ಯ

**3.2 ಬುಡಕಟ್ಟು ಸಮುದಾಯಗಳ ಆಯ್ಕೆ**

ಆದಿಮಾನವನ ಜೀವನ ಕ್ರಮವು ನಿಸರ್ಗದ ಹಿನ್ನೆಲೆಯಿಂದ ರೂಪಗೊಂಡು ಆಶ್ರಯ, ಆಹಾರ, ಬದುಕಿನ ಕ್ರಮವು ಅವಿಭಾಜ್ಯ ಅಂಗವಾಗಿ ಬೆಳೆದು ಉಳಿದು ಅಸ್ಥಿತ್ವಕ್ಕೆ ಬಂದಿವೆ. ಈ ಹಂತಗಳ ಬೆಳವಣಿಗೆ ಎಂಬಂತೆ ರೂಪಗೊಂಡ ಭೌತಿಕ ಮತ್ತು ಭೌದ್ಧಿಕತೆಯ ಮಟ್ಟದಲ್ಲಿನ ಸ್ಥಿತ್ಯಂತರಗಳು ಅವಶ್ಯಕತೆಯ ಅನಿವಾರ್ಯತೆಯನ್ನು ಸೃಷ್ಟಿಸಿದ ಫಲವಾಗಿ ವೈವಿಧ್ಯಮಯ ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬೆಳವಣಿಗೆ ಕಾಣಬರುತ್ತದೆ. ಈ ನಿಟ್ಟಿನಿಂದ ನೋಡಿದಲ್ಲಿ 21ನೇ ಶತಮಾನದಲ್ಲಿ ಸಹ ಮಾನವ ಸಮುದಾಯಗಳು ಅರಣ್ಯ ಸಂಸ್ಕೃತಿಯ ಭಾಗವಾಗಿಯೇ ಉಳಿದಿರುವ ವೈಜ್ಞಾನಿಕ ಸತ್ಯ ಸಂಗತಿ ಭಾರತದಲ್ಲಿ ಕಂಡುಬರುತ್ತದೆ. ಅರಣ್ಯ ಸಂಸ್ಕೃತಿಯ ಮಾನವ ಸಮುದಾಯಗಳು ಸಹ ತಮ್ಮ ಬದುಕಿನಲ್ಲಿ ಗಾಢವಾದ ವ್ಯವಸ್ಥೆಯನ್ನು ಪರಿಸರದ ಕ್ರಮದಂತೆ ಅವಲಂಬಿಸಿ ರೂಢಿಗತವಾಗಿಸಿಕೊಂಡಿದ್ದಾರೆ. ಈ ಸಮುದಾಯಗಳಲ್ಲಿಯೂ ಸಹ ವಿಭಿನ್ನ ಪರಿಸರವನ್ನೊಳಗೊಂಡ ಅನನ್ಯ ಬಗೆಯ ಜೀವನ ಕ್ರಮಗಳಿಂದ ಸಮುದಾಯಗಳು ಸಮ್ಮಿಳಿತವಾಗಿರುವ ಸಮುದಾಯಗಳು ಸಹ ಅನೇಕ ವೈಶಿಷ್ಟಪೂರ್ಣ ಲಕ್ಷಣಗಳಿಂದಾಗಿ ವಿಶೇಷ ಸ್ಥಾನ ಪಡೆದಿವೆ. ಅವರದೇ ಆದ ವಿಶಿಷ್ಟವಾದ ಸಾಮಾಜಿಕ, ಸಾಂಸ್ಕೃತಿಕ, ಆಹಾರ ಪದ್ಧತಿಗಳು ಹಾಗೂ ಅನೇಕ ಶತಮಾನಗಳ ಕಾಲ ಅವರ ಜೀವನದ ಶೈಲಿಯಲ್ಲಿ ಕನಿಷ್ಠ ಬದಲಾವಣೆಗಳನ್ನು ಇಟ್ಟುಕೊಂಡು ನಡೆಸಿದ ಬದುಕು ಅವರನ್ನು ಈ ಜನಸಂಖ್ಯೆಯ ಒಂದು ವೈಶಿಷ್ಟ ಅಂಗವನ್ನಾಗಿ ಮಾಡಿದೆ. ಕರ್ನಾಟಕದಲ್ಲಿ ಇಂತಹ ಒಂದು ಅರಣ್ಯ ಸಂಸ್ಕೃತಿಯ ಭಾಗವಾಗಿ ಜೀವನ ನಡೆಸುತ್ತಿರುವ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯಗಳನ್ನು ಅಧ್ಯಯನಕ್ಕಾಗಿ ಆಯ್ದುಕೊಳ್ಳಲಾಯಿತು. ಚಿತ್ರ 3.8 ಮತ್ತು 3.9 ರಲ್ಲಿ ಸೋಲಿಗ ಮತ್ತು ಜೇನುಕುರುಬರ ಹಾಡಿಗಳನ್ನು ಕಾಣಬಹುದು.



ಚಿತ್ರ 3.8 ಮುತ್ತುಗದಗದ್ದೆ ಪೋಡಿ ಸೋಲಿಗರ ಹಾಡಿ



ಚಿತ್ರ 3.9 ಗಾನಗಟ್ಟೆ ಜೇನುಕುರುಬರ ಹಾಡಿ

### 3.3 ಅಧ್ಯಯನದ ಮಾರ್ಗಸೂಚಿ ರಚನೆ

ಬುಡಕಟ್ಟು ಸಮುದಾಯಗಳ ಆಹಾರದ ಅವಶ್ಯಕತೆಯನ್ನು ನೀಗಿಸುವಲ್ಲಿ ಅವರಿಗಿರುವ ವಿವಿಧ ಮೂಲಗಳು, ಮಾರ್ಗೋಪಾಯಗಳು ಮತ್ತು ಅದಕ್ಕಾಗಿ ಅವರು ಅನುಸರಿಸುತ್ತಿರುವ ಕ್ರಮಗಳು ಕುರಿತಂತೆ ಅಧ್ಯಯನ ನಡೆಸಲಾಯಿತು. ಅದಕ್ಕಾಗಿ ಪ್ರತ್ಯೇಕ ಮಾರ್ಗಸೂಚಿಯನ್ನು ಸಿದ್ಧಪಡಿಸಿಕೊಂಡು ಅದನ್ನು ಪೂರ್ವಪರೀಕ್ಷೆಗೆ ಒಳಪಡಿಸಲಾಯಿತು. ಪೂರ್ವ ಪರೀಕ್ಷೆಯಲ್ಲಿ ಕಂಡುಬಂದ ಕೆಲವೊಂದು ದೋಷಗಳನ್ನು ಸರಿಪಡಿಸಿ ಅಂತಿಮ ಮಾರ್ಗಸೂಚಿಯನ್ನು ಸಿದ್ಧಪಡಿಸಿ ಮಾಹಿತಿಯನ್ನು ಸಂಗ್ರಹಿಸಲಾಯಿತು. ಮಾರ್ಗಸೂಚಿಯ ಮಾದರಿಯನ್ನು ಅನುಬಂಧ 1 ರಲ್ಲಿ ಕೊಡಲಾಗಿದೆ.

### 3.4 ಆಹಾರ ಭದ್ರತೆಯ ಆಯಾಮಗಳು

ಸಮಕಾಲೀನ ಆಹಾರ ಭದ್ರತೆಯ ವಿಶ್ಲೇಷಣೆ, ವಿಕಾಸದಲ್ಲಿ ಕಾಣಬರುವ ಆಹಾರ ಭದ್ರತೆಯ ಆಯಾಮಗಳು, ಮತ್ತು ಬುಡಕಟ್ಟು ಸಮುದಾಯದಲ್ಲಿ ಆಹಾರ ಭದ್ರತೆ ವಿಧಾನಗಳನ್ನು ಸಮೀಕರಿಸಿ ಪರಿಕಲ್ಪಿಸುವುದಕ್ಕಾಗಿ ಇದುವರೆಗೂ ಆಹಾರ ಭದ್ರತೆಗಾಗಿ ನಡೆದು ಬಂದ ವಿವಿಧ ಆಯಾಮಗಳ, ಯೋಜನೆಗಳ ಆಕರಗಳ ಮಾಹಿತಿಯನ್ನು ಅವಲೋಕಿಸಿ ಅವುಗಳ ವಸ್ತುವಿಷಯಗಳ ಬಗೆಗೆ ಟಿಪ್ಪಣಿ ಮಾಡಿಕೊಳ್ಳಲಾಯಿತು. ಸಂಗ್ರಹಿಸಿದ ಮಾಹಿತಿ, ಟಿಪ್ಪಣಿಗಳನ್ನು ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ಸಂಗ್ರಹಿಸಿದ ಮಾಹಿತಿಯನ್ನು ಈ ಕೆಳಗಿನಂತೆ ವರ್ಗೀಕರಿಸಿಕೊಳ್ಳಲಾಯಿತು.

#### 3.4.1 ಆಹಾರ ಭದ್ರತೆಯ ನಿಸರ್ಗ ದೃಷ್ಟಿ

ಆಹಾರದ ಪರಿಕಲ್ಪನೆ ಆದಿಜೀವಿಯಿಂದ ಮಾನವರವರೆಗೂ ವಿವಿಧ ಪ್ರಭೇಧಗಳಲ್ಲಿ ವಿವಿಧ ವಯೋಮಾನದಲ್ಲಿ ಅನೇಕ ವಿಧದಲ್ಲಿ ವಿಕಾಸಗೊಂಡಿದೆ. ವಿಕಾಸಗೊಂಡ ಎಲ್ಲ ಜೀವಿಗಳ ಆಶಯ ಬದುಕು. ಬದುಕಿನ ಚಲನಶೀಲತೆಯ ಕಾರ್ಯಯೋಜನೆಗಳು. ಆಹಾರದ ಸುಸ್ಥಿರತೆಯ ಗುರಿಯೇ ಚಲನಶೀಲ ಸಮಾಜದ ಒತ್ತಾಸೆ. ಇಂತಹ ಸಾಧ್ಯತೆಗಳನ್ನು ಕಟ್ಟಿಕೊಟ್ಟ ನಿಸರ್ಗದ ಈ ಅಪರೂಪ ವ್ಯವಸ್ಥೆಯನ್ನು ಹತ್ತಿರವಿಟ್ಟು ಜೀವಿಸುವುದು ಆರೋಗ್ಯಕರವಾದದ್ದು. ಆಹಾರದ ಎಲ್ಲಾ ಆಯಾಮಗಳನ್ನು ವಿವರವಾದ ಒಳನೋಟಗಳನ್ನೂ ಕಂಡುಕೊಳ್ಳುತ್ತಾ ಹೋದಂತೆ ಸಂಕೀರ್ಣತೆಗಳ ಪರಿಚಯವಾಗುತ್ತದೆ. ಅವುಗಳ ನಡುವೆಯೇ ಒಳಗೊಳ್ಳುತ್ತಾ ಬೆಳೆವ ಅರಿವೇ ನಿಸರ್ಗದ ದೃಷ್ಟಿಕೋನ. ಈ ಕುರಿತಾಗಿ ಸಂಗ್ರಹಿಸಿದ ಮಾಹಿತಿಯನ್ನು ಈ ಕೆಳಗಿನಂತೆ ವಿಂಗಡಿಸಿ ಚರ್ಚಿಸಲಾಗಿದೆ.

- ❖ ನಿಸರ್ಗದಲ್ಲಿ ಆಹಾರದ ಹುಡುಕಾಟ
- ❖ ಆಹಾರದ ಉತ್ಪಾದನೆ
- ❖ ಸಂಗ್ರಹ, ಹಂಚಿಕೆ
- ❖ ನಿಸರ್ಗದ ಚಟುವಟಿಕೆಗಳು
- ❖ ಆಹಾರ ಚಕ್ರ, ಆಹಾರ ಸರಪಳಿ

### 3.4.2 ಆಹಾರ ಭದ್ರತೆಯ ಪಾರಂಪರಿಕ ದೃಷ್ಟಿ

ಆಹಾರದ ಪರಂಪರೆಯೆಂಬುದೊಂದಿದೆ. ಅದು ವಿವಿಧ ಸಂಸ್ಕೃತಿ, ಪ್ರದೇಶಗಳನ್ನು ಅನೇಕ ಬಗೆಗಳಿಂದ ಒಳಗೊಂಡು ಬೆಳೆದು ಬಂದಿದೆ. ಹಿಂದಿನಿಂದಲೂ ನಮ್ಮಲ್ಲಿ ಹಂಚಿ ಉಣ್ಣುವ ಪರಂಪರೆಯು ಬೆಳೆದು ಬಂದಿದೆ. ಬಹು ಮುಖ್ಯವಾಗಿ ನಮ್ಮಲ್ಲಿ ಅನೇಕ ಆಚರಣೆಗಳು ಆಹಾರದ ಹಂಚಿಕೆಯನ್ನು ಉಳಿಸಿ ಬೆಳೆಸಿಕೊಂಡು ಬಂದಿವೆ. ಹುಟ್ಟಿದ ಹಬ್ಬದಿಂದ ಮೊದಲಾಗಿ ಮದುವೆ, ಮುಂಜಿ ಮುಂತಾಗಿ ಸಾವಿನ ತಿಥಿಯವರೆಗೂ, ಆಹಾರದ ಹಂಚಿಕೆಯು ಪರಂಪರೆಯಲ್ಲಿ ಹರಿದು ಬಂದಿದೆ. ಇದಕ್ಕೆಂದೂ ಲಿಖಿತ ನಿಯಮಗಳಿಲ್ಲ, ಈ ಕುರಿತಾಗಿ ಸಂಗ್ರಹಿಸಿದ ಮಾಹಿತಿಯನ್ನು ಈ ಕೆಳಗಿನಂತೆ ವಿಂಗಡಿಸಿ ಚರ್ಚಿಸಲಾಗಿದೆ

❖ ಶಿಕ್ಷಣಕ್ಕಾಗಿ ಆರಂಭಗೊಂಡ ಆಹಾರ ವ್ಯವಸ್ಥೆಗಳು
❖ ಜನಸಾಮಾನ್ಯರಿಗಾಗಿ ಆರಂಭಗೊಂಡ ಆಹಾರ ವ್ಯವಸ್ಥೆಗಳು
❖ ಸಾಮೂಹಿಕ ಭೋಜನ ವ್ಯವಸ್ಥೆಗಳು
❖ ವೈಯಕ್ತಿಕ ಹಿನ್ನೆಲೆಯಲ್ಲಿ ಆಹಾರ ಭದ್ರತೆಯ ಜವಾಬ್ದಾರಿಗಳು

### 3.4.3 ಆಹಾರಭದ್ರತೆಯ ಲೋಕದೃಷ್ಟಿ

ಹಸಿವು ಸಾಮಾನ್ಯವಾದದ್ದು, ನಿರಂತರವಾದದ್ದು ಹಾಗೂ ಅವಶ್ಯಕವಾಗಿ ನಿವಾರಿಸಲೇಬೇಕಾದದ್ದು. ಹಾಗಾಗಿ ಹಸಿವಿನ ನಿವಾರಣೋಪಾಯದ ಮಾರ್ಗಸೂಚನೆಗಳು ಆಹಾರ ಭದ್ರತೆಯ ಒಳಗೆ ಬೆಳಕು ಕಂಡಿವೆ. ಈ ಹಿನ್ನೆಲೆಯಲ್ಲಿ ಅನೇಕ ವಿಧಾನಗಳು ಮಾನವರ ಬದುಕಿನ ಲೋಕದೃಷ್ಟಿಯಲ್ಲಿ ಅರಳಿವೆ. ಇವು ಸಾಮೂಹಿಕ ಭೋಜನ ಸನ್ನಿವೇಶಗಳಾಗಿ ಹಲವು ಔತಣಕೂಟಗಳಾಗಿ ಅಗತ್ಯ ಸಂದರ್ಭಗಳಲ್ಲಿ ಇಂತಹ ಊಟದ ಸೇವೆಯನ್ನು ಎಲ್ಲಾ ಧಾರಾಳ ಮನಸ್ಸುಗಳು ಒಪ್ಪಿವೆ. ಈ ದೆಶೆಯಲ್ಲಿ ಉಚಿತ ಊಟದ ವ್ಯವಸ್ಥೆಗಳು ಅಗತ್ಯ ಸಂದರ್ಭಗಳಿಗೆ ತಕ್ಕಂತೆ ನಡೆಸಿಕೊಡುವ ಅನೇಕ ಸಂಸ್ಥೆ ಮತ್ತು ವ್ಯವಸ್ಥೆಗಳನ್ನು ಕಾಣುತ್ತೇವೆ. ಹಲವಾರು ಸಮಾಜಮುಖಿ ಮಠಗಳು, ದೇವಾಲಯಗಳು, ಸಂಘ–ಸಂಸ್ಥೆಗಳು, ಉದ್ದಿಮೆಗಳು ಹಾಗೂ ಕೆಲವು ವ್ಯಕ್ತಿಗಳು ಈ ಬಗೆಯ ಲೋಕೋಪಯೋಗಿ ಕಾರ್ಯದಲ್ಲಿ ನಿರತವಾಗಿವೆ.

ಈ ವೈವಿಧ್ಯಮಯ ಸೇವಾ ಉದಾಹರಣೆಗಳನ್ನು ಬಹುಷಃ ಎಲ್ಲ ಪ್ರದೇಶಗಳಲ್ಲೂ ಕಾಣಬಹುದು ಈ ನಿಟ್ಟಿನಲ್ಲಿ ನಮ್ಮ ರಾಜ್ಯದಲ್ಲಿ ನಡೆದುಕೊಂಡು ಬಂದಿರುವ ಅನೇಕ ನಿದರ್ಶನಗಳನ್ನು ಈ ಮುಂದಿನಂತೆ ವರ್ಗೀಕರಿಸಿ ವಿವರಿಸಲಾಗಿದೆ.

- ಭಿಕ್ಷೆ
- ದಾನ
- ದಾಸೋಹ

### 3.5 ಸಮಕಾಲೀನ ಆಹಾರ ಭದ್ರತೆ

ಅರಿವಿನ ವ್ಯಾಪ್ತಿಗೆ ಬಂದಂತಹ ಸಮಾಜದಲ್ಲಿ ಹಸಿವು ಮತ್ತು ಬಡತನ ಇವೆರಡು ಬಹಳ ಅತೀ ದೊಡ್ಡ ಸಮಸ್ಯೆಗಳು. ನಮ್ಮ ದೇಶ ಸ್ವತಂತ್ರವಾದ ಕಾಲಕ್ಕೆ ಇವೇ ಮುಂಚೂಣಿಯಲ್ಲಿ ಇದ್ದಂತಹ ಅನಿವಾರ್ಯತೆಗಳಾಗಿದ್ದವು. ಆಗ ದೇಶ ಅನುಭವಿಸಿದ ಬರಗಾಲದ ಪರಿಣಾಮವಾಗಿ ಉಂಟಾದ ಹಸಿವಿನ ನಿರಂತರತೆ ಜತೆಗೆ ಕೊಳ್ಳುವ ಸಾಮರ್ಥ್ಯ ಇಲ್ಲದಂತಹ ಬಡತನ ಜನತೆಯನ್ನು ಕಾಡುತ್ತಿತ್ತು. ಅಂದಿನಿಂದ ಪ್ರಸ್ತುತ ಸಂದರ್ಭದವರೆಗೂ ಹಸಿವು ಮತ್ತು ಬಡತನದ ವಿರುದ್ಧ ಹೋರಾಟದ ಬಳಕೆಗೆ ಯೋಗ್ಯವಾದ ಅಸ್ತ್ರದ ಹುಡುಕಾಟ ನಿರಂತರವಾಗಿ ನಡೆದೇ ಇದೆ. ದೇಶದ ಜನತೆಯ ಹಸಿವಿನ ನಿವಾರಣೆಗೆ ಸ್ವಾತಂತ್ರ್ಯ ಬಂದಾಗಿನಿಂದಲೂ ವಿವಿಧ ಕಾರ್ಯಕ್ರಮಗಳ ಮೂಲಕ ಆಹಾರ ಭದ್ರತೆಯ ಯೋಜನೆಗಳನ್ನು ರೂಪಿಸುತ್ತಾ ಬಂದಿದೆ. ಈ ಯೋಜನೆಗಳ ಅಥವಾ ಈ ಹುಡುಕಾಟದ ಸಮಗ್ರ ಅಧ್ಯಯನದ ಮೂಲಕ ಪ್ರಸಕ್ತ ಸಮಯದ ವಸ್ತುನಿಷ್ಠ ಅವಶ್ಯಕದ ಬಗ್ಗೆ ಬೆಳಕು ಕಾಣುವುದು ಇಲ್ಲಿಯ ಟಿಪ್ಪಣಿಯ ಉದ್ದೇಶ. ಈ ನಿಟ್ಟಿನಲ್ಲಿ ಇದುವರೆಗೂ ನಡೆದು ಬಂದ ಆಹಾರ ಭದ್ರತೆಯ ಯೋಜನೆಗಳ ಆಕರಗಳ ಮಾಹಿತಿಯನ್ನು ಈ ರೀತಿಯಾಗಿ ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

❖ ಪಂಚವಾರ್ಷಿಕ ಯೋಜನೆಗಳಲ್ಲಿ ಪೌಷ್ಟಿಕ ಕಾರ್ಯಕ್ರಮಗಳು

❖ ಆಹಾರ ಮತ್ತು ಪೌಷ್ಟಿಕತೆ ಕುರಿತಂತೆ ಸ್ವಾತಂತ್ರ್ಯೋತ್ತರ ಕಾರ್ಯಯೋಜನೆಗಳು

❖ ಪ್ರಸಕ್ತ ಜಾರಿಯಲ್ಲಿರುವ ಯೋಜನೆಗಳು
   1. ಸಮಗ್ರ ಶಿಶು ಅಭಿವೃದ್ಧಿ ಯೋಜನೆ
   2. ಮಧ್ಯಾಹ್ನದ ಬಿಸಿಯೂಟದ ಯೋಜನೆ
   3. ಪಡಿತರ ವ್ಯವಸ್ಥೆ
   4. ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆ

### 3.6 ಮಾಹಿತಿ ಕ್ರೋಢಿಕರಣ ಮತ್ತು ವಿಶ್ಲೇಷಣೆ :

ಪ್ರಮಾಣೀಕರಿಸಬಹುದಾದ ಅಂಶಗಳನ್ನು ಸಂಖ್ಯಾಶಾಸ್ತ್ರದ ವಿಧಾನಗಳ ಮೂಲಕ ವಿಶ್ಲೇಷಿಸಲಾಯಿತು. ಪ್ರಮಾಣೀಕರಿಸಲಾಗದ ಅಂಶಗಳನ್ನು ಪರಿಕಲ್ಪನೆಗಳ ರೂಪಿಸುವುದರ ಮೂಲಕ ಹಾಗೂ ತರ್ಕಬದ್ಧತೆಯ ಸಾಧ್ಯತೆಗಳ ವಿವಿರಗಳಿಂದ ವಿಶ್ಲೇಷಿಸಲಾಗಿದೆ.

❖ ಪರಾಮರ್ಶಿಸಿದ ಸಾಹಿತ್ಯದ ವಸ್ತು ವಿಶೇಷಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿ, ಅವಲೋಕನಗಳನ್ನು ತರ್ಕಬದ್ದವಾಗಿ ದಾಖಲಿಸಲಾಗಿದೆ.

❖ ಸಂದರ್ಶನಾ ಮಾರ್ಗಸೂಚಿಯ ಮೂಲಕ ಸಂಗ್ರಹಿಸಿದ ಬುಡಕಟ್ಟುಗಳ ಸಾಮಾಜಿಕ ಆರ್ಥಿಕ ಸ್ಥಿತಿ, ಆರೋಗ್ಯ ಮತ್ತು ಪೌಷ್ಟಿಕ ಸ್ಥಿತಿ, ಆಹಾರ ಪದ್ದತಿ, ಸಂಪ್ರದಾಯಿಕ ಆಹಾರಗಳು ಆಹಾರ

ಸಂಸ್ಕರಣೆ ಹಾಗೂ ಸಂಗ್ರಹಣೆ ಪದ್ಧತಿಗಳ ಮಾಹಿತಿಯನ್ನು ವಿಶ್ಲೇಷಿಸಿ, ಫಲಿತಾಂಶಗಳನ್ನು ವಿವರಿಸಿ ವಿವಿಧ ಕೋಷ್ಟಕಗಳಲ್ಲಿ ಕೊಡಲಾಗಿದೆ.

- ❖ ಸಮಕಾಲೀನ ಆಹಾರ ಭದ್ರತೆಯ ವಿವಿಧ ಆಯಾಮಗಳು, ವಿಕಾಸದಲ್ಲಿ ಕಾಣಬರುವ ಆಹಾರ ಭದ್ರತೆಯ ಆಯಾಮಗಳು, ಮತ್ತು ಬುಡಕಟ್ಟು ಸಮುದಾಯದಲ್ಲಿ ಆಹಾರ ಭದ್ರತೆ ವಿಧಾನಗಳನ್ನು ಸಮೀಕರಿಸಿ ಪರಿಕಲ್ಪಿಸಲಾಗಿದೆ.

ಈ ಅಧ್ಯಯನದ ಅನ್ವಯ ಆಹಾರ ಭದ್ರತೆ ಹಾಗೂ ಬುಡಕಟ್ಟು ಸಮುದಾಯ ಕ್ಷೇತ್ರದಲ್ಲಿ ಮುಂದೆ ನಡೆಸಬಹುದಾದ ಅಧ್ಯಯನಗಳನ್ನು ಗುರುತಿಸಲಾಗಿದೆ.

# ಅಧ್ಯಾಯ 4. ಫಲಿತಾಂಶ ಮತ್ತು ವಿಶ್ಲೇಷಣೆ

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಮತ್ತು ಭದ್ರತೆ ಅಧ್ಯಯನವನ್ನು, ಈ ಎರಡು ಬುಡಕಟ್ಟು ಸಮುದಾಯಗಳು ವಾಸಿಸುತ್ತಿರುವ ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯ ಹಾಡಿಗಳಲ್ಲಿ ಸಂದರ್ಶನ ಮಾರ್ಗದರ್ಶಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ನಡೆಸಲಾಯಿತು. ಇದರೊಂದಿಗೆ ಆಹಾರ ಭದ್ರತೆಯ ವೈವಿಧ್ಯಮಯ ದೃಷ್ಟಿಕೋನಗಳ ಕುರಿತು ವಿವಿಧ ಆಕರಗಳ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಸಂಶೋಧನಾ ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ತರ್ಕಬದ್ಧವಾಗಿ ವಿಂಗಡಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ದಾಖಲಿಸಿದ ಫಲಿತಾಂಶಗಳ ವಿಶ್ಲೇಷಣೆಯನ್ನು ಪ್ರಸ್ತುತ ಅಧ್ಯಯನದಲ್ಲಿ ಈ ಕೆಳಗಿನಂತೆ ವಿವರಿಸಿದೆ.

**4.1 ಅಧ್ಯಯನ ಪ್ರದೇಶಗಳ ಪರಿಸರ ವೈವಿಧ್ಯತೆಯ ಚಲನಶೀಲತೆ**
- 4.1.1 ಅರಣ್ಯ ವೈವಿಧ್ಯತೆ
- 4.1.2 ವನ್ಯ ಜೀವಿಗಳು
- 4.1.3 ಕೃಷಿ ಪರಿಸರ, ಮಳೆ ಇತ್ಯಾದಿ

**4.2 ಬುಡಕಟ್ಟು ಸಮುದಾಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶ**
- 4.2.1 ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ನೆಲೆಗಳು
- 4.2.2 ವಸತಿ ಪ್ರದೇಶದ ವಿವರಗಳು
- 4.2.3 ಸಾಮಾಜಿಕ ವೈಶಿಷ್ಟತೆ
- 4.2.4 ಜೀವನೋಪಾಯಗಳು
- 4.2.5 ಬುಡಕಟ್ಟುಗಳಿಗಾಗಿ ಕಾರ್ಯನಿರ್ವಹಿಸುತ್ತಿರುವ ಸಂಘ ಸಂಸ್ಥೆಗಳು

**4.3 ಅರಣ್ಯವಾಸಿ ಬುಡಕಟ್ಟುಗಳ ಅರಣ್ಯ ಅವಲಂಬನೆಯ ಪ್ರಸ್ತುತ ಸ್ವರೂಪ**
- 4.3.1 ಆಹಾರಕ್ಕಾಗಿ ಅರಣ್ಯದ ಅವಲಂಬನೆ
- 4.3.2 ಇತರೆ ಕಾರ್ಯಕ್ಕಾಗಿ ಅರಣ್ಯದ ಅವಲಂಬನೆ
- 4.3.3 ಆಹಾರ ಸಂಗ್ರಹಣೆ ವಿಧಾನಗಳು

**4.4 ಬುಡಕಟ್ಟುಗಳ ಆಹಾರ ಸಂಸ್ಕೃತಿ, ವೈವಿಧ್ಯತೆ ಮತ್ತು ಪ್ರಸ್ತುತ ಸ್ಥಿತಿ**
- 4.4.1 ಆಹಾರ ಪದ್ದತಿ
- 4.4.2 ವಿಶೇಷ ಸಂದರ್ಭದಲ್ಲಿ ಆಹಾರ ಪದ್ದತಿ
- 4.4.3 ಬುಡಕಟ್ಟು ಸಂಪ್ರದಾಯದಲ್ಲಿ ಹಬ್ಬಗಳು
- 4.4.4 ಆಹಾರ ಕುರಿತ ನಂಬಿಕೆಗಳು
- 4.4.5 ಪಾರಂಪರಿಕ ಆಹಾರ ಕ್ರಮಗಳು ಮತ್ತು ಆರೋಗ್ಯ

**4.5 ಆಹಾರ ಭದ್ರತೆಯ ವೈವಿಧ್ಯಮಯ ದೃಷ್ಟಿಕೋನ**
- 4.5.1 ಆಹಾರ ಭದ್ರತೆಯ ನಿಸರ್ಗ ದೃಷ್ಟಿ
- 4.5.2 ಆಹಾರ ಭದ್ರತೆಯ ಪಾರಂಪರಿಕ ದೃಷ್ಟಿ
- 4.5.3 ಆಹಾರ ಭದ್ರತೆಯ ಲೋಕದೃಷ್ಟಿ

**4.6 ಆಹಾರ ಭದ್ರತೆಯ ಸಮಕಾಲೀನತೆ –ವಿಕಾಸ ಹಾಗೂ ವಸ್ತುಸ್ಥಿತಿ**

**4.7 ಮಾದರಿ ಅಧ್ಯಯನಗಳು (Case Studies)**

**4.8 ಭವಿಷ್ಯತ್ತಿನಲ್ಲಿ ನಡೆಸಬಹುದಾದ ಅಧ್ಯಯನಗಳು**

### 4.1 ಅಧ್ಯಯನ ಪ್ರದೇಶಗಳ ಪರಿಸರ ವೈವಿಧ್ಯತೆಯ ಚಲನಶೀಲತೆ

ಪ್ರಸ್ತುತ ಪ್ರದೇಶಗಳ ಪರಿಸರದ ವೈವಿಧ್ಯತೆಯ ತಿಳುವಳಿಕೆಯು ಅರಣ್ಯ, ವನ್ಯಜೀವಿ ಹಾಗೂ ಕೃಷಿ ಪರಿಸರ, ಮಳೆಯ ವಿಚಾರಗಳನ್ನು ಅವಲಂಬಿಸಿದೆ. ಈ ವಿಷಯಗಳ ಸ್ಥೂಲವಾದ ವಿವರಗಳನ್ನು ಇಲ್ಲಿ ಚರ್ಚಿಸಿದೆ. ಇಡೀ ಪರಿಸರದ ವೈವಿಧ್ಯತೆಯು ಚಲನಶೀಲವಾಗಿರುವುದೆಂದರೆ ಆ ಎಲ್ಲಾ ಕ್ರಿಯಾಶೀಲ ಚಟುವಟಿಕೆಗಳನ್ನು ಅವಲಂಬಿಸಿದೆ. ಇವೆಲ್ಲಾ ಒಟ್ಟಾಗಿಯೇ ಇಲ್ಲಿ ಪ್ರಸ್ತುತವಾಗಿರುವುದು.

#### 4.1.1 ಅರಣ್ಯ ವೈವಿಧ್ಯತೆ

ಅಧ್ಯಯನದ ಪ್ರದೇಶವು ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಯಲ್ಲಿದ್ದು, ಈ ಜಿಲ್ಲೆಗಳಲ್ಲಿನ ಅರಣ್ಯವು ನಮ್ಮ ರಾಜ್ಯದ ಒಟ್ಟು ಅರಣ್ಯ ಪ್ರದೇಶದ 10.68 ಪ್ರತಿಶತ ಅರಣ್ಯವನ್ನು ಹೊಂದಿದೆ. ನಮ್ಮ ರಾಜ್ಯದಲ್ಲಿ ಹೆಚ್ಚು ಅರಣ್ಯ ಪ್ರದೇಶ ಹೊಂದಿದ ಜಿಲ್ಲೆಗಳಲ್ಲಿ ಈ ಜಿಲ್ಲೆಗಳದ್ದೂ ಸಹ ಪ್ರಾಧಾನ್ಯತೆ ಹೊಂದಿದೆ. ಇಲ್ಲಿನ ಅರಣ್ಯ ಪ್ರದೇಶವು ವೈವಿಧ್ಯತೆಮಯವಾಗಿದ್ದು ಅರೆ ಹರಿದ್ವರ್ಣ ಕಾಡು, ಒಣ ಉದಿರೆಲೆ ಕಾಡು, ಮತ್ತು ಮುಳ್ಳುಪೊದೆ ಕಾಡು ಎಂದು ವಿಂಗಡಿಸಲಾಗಿದೆ. ಆಡಳಿತಾತ್ಮಕ ದೃಷ್ಟಿಯಿಂದ ಇಲ್ಲಿನ ವ್ಯಾಪ್ತಿಯ ಅರಣ್ಯ ಪ್ರದೇಶವನ್ನು ಮೈಸೂರು ವಿಭಾಗ (611.03 ಚ.ಕಿ.ಮೀ.), ಚಾಮರಾಜನಗರ ವಿಭಾಗ (426.20 ಚ.ಕಿ.ಮೀ.), ಕೊಳ್ಳೆಗಾಲ ವಿಭಾಗ (1916.71 ಚ.ಕಿ.ಮೀ), ಹುಣಸೂರು ವಿಭಾಗ (482.99ಚ.ಕಿಮೀ.) ಮತ್ತು ಬಂಡಿಪುರ ರಾಷ್ಟ್ರೀಯ ಉದ್ಯಾನವನ (ಟೈಗರ್ ಯೋಜನೆಗಾಗಿ – 689.52) ಎಂದು ವಿಂಗಡಿಸಲಾಗಿದೆ. ಈ ವಿಭಾಗೀಕರಣವೂ ಈ ವೈವಿಧ್ಯತೆಯ ಹಾಗೂ ಭೌಗೋಳಿಕ ಸೂಕ್ಷ್ಮತೆಯ ಸಂಕೇತವಾಗಿದೆ. ಅಲ್ಲದೆ, ಇಲ್ಲಿನ ಅರಣ್ಯ ಪ್ರದೇಶವು ತನ್ನ ಆವಾಸ ಹಿರಿಮೆಯಿಂದ ಅನೇಕ ಬುಡಕಟ್ಟುಗಳ ವಾಸಯೋಗವನ್ನು ಕರುಣಿಸಿದ್ದು ರಾಜ್ಯವನ್ನು ಅರಣ್ಯವಾಸಿ ಬುಡಕಟ್ಟುಗಳ ಹಿನ್ನೆಲೆಯಿಂದ, ಮಾನವಶಾಸ್ತ್ರೀಯ ನೆಲೆಯಿಂದ ಇತಿಹಾಸವನ್ನು ಸೃಜಿಸಿದೆ.

ಇಲ್ಲಿನ ಅರಣ್ಯವು ಮಾನವರ ಕ್ರಿಯಾಶೀಲ ನೆಲೆಯಾಗಿ ತನ್ನದೇ ಛಾಪು ಮೂಡಿಸಿದ್ದು, ಮಾನವೀಯ ಇತಿಹಾಸದಲ್ಲಿ ಅರಣ್ಯ ಮತ್ತು ಮಾನವ ಸಂಬಂಧಗಳ ಸಂಕೀರ್ಣತೆಯನ್ನು ತೆರೆದಿಡುವಲ್ಲಿ ನೆರವಾಗಿದೆ. ಅರಣ್ಯವು ಒಮ್ಮೆ ಆ ಪ್ರದೇಶದಲ್ಲಿ ವಾಸಿಸುವ ಎಲ್ಲ ಸಮುದಾಯಗಳ ಆಸ್ತಿಯಾಗಿತ್ತು. ಕ್ರಮೇಣ ಆಡಳಿತಾತ್ಮಕ ಬೆಳವಣಿಗೆಗಳಿಂದ ಅದನ್ನು ಮಾನವ ನೆಲೆಯಿಂದ ಸಮುದಾಯಗಳನ್ನು ಅರಣ್ಯದಿಂದ ದೂರ ತಳ್ಳುವಂತಹ ಪರಿಸ್ಥಿತಿಯನ್ನು ಎದುರಿಸುವಂತಾಯಿತು. ಮುಂದಿನ ದಿನಗಳಲ್ಲಿ ಬುಡಕಟ್ಟು ಸಮುದಾಯದವರ ಬದುಕೂ ಸಹ ವಸತಿಹೀನ, ವೃತ್ತಿಹೀನ ಎನ್ನುವಂತಹ ಸಮಸ್ಯೆಗಳನ್ನು ಜತೆಯಲ್ಲಿ ಆಹಾರ ಭದ್ರತೆಯ ತಳಪಾಯ ಸಹ ಅಭದ್ರತೆಯತ್ತ ಸಾಗತೊಡಗಿತು. ನೆಲೆಯಲ್ಲಾದ ಸಾಂಸ್ಕೃತಿಕ, ಸಾಮಾಜಿಕ, ಪರಿಸರದ ಬದಲಾವಣೆಗಳು ಬುಡಕಟ್ಟುಗಳ ಬದುಕಿನ ಮೇಲೆ ಅಗಾಧ ಪರಿಣಾಮವನ್ನು ತಂದೊಡ್ಡಿದವು. ಅರಣ್ಯೀಕರಣ ಇತ್ಯಾದಿಗಳ ಹಿನ್ನೆಲೆಯಲ್ಲಿ ಬದಲಾವಣೆಗಳ ಇತಿಹಾಸಕ್ಕೆ ನಾಂದಿಯಾಯಿತು. ಇವು ಹಲವಾರು

ಯೋಜನೆಗಳ ರೂಪದಲ್ಲಿ ಅರಣ್ಯಕ್ಕೆ ಕಾಲಿಟ್ಟವು. ಅವುಗಳ ಪೂರ್ವಾಪರಗಳ ಸೂಕ್ಷ್ಮ ಪರಿಚಯ ಹೀಗಿದೆ.

**ಸಾಮಾಜಿಕ ಅರಣ್ಯೀಕರಣ :** 1983–84 ರಲ್ಲಿ ವಿಶ್ವ ಬ್ಯಾಂಕ್ ಕರ್ನಾಟಕ ರಾಜ್ಯದ ಅರಣ್ಯೀಕರಣಕ್ಕಾಗಿ ಐದು ವರ್ಷಗಳ ಒಂದು ಬೃಹತ್ ಯೋಜನೆಯನ್ನು ಮಂಜೂರು ಮಾಡಿತ್ತು. ಈ ಯೋಜನೆ ಅಡಿಯಲ್ಲಿ ರೆವಿನ್ಯೂಗೆ ಸೇರಿದ ಅನುಪಯುಕ್ತ ಭೂಮಿ, ಗೋಮಾಳ, ಅರಣ್ಯ ಪ್ರದೇಶದ ಒಳಗಿನ ಖಾಲಿ ಭೂಮಿ, ರಸ್ತೆ ಪಕ್ಕ, ನದಿ ತೀರ ಹಾಗೂ ಕಾಲುವೆ ತೀರಗಳಲ್ಲಿ ಹಂತ ಹಂತವಾಗಿ ಗಿಡ ನೆಡುವ ಕಾರ್ಯಕ್ರಮವನ್ನು ಹಾಕಿಕೊಂಡು ಒಟ್ಟು 56 ಲಕ್ಷ ವಿವಿಧ ಬಗೆಯ ಸಸಿಗಳನ್ನು ನೆಟ್ಟು ಬೆಳಸಲಾಯಿತು.

**ಪಶ್ಚಿಮ ಘಟ್ಟದ ಸಮಗ್ರ ಅಭಿವೃದ್ಧಿ ಯೋಜನೆ :** ಈ ಯೋಜನೆ ಅಡಿಯಲ್ಲಿ ಬಿದಿರು, ಮ್ಯಾಚ್ ವುಡ್(ಬೆಂಕಿಕಡ್ಡಿ ತಯಾರಿಸಲು ಬಳಸುವ), ಪ್ಲಾಯ್‌ವುಡ್, ತೇಗ, ಔಷಧೀಯ ಸಸ್ಯಗಳನ್ನು ಲಕ್ಷ್ಮಣತೀರ್ಥ ಜಲಾನಯನ ಪ್ರದೇಶ ಮತ್ತು ನಾಗರಹೊಳೆ ರಾಷ್ಟ್ರೀಯ ಉದ್ಯಾನವನದ ಪ್ರದೇಶದಲ್ಲಿ ಒಟ್ಟು 0.82 ಲಕ್ಷ ಸಸಿಗಳನ್ನು ನೆಟ್ಟು ಬೆಳಸಲಾಗಿದೆ. ಮೈಸೂರಿನ ಹೊರವಲಯದ ನಾಲ್ಕು ಎಕರೆ ಪ್ರದೇಶದಲ್ಲಿ 1892ರಲ್ಲಿ ಶ್ರೀ ಚಾಮರಾಜೇಂದ್ರ ಸಸ್ಯವನವನ್ನು ಪ್ರಾರಂಭಿಸಲಾಯಿತು. ಇದನ್ನು 1986–87ರ ವೇಳೆಗೆ 100 ಎಕರೆ ಪ್ರದೇಶಕ್ಕೆ ವಿಸ್ತರಿಸಲಾಯಿತು.

**ರಾಷ್ಟ್ರೀಯ ಉದ್ಯಾನವನಗಳ ವಿಕಾಸ :** ಅರಣ್ಯಗಳ ರಕ್ಷಣೆಯಲ್ಲಿ ಸರ್ಕಾರದ ಮಧ್ಯಸ್ಥಿಕೆಯ ಆರಂಭವು ಸ್ಥಾಪನೆಯಾಯಿತು. ಅದರ ಫಲವೇ ಸಂರಕ್ಷಣಾ ಯೋಜನೆಗಳು. ಇವುಗಳಲ್ಲಿ ಮುಖ್ಯವಾದ ಹಾಗೂ ಈ ಪ್ರದೇಶದ ಚಟುವಟಿಕೆಗಳಾದ ಬಂಡಿಪುರ ಹಾಗೂ ನಾಗರಹೊಳೆ ರಾಷ್ಟ್ರೀಯ ಉದ್ಯಾನವನ ಯೋಜನೆಗಳು. ಅಲ್ಲದೆ, ಬಿಳಿಗಿರಿ ರಂಗನ ಬೆಟ್ಟದ ಸುತ್ತಲ ಅರಣ್ಯ ಪ್ರದೇಶವೂ ಸಹಾ ರಕ್ಷಣೆಯ ಯೋಜನೆಯಲ್ಲಿ ಬಾಗಿಯಾಯಿತು.

### 4.1.2 ವನ್ಯ ಸಂಪತ್ತು/ಜೀವಿಗಳು

ಪ್ರಸ್ತುತ ಪ್ರದೇಶವು ಭೌಗೋಳಿಕವಾಗಿ ದಕ್ಕನ್ ಪ್ರಸ್ಥಭೂಮಿಯಿಂದ ಹಿಡಿದು ಪಶ್ಚಿಮ ಘಟ್ಟ ಪ್ರದೇಶದ ವರೆಗೆ ಚಾಚಿಕೊಂಡಿದೆ. ಈ ಘಟ್ಟ ಪ್ರದೇಶವು ಪೂರ್ವ ಘಟ್ಟ ಹಾಗೂ ನೀಲಗಿರಿ ಬೆಟ್ಟಗಳಾಗಿ ಒಡೆದು ಜಿಲ್ಲೆಯ ತುಂಬ ಹರಡಿದೆ. ಅಲ್ಲದೆ, ವೈವಿಧ್ಯಮಯ ಪ್ರಾಕೃತಿಕ ಪರಿಸರವನ್ನು ಹೊಂದಿ ಅನೇಕ ಬಗೆಯ ಸಸ್ಯವರ್ಗವನ್ನು ಪೋಷಿಸುತ್ತ ಬಂದಿದೆ. ನಂದಿ, ಸಾಗವಾನಿ, ಮತ್ತಿ, ಮುಂತಾದವುಗಳು ಜಿಲ್ಲೆಯ ತೇವಾಂಶಭರಿತ ಅರಣ್ಯ ಪ್ರದೇಶದಲ್ಲಿ ಪ್ರಮುಖವಾಗಿ ಕಂಡುಬರುವ ಮರಗಳು.

ಅರಣ್ಯ ಸಂಪತ್ತಿನಿಂದ ಸಮೃದ್ಧವಾಗಿರುವ ಈ ಜಾಗವು ವಿವಿಧ ವನ್ಯ ಪ್ರಾಣಿಗಳಿಗೆ ನೆಲೆಯಾಗಿದೆ. ಸಾಂಬರ್ ಮತ್ತು ಜಿಂಕೆಗಳು ಮೈಸೂರಿನ ತೇವಾಂಶಭರಿತ ಅರಣ್ಯ ಪ್ರದೇಶದಲ್ಲಿ ಹೆಚ್ಚಾಗಿ ಕಂಡುಬರುವ ವನ್ಯಜೀವಿಗಳು. ಆನೆಗಳು ಕೊಳ್ಳೆಗಾಲ ತಾಲ್ಲೂಕಿನ ಅರಣ್ಯ ಪ್ರದೇಶದಲ್ಲಿ

ಹೆಚ್ಚಾಗಿ ಕಂಡುಬರುವ ವನ್ಯಜೀವಿ ಅಲ್ಲದೆ, ಗಾರ್, ಸಾಂಬರ್, ಜಿಂಕೆಗಳು ಸಹ ಹೆಚ್ಚಾಗಿ ಕಂಡುಬರುವ ಪ್ರಾಣಿಗಳು. ಹುಲಿ ಮತ್ತು ಪ್ಯಾಂಥರ್‌ನಂತಹ ದೈತ್ಯಾಕಾರದ ಪ್ರಾಣಿಗಳು ವಿರಳವಾಗಿ ಕಂಡುಬಂದಿವೆ. ಇವುಗಳಲ್ಲದೆ, ಕಾಡುಬೆಕ್ಕು, ಪುನುಗಿನಬೆಕ್ಕು, ಕಾಡುನಾಯಿ ಸೀಳುನಾಯಿ ಮಂಗೂಸ್, ಕೋತಿಗಳು ಮತ್ತು ಕೆಂದಳಿಲು, ನಾಮದ ಅಳಿಲು ಇಲ್ಲಿ ಸಾಮಾನ್ಯವಾಗಿ ಕಂಡುಬರುವ ಪ್ರಾಣಿಗಳು.

**4.1.3 ಕೃಷಿ ಪರಿಸರ, ಮಳೆ ಇತ್ಯಾದಿ**

ಹೆಗ್ಗಡದೇವನ ಕೋಟೆಯ ಪ್ರದೇಶದ ಪಕ್ಕದ ತಾಲ್ಲೂಕುಗಳಲ್ಲಿ ಪ್ರಮುಖವಾಗಿ ಹುಣಸೂರು ಹಾಗೂ ಪಿರಿಯಾಪಟ್ಟಣಗಳಲ್ಲಿ 1960 ರಲ್ಲಿ ತಂಬಾಕು ಆರ್ಥಿಕ ಬೆಳೆಯಾಗಿ ಕಾಲಿಟ್ಟಿತು. ಆಗ ಅದನ್ನು ಬೆಳೆದು ಸಂಸ್ಕರಿಸಲು ಉರುವಲಿಗೆಂದು ಅರಣ್ಯದ ನಾಶಕ್ಕೆ ಕಾರಣವಾಯಿತು. ಇದರ ಫಲವಾಗಿ ವೈವಿಧ್ಯತೆಗೂ ಇರುವ ಕಾಡಿನ ಸಾಂದ್ರತೆಗೂ ಭಂಗ ಉಂಟಾಯಿತು. ನಂತರದ ದಿನಗಳಲ್ಲಿ ಅರಣ್ಯೀಕರಣ ಇತ್ಯಾದಿ ಅಭಿವೃದ್ಧಿಯ ಹೆಸರಲ್ಲಿ ಮೇಲೆ ವಿವರಿಸಿದ ಯೋಜನೆಗಳು ಆ ಪ್ರದೇಶದ ಇಕಾಲಜಿಯ ಇತಿಹಾಸವನ್ನೇ ಬದಲಿಸಲು ಆರಂಭಿಸಿದವು. ಇದರ ಫಲವಾಗಿಯೇ ಇಂದು ಕಳೆದ 50 ವರ್ಷದ ಸ್ವಲ್ಪವೇ ಕಾಲದಲ್ಲೂ ಕೃಷಿ ಪರಿಸರವು ಮಹತ್ತರ ಬದಲಾವಣೆಯನ್ನು ತಂದಿವೆ. ಇದಕ್ಕೆ ಸಾಥಿಯಾಗಿ ಅಲ್ಲಿನ ಮಳೆಯ ಲಕ್ಷಣಗಳೂ ಸೇರಿವೆ. ಈ ಪ್ರದೇಶದಲ್ಲಿ ಮಳೆಯು ಹೆಚ್ಚಾಗಿ ದಕ್ಷಿಣ–ಪಶ್ಚಿಮ ಮಾನಸೂನ್ ನಿಂದ ಬರುತ್ತದೆ. ಇಲ್ಲಿ ಸಾಮಾನ್ಯವಾಗಿ ಮಳೆ ಬೀಳುವ ಅವಧಿ ಏಳು ತಿಂಗಳವರೆಗೆ ಇರುತ್ತದೆ. ಸಾಮಾನ್ಯವಾಗಿ ಎಪ್ರಿಲ್ ತಿಂಗಳ ಮೂರನೆ ವಾರ ಆರಂಭವಾಗುವ ಮಳೆಯು ಅಕ್ಟೋಬರ್‌ವರೆಗೆ ಇರುತ್ತದೆ.

ಇಲ್ಲಿನ ಪ್ರದೇಶದಲ್ಲಿ ಬೀಳುವ ಸರಾಸರಿ ಮಳೆಯ ಪ್ರಮಾಣ 761 ಮಿಲಿ ಮೀಟರ್. ಪಿರಿಯಾಪಟ್ಟಣ, ಹೆಗ್ಗಡದೇವನಕೋಟೆ ಮತ್ತು ಕೊಳ್ಳೆಗಾಲ ತಾಲ್ಲೂಕುಗಳು ಜಿಲ್ಲೆಯ ಇತರೆ ತಾಲ್ಲೂಕುಗಳಿಗಿಂತ ಅಧಿಕ ಮಳೆ ಬೀಳುವ ಪ್ರದೇಶಗಳಾಗಿವೆ. ಗುಂಡ್ಲುಪೇಟೆ, ಟಿ.ನರಸೀಪುರ ಮತ್ತು ಚಾಮರಾಜನಗರ ತಾಲ್ಲೂಕುಗಳಲ್ಲಿ ಬರದ ಸಾಧ್ಯತೆ ಹೆಚ್ಚು. ಎಪ್ರಿಲ್ ತಿಂಗಳಿನಿಂದ ನವೆಂಬರ್ ತಿಂಗಳುಗಳು ಮಳೆ ತಿಂಗಳುಗಳಾಗಿದ್ದರೂ ಸಹ ಅಕ್ಟೋಬರ್ ತಿಂಗಳಲ್ಲಿ ಅತೀ ಹೆಚ್ಚು ಮಳೆ ಬೀಳುತ್ತದೆ.

ದಕ್ಷಿಣದಿಂದ ಪಶ್ಚಿಮ ಕಡೆಯ ಮಾನಸೂನ್ ಮಳೆ ಜೂನ್ ತಿಂಗಳಲ್ಲಿ ಆರಂಭವಾಗಿ ಸಪ್ಟೆಂಬರ್‌ವರೆಗೆ ಇರುತ್ತದೆ. ಈ ಮಳೆಯು ವರ್ಷದ ವಾರ್ಷಿಕ ಮಳೆಯ ಸರಾಸರಿ 40 ಪ್ರತಿಶತದಷ್ಟಾಗಿರುತ್ತದೆ. ಜಿಲ್ಲೆಯಲ್ಲಿನ ಪ್ರತೀ ವರ್ಷದ ವಾಡಿಕೆ ಮಳೆಯಲ್ಲಿ ಅಷ್ಟೇನು ವ್ಯತ್ಯಾಸ ಕಂಡುಬಂದಿಲ್ಲ. 1901 ರಿಂದ 1950ರ 50 ವರ್ಷದ ಅವಧಿಯಲ್ಲಿ 1903ರಲ್ಲಿ ಅತೀ ಹೆಚ್ಚು ಮಳೆ ಬಂದಿದೆ. ಇದು ಆ ವರ್ಷದಲ್ಲಿ ಸರಾಸರಿ ಮಳೆಯ ಪ್ರಮಾಣಕ್ಕಿಂತ ಶೇಕಡ 156 ರಷ್ಟು ಅಧಿಕವಾಗಿತ್ತು. 1918 ನೇ ಸಾಲಿನಲ್ಲಿ ಅತೀ ಕಡಿಮೆ ಮಳೆ ಬಂದಿದ್ದು, ಇದು ಸರಾಸರಿ ಮಳೆಯ ಶೇಕಡ 76 ರಷ್ಟು ಮಾತ್ರ. ವರ್ಷದಲ್ಲಿ 53 ದಿನಗಳು ಸರಾಸರಿ ಮಳೆ ಬೀಳುವ ದಿನಗಳಾಗಿರುತ್ತವೆ. ಉಳಿದಂತೆ ಪ್ರದೇಶವು ಹಿತಕರ ಹವಾಮಾನ ಹೊಂದಿದ್ದು, ಮಾರ್ಚ್ ತಿಂಗಳಿಂದ ಮೇ ತಿಂಗಳವರೆಗೆ

ಉಷ್ಣ ಪ್ರಮಾಣವು ಏರುಗತಿಯಲ್ಲಿ ಸಾಗುತ್ತಿರುತ್ತದೆ. ಎಪ್ರಿಲ್ ತಿಂಗಳು ವರ್ಷದಲ್ಲಿಯೇ ಅತೀ ಹೆಚ್ಚು ಉಷ್ಣತೆಯಿಂದ ಕೂಡಿದ ತಿಂಗಳು. ಈ ತಿಂಗಳ ಸರಾಸರಿ ತಾಪಮಾನ $34^0$ ಸೆಲ್ಸಿಯಸ್. ಡಿಸೆಂಬರ್ ವರ್ಷದಲ್ಲಿಯೇ ಅತೀ ಕಡಿಮೆ ತಾಪಮಾನವಿರುವ ತಿಂಗಳು. ಈ ತಿಂಗಳ ಸರಾಸರಿ ತಾಪಮಾನ $16^0$ ಸೆಲ್ಸಿಯಸ್ ಇದ್ದು, ತಿಂಗಳ ಕನಿಷ್ಠ ತಾಪಮಾನ $11^0$ ಸೆಲ್ಸಿಯಸ್ ಹಾಗೂ ಗರಿಷ್ಠ $27^0$ ಸೆಲ್ಸಿಯಸ್ ಇರುತ್ತದೆ. ಈ ಬಗೆಯ ಹವಾಮಾನ ಹಾಗೂ ಮಳೆಯು ಇಲ್ಲಿನ ಒಟ್ಟಾರೆ ವೈವಿಧ್ಯತೆಯನ್ನೂ ಇಲ್ಲಿನ ಭೂಮಿಯನ್ನೂ ಚಲನಶೀಲವಾಗಿಟ್ಟು ಪೋಷಿಸುತ್ತಾ ಬಂದಿದೆ.

## 4.2 ಬುಡಕಟ್ಟು ಸಮುದಾಯಗಳ ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶ

ಬುಡಕಟ್ಟು ಸಮುದಾಯಗಳು ನಾಗರೀಕ ಸಮಾಜದಿಂದ ದೂರ ಉಳಿದು ತಮ್ಮದೆ ಆದ ಸಾಂಸ್ಕೃತಿಕ ಚೌಕಟ್ಟಿನೊಳಗೆ ಆಸರೆಯನ್ನು ಕಂಡುಕೊಂಡಿದ್ದಾರೆ. ಅವರ ಸಾಮಾಜಿಕ ವ್ಯವಸ್ಥೆಯು ವಿಭಿನ್ನ ಪರಿಸರ ನೆಲೆಯುಳ್ಳದ್ದಾಗಿದ್ದು, ಒಂದು ವಿಶಿಷ್ಟ ಪರಂಪರೆಯಾಗಿಸಿದೆ. ಅವರ ಸಾಮಾಜಿಕ ಸನ್ನಿವೇಶಗಳು ಅವರ ನೆಲೆಗಳಿಂದ ರೂಪಗೊಂಡ ಸಮುದಾಯಗಳ ಹಿನ್ನೆಲೆಯಲ್ಲಿ ವಿಕಾಸಗೊಂಡಿವೆ. ಅವರ ಬಹುಪಾಲು ವಸತಿ ಪ್ರದೇಶಗಳು ಕನಿಷ್ಠ ಅವಶ್ಯಕತೆಗಳ ಆಸರೆಯನ್ನಷ್ಟೇ ನೀಡಿವೆ. ಇದರಿಂದಾಗಿ ಅವರ ಕೌಟುಂಬಿಕ ಬೆಳವಣಿಗೆಗಳು, ಜೀವನೋಪಾಯಗಳು ಹಾಗೂ ಉದ್ಯೋಗ ಅರಸುವ ಸಾಧ್ಯತೆಗಳ ಅವಕಾಶಗಳಲ್ಲಿ ಪ್ರೋತ್ಸಾಹವನ್ನು ಪಡೆದಿವೆ. ಆಧುನಿಕ ನಾಗರೀಕತೆ ಆಸಕ್ತ ಸಮುದಾಯಗಳ ಮುಖಾಮುಖಿಯಾಗಿ ಅವರ ಮೂಲ ಸಾಮಾಜಿಕ ಮತ್ತು ಸಾಂಸ್ಕೃತಿಕ ಸನ್ನಿವೇಶಕ್ಕೆ ಕೆಲವು ಬದಲಾವಣೆಗಳ ಸಾಧ್ಯತೆಯನ್ನು ತಂದಿವೆ.

ಒಟ್ಟಾರೆಯಾಗಿ ಈ ಮೂಲಕ ಬುಡಕಟ್ಟುಗಳ ನೆಲೆಯ ಹಿನ್ನೆಲೆಯಿಂದ ಅವರ ಸಮುದಾಯ ಸೃಷ್ಟಿಯನ್ನು, ಅದು ಕಟ್ಟಿಕೊಟ್ಟ ಬದುಕನ್ನು ಹಾಗೂ ಆ ಇಡೀ ಬದುಕಿನ ಸಾಂಸ್ಕೃತಿಕ ಹೆಜ್ಜೆಗಳನ್ನು ಇಲ್ಲಿ ಗುರುತಿಸಲು ಯತ್ನಿಸಿದೆ.

### 4.2.1 ಅರಣ್ಯವಾಸಿ ಬುಡಕಟ್ಟು ಸಮುದಾಯಗಳ ನೆಲೆಗಳು

ಕರ್ನಾಟಕದ ಪ್ರಮುಖ ಅರಣ್ಯವಾಸಿ ಬುಡಕಟ್ಟು ಸಮುದಾಯವಾದ ಕಾಡುಕುರುಬರ ನೆಲೆಗೊಳ್ಳುವಿಕೆಯು ಆಸಕ್ತಿಯ ವಿಚಾರಗಳನ್ನು ಹೊಂದಿದೆ. ಥರ್ಸ್ಟನ್(1909)ರವರು ಮದ್ರಾಸ್ ಪ್ರಾಂತ್ಯದ ಜನಗಣತಿ ವರದಿ – 1891ರಲ್ಲಿ ಕಾಡುಕುರುಬರ ವಿವಿಧ ವಿಕಾಸದ ಹಿನ್ನೆಲೆಯ ವಿವರಗಳನ್ನು ದಾಖಲಿಸಿದ್ದಾರೆ. ಪ್ರಸ್ತುತ ಪ್ರಚಲಿತವಿರುವ ಕುರುಬರು ಅಥವಾ ಕುರುಂಬರು ಪ್ರಾಚೀನ ಕುರುಬರ ಅಥವಾ ಪಲ್ಲವರ ಪ್ರಾತಿನಿಧಿಕವಾಗಿದ್ದಾರೆ. ಹಿಂದೊಮ್ಮೆ ಈ ಪಲ್ಲವರು ಅತ್ಯಂತ ಬಲಾಢ್ಯರಾಗಿ ಆಳ್ವಿಕೆ ನಡೆಸಿದವರಾಗಿದ್ದಾರೆ. ಚೋಳರು, ಚಾಲುಕ್ಯರು ಮೇಲುಗೈ ಸಾಧಿಸಿದ ನಂತರ ಪಲ್ಲವರು ಕ್ಷೀಣರಾದರು. ದಿನಕಳೆದಂತೆ ಈ ಸಮುದಾಯ ಬೆಟ್ಟಗುಡ್ಡಗಳನ್ನು ಆಧರಿಸಿ ಬದುಕು ಸಾಗಿಸಿರುವ ಸಾಧ್ಯತೆಗಳಿದ್ದಿರಬಹುದು. ಕುರುಬರ ಸಾರ್ವಭೌಮತ್ವ ಕಳೆದಂತೆ ಮಲಬಾರ್, ನೀಲಗಿರಿ, ಕೊಡಗು, ಮೈಸೂರು ಪ್ರದೇಶದ ಬೆಟ್ಟಗುಡ್ಡಗಳನ್ನು ಆಶ್ರಯಿಸಿದ ಸಮುದಾಯವು ನಾಗರೀಕತೆಯಿಂದ

ದೂರವಾಗಿ ವನ್ಯ ಜೀವನಕ್ಕೆ ತೊಡಗಿರಬಹುದೆಂದು ನಂಬಲಾಗಿದೆ. ಹಾಗೆ ನೋಡಿದರೆ, ದ್ರಾವಿಡ ಸಂಸ್ಕೃತಿಯಲ್ಲಿ ಈ ನೆಲವನ್ನು ಆಳಿದ ಬಲಾಢ್ಯರಲ್ಲಿ ಕುರುಬರಿಗೂ ಕೂಡ ಪ್ರಮುಖ ಸ್ಥಾನ ಇದೆ.

ಅಯ್ಯಪ್ಪನ್(1948)ರವರ ವರದಿಯು ಕರ್ನಾಟಕದ ಪ್ರಮುಖ ಬುಡಕಟ್ಟು ಸಮುದಾಯವಾದ ಕಾಡುಕುರುಬರ ಬಗ್ಗೆ ಉಲ್ಲೇಖಿಸಿದೆ. ಊರುಕುರುಬರು ಮತ್ತು ಕಾಡುಕುರುಬರು ಎಂದು ವಿಭಾಗಿಸಿದ ಕುರುಬ ಸಮುದಾಯವನ್ನು ಗುರುತಿಸಿದೆ. ಕಾಡುಕುರುಬ ಹೆಸರೇ ಸೂಚಿಸುವಂತೆ ಅರಣ್ಯವಾಸಿಗಳಾಗಿದ್ದು, ಜೇನುಕುರುಬ ಮತ್ತು ಬೆಟ್ಟಕುರುಬ ಎಂದು ವರ್ಗೀಕರಿಸಲಾಗಿದೆ. ಇದೇ ಹಿನ್ನೆಲೆಯಿಂದ ಅನೇಕ ಮಾನವ ಶಾಸ್ತ್ರೀಯ ಅಧ್ಯಯನಗಳು ಕೂಡ ಅರಣ್ಯವನ್ನು ಆಶ್ರಯಿಸಿದ ಕುರುಬ ಸಮುದಾಯದ ಜನಾಂಗೀಯ ವಿವರಗಳನ್ನು ದಾಖಲಿಸಲಾಗಿದೆ.

**ಜೇನುಕುರುಬರು:** ಕರ್ನಾಟಕದ ಆದಿವಾಸಿ ಸಮುದಾಯವಾದ ಜೇನುಕುರುಬರು ನಾಗರೀಕತೆಯ ಹಿನ್ನೆಲೆಯಿಂದ ಕೆಳಸ್ತರದವರಾಗಿದ್ದಾರೆ. 1991ರ ಜನಗಣತಿಯಂತೆ ಕರ್ನಾಟಕದಲ್ಲಿ ಇವರ ಜನಸಂಖ್ಯೆಯು 29,371 ಇದ್ದು(15156–ಗಂಡಸರು ಹಾಗೂ 14215–ಹೆಂಗಸರು), 2001ರ ಜನಗಣತಿಯಂತೆ 37,654 ಇದೆ. ಇವರಲ್ಲಿ ಶೇಕಡ 70ರಷ್ಟು ಜನಸಂಖ್ಯೆಯು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆ, ಹುಣಸೂರು, ಪಿರಿಯಾಪಟ್ಟಣ, ಚಾಮರಾಜನಗರ ಜಿಲ್ಲೆಯ ಗುಂಡ್ಲುಪೇಟೆ, ಮತ್ತು ಕೊಡಗು ಜಿಲ್ಲೆಯ ವಿರಾಜಪೇಟೆ, ಸೋಮವಾರಪೇಟೆ ಮತ್ತು ಮಡಿಕೇರಿಗಳಲ್ಲಿ ವಾಸವಾಗಿದ್ದಾರೆ.

ಜೇನುಕುರುಬರ ತಲೆಯು ಮೀಸೊಫೆಲಿಕ್ ರೀತಿಯಲ್ಲಿದ್ದು, ಸಾಮಾನ್ಯವಾಗಿ ಕುಬ್ಜ ದೇಹವನ್ನು ಹೊಂದಿರುತ್ತಾರೆ ಮತ್ತು ಇವರಿಗೆ ಕುರುಂಬಾ ಹಾಗೂ ಬೆಟ್ಟ ಕುರುಬರ ಹೋಲಿಕೆ ಇದೆ. ಇವರು ತಮ್ಮ ಜನರೊಂದಿಗೆ ಮಾತನಾಡುವಾಗ ಕನ್ನಡದ ಆಡುಭಾಷೆಯ ಒಂದು ಪ್ರಕಾರವಾದ ಭಾಷೆಯನ್ನು ಬಳಸುತ್ತಾರೆ ಅದಕ್ಕೆ 'ಜೇನು ನುಡಿ' ಎಂದು ಕರೆಯುತ್ತಾರೆ. ಹೆಚ್ಚಾಗಿ ಜೇನುಕುರುಬರು ಅರಣ್ಯವಾಸಿಗಳಾಗಿದ್ದು ಅರಣ್ಯ ಉತ್ಪನ್ನಗಳನ್ನೇ ಅವಲಂಬಿಸಿ ಜೀವನ ನಡೆಸಿದವರಾಗಿದ್ದಾರೆ. ಸಾಮಾನ್ಯವಾಗಿ ಆಹಾರ ಸಂಗ್ರಹಣೆ, ಕುಮರಿ ಬೇಸಾಯದಂತಹ ಉದ್ಯೋಗದಿಂದ ತಮ್ಮ ಬದುಕನ್ನು ಕಾಪಾಡಿಕೊಂಡು ಬಂದವರಾಗಿದ್ದಾರೆ. ಈ ಮೂಲಕ ತಮ್ಮ ಜನಾಂಗೀಯ ವಿಶೇಷತೆಗಳನ್ನು ಉಳಿಸಿಕೊಂಡಿದ್ದಾರೆ.

ಈ ಸಮುದಾಯದ ಚಾರಿತ್ರಿಕ ಹಿನ್ನೆಲೆ ಮತ್ತು ಕೆಲವು ವಾಸ್ತವಿಕ ಸನ್ನಿವೇಶಗಳನ್ನು ಸಮೀಕರಿಸಿದರೆ ಈ ಕೆಳಗಿನ ಅಂಶಗಳನ್ನು ಪರಿಭಾವಿಸಬಹುದಾಗಿದೆ.

❖ ಅರ್ಹ ದಾಖಲೆಗಳ ಮೂಲದಿಂದ ಒಂದು ಕಾಲದ ಪಲ್ಲವ ಸಾಮ್ರಾಜ್ಯದ ಬಹುಸಂಖ್ಯಾ ಪ್ರಜೆಗಳು ನಂತರದಲ್ಲಿ ಅರಣ್ಯವಾಸಿಗಳಾಗಿದ್ದಾರೆ.

❖ ಪ್ರಸ್ತುತ ನಾಗರೀಕ ಸಮಾಜದ ಸಂಬಂಧಿಗಳಾಗಿರಬಹುದಾದ ಜನಾಂಗದ ಧಾರ್ಮಿಕ ಆಚಾರಗಳು ಮೂಲ ಬುಡಕಟ್ಟಿನಿಂದ ಬಂದಿರಬಹುದು.

❖ ಈ ದೃಷ್ಟಿಯಿಂದ ಅರಣ್ಯವಾಸ ಅರಣ್ಯದ ಹೊರಗಿನ ನಾಗರಿಕವಾಸ ಅಂತರ್‌ವಿನಿಮಯ ಜೀವನ ಸಹಜವಾಗಿ ವಿಕಾಸಿಸಿರಬಹುದು.

**ಸೋಲಿಗರು** : ಸೋಲಿಗರು ತಮ್ಮ ಮೂಲ ಪುರುಷರು ಬಿದಿರಿನಿಂದಲೇ ಹುಟ್ಟಿದ್ದಾರೆ ಎಂದು ನಂಬುತ್ತಾರೆ. ಸೋಲಿಗ ಎಂಬ ಪದದ ಅರ್ಥವು ಬಿದಿರಿನ ಮಾನವರು ಎಂಬುದಾಗಿದೆ. ಮಧ್ಯಕಾಯದ ದೇಹಸ್ಥಿತಿಯುಳ್ಳ ಇವರು ಕೋಲು ಮುಖ ಮತ್ತು ಅಗಲವಾದ ಮೂಗನ್ನು ಉಳ್ಳವರಾಗಿದ್ದಾರೆ. ಹೆಚ್ಚಿನ ಸೋಲಿಗರು ಕೃಷಿಕರಾಗಿದ್ದು, ಜತೆಗೆ ಜೀವನೋಪಾಯಕ್ಕಾಗಿ ಇತರೇ ಹಲವು ಕಸಬುಗಳನ್ನು ಅವಲಂಬಿಸಿದ್ದಾರೆ.

ಸೋಲಿಗರ ವಸತಿ ಸ್ಥಳವನ್ನು 'ಪೋಡು' ಎಂದು ಕರೆಯುತ್ತಾರೆ. ಪ್ರತಿ ಪೋಡಿನಲ್ಲೂ 10-50 ಗುಡಿಸಲುಗಳು ಇರುತ್ತವೆ. ಈ ಗುಡಿಸಲುಗಳನ್ನು ಸಾಮಾನ್ಯವಾಗಿ ಬಿದಿರು ಮತ್ತು ಒಣ ಹುಲ್ಲುಗಳಿಂದ ನಿರ್ಮಿಸಲಾಗಿರುತ್ತದೆ. ರಾಗಿ ಇವರ ಮೂಲ ಆಹಾರವಾಗಿದ್ದು ಜತೆಗೆ ಅರಣ್ಯದಿಂದ ಸಂಗ್ರಹಿಸುವ ಹಣ್ಣು ಹಂಪಲುಗಳು, ಗೆಡ್ಡೆ ಗೆಣಸುಗಳು ಇವರ ಆಹಾರದ ಇತರೇ ಅವಶ್ಯಕತೆಯನ್ನು ಪೂರೈಸುತ್ತವೆ. ಸಾಂಪ್ರದಾಯಿಕವಾಗಿ ಸೋಲಿಗರು ಹಲವು ವಿಶೇಷಣಗಳನ್ನು ಹೊಂದಿದ್ದಾರೆ. ಮುಖ್ಯವಾಗಿ ಮದುವೆ ಮತ್ತು ನ್ಯಾಯ ತೀರ್ಮಾನಗಳಲ್ಲಿ ಇವನ್ನು ಗುರುತಿಸಬಹುದಾಗಿದೆ. ಸೋಲಿಗರ ಗ್ರಹಿಕೆಯಂತೆ ಕ್ಯಾಲೆಂಡರನ್ನು ಹೋಲಬಹುದಾದ ಸಾಂಪ್ರದಾಯಿಕ ವಿಧಾನಗಳಿರುವುದು ಕಂಡುಬರುತ್ತದೆ. ಕಾಲದ ಪುನರಾವರ್ತನೆಗಳನ್ನು ಅರಿಯುವುದರ ಮೂಲಕ ಇದರ ನಿರ್ಮಾಣವಾಗಿದೆ ಎಂದು ನಂಬಲಾಗಿದೆ.

ಸೋಲಿಗ ಸಮುದಾಯವು ಕರ್ನಾಟಕದಲ್ಲಿ ಹೆಚ್ಚಾಗಿ ಚಾಮರಾಜನಗರ ಜಿಲ್ಲೆಯಲ್ಲಿ ಕಾಣಬರುತ್ತಾರೆ. ಬಹುಪಾಲು ಜನಸಂಖ್ಯೆಯು ಯಳಂದೂರು, ಕೊಳ್ಳೆಗಾಲ ತಾಲೂಕಿನಲ್ಲಿದ್ದು ಬಿಳಿಗಿರಿರಂಗನ ಬೆಟ್ಟದ ಸುತ್ತಮುತ್ತಲಿನ ಪ್ರದೇಶದಲ್ಲಿ ವಾಸವಾಗಿದ್ದಾರೆ. ಕರ್ನಾಟಕದಲ್ಲಿ ಸೋಲಿಗರು ಎಂದು ಗುರುತಿಸಿರುವ ಜನಸಂಖ್ಯೆಯು 23,995 (1991ರ ಜನಗಣತಿಯಂತೆ) ಇದೆ. ಇವರಲ್ಲಿ 4000 ಜನರು ಬಿಳಿಗಿರಿ ರಂಗನ ಬೆಟ್ಟದ ರಕ್ಷಿತಾರಣ್ಯ ಪ್ರದೇಶದ ಒಳಗೆ ಹಾಗೂ 11000 ಜನರು ರಕ್ಷಿತ ಅರಣ್ಯದ ಸುತ್ತಮುತ್ತಲ ಪ್ರದೇಶದಲ್ಲಿ ವಾಸಿಸುತ್ತಿದ್ದಾರೆ.

ಬಿಳಿಗಿರಿರಂಗನ ಬೆಟ್ಟದಲ್ಲಿ ವಿವೇಕಾನಂದ ಗಿರಿಜನ ಕಲ್ಯಾಣಕೇಂದ್ರ ಸ್ಥಾಪನೆಯ ನಂತರ ಸೋಲಿಗರಲ್ಲಿ ಅನೇಕ ಬದಲಾಣೆಗಳು ಕಾಣಬರುತ್ತವೆ. ಈ ಬದಲಾವಣೆಗಳು ಈ ಸಮುದಾಯವನ್ನು ಮುಖ್ಯವಾಹಿನಿಗೆ ತರುವ ಪ್ರಯತ್ನದಲ್ಲಿ ಹಲವು ಯಶಸ್ಸುಗಳನ್ನು ಕಂಡುಕೊಂಡಿದೆ. ಅಲ್ಲದೆ, ಇತರ ಸಂಸ್ಥೆಗಳೂ ಈ ಪ್ರಯತ್ನದಲ್ಲಿ ಕೈ ಜೋಡಿಸಿವೆ. ಈ ಕುರಿತ ಮಾಹಿತಿಯನ್ನು ಮುಂದೆ ವಿವರಿಸಲಾಗಿದೆ.

### 4.2.2 ವಸತಿ ಪ್ರದೇಶದ ವಿವರಗಳು

ಚಾಮರಾಜನಗರ ಜಿಲ್ಲೆಯು ಮೈಸೂರು ಜಿಲ್ಲೆಯಿಂದ ವಿಭಜನೆಗೊಂಡು ಹೊಸ ಜಿಲ್ಲೆಯಾಗಿ ನಿರ್ಮಿತವಾಗಿದೆ. ಕರ್ನಾಟಕ ರಾಜ್ಯದಲ್ಲಿ ವಿಶಿಷ್ಟ ಭೌಗೋಳಿಕ ಪ್ರದೇಶವನ್ನೊಳಗೊಂಡ ಈ ಜಿಲ್ಲೆಯು ಚಾರಿತ್ರಿಕವಾಗಿ, ಪಾರಿಸರಿಕವಾಗಿ ವಿಶೇಷ ಹಿನ್ನೆಲೆಯನ್ನು ಹೊಂದಿದೆ. ಜಿಲ್ಲೆಯ ವಿವರಗಳನ್ನು ಅನುಬಂಧ 2 ಮತ್ತು 3 ರಲ್ಲಿ ಕೊಟ್ಟಿದೆ. ಇಡೀ ಜಿಲ್ಲೆಯ ಎಲ್ಲ ತಾಲ್ಲೂಕುಗಳಲ್ಲೂ ಅಧ್ಯಯನಕ್ಕೆ ಒಳಪಟ್ಟ ವಿವಿಧ ಅರಣ್ಯವಾಸಿ ಬುಡಕಟ್ಟುಗಳು ನೆಲೆಸಿವೆ. ಇಲ್ಲಿನ ವಿಶಿಷ್ಟ ಪರಿಸರ ಪ್ರದೇಶವು ಈ ವಿವಿಧ ಬುಡಕಟ್ಟುಗಳ ವಸತಿಗೆ ನೆರವಾಗಿದೆ. ಈ ಪ್ರದೇಶವನ್ನು ಚಾಲುಕ್ಯರು, ಗಂಗರು, ಚೋಳರು, ಹೊಯ್ಸಳರು, ವಿಜಯನಗರದ ಅರಸರು ಹಾಗೂ ಮೈಸೂರು ನಗರದ ಅರಸರು ಆಳಿದ್ದಾರೆ. ಮೈಸೂರು ಅರಸರಲ್ಲೊಬ್ಬರಾದ ಒಂಬತ್ತನೇ ಚಾಮರಾಜ ಒಡೆಯರ್ ಚಾಮರಾಜನಗರದಲ್ಲಿ 1774ರಲ್ಲಿ ಜನಿಸಿದ್ದರು. ಅವರ ಮಗ ಮುಮ್ಮಡಿ ಕೃಷ್ಣರಾಜ ಒಡೆಯರ್ 1818ರಲ್ಲಿ ತಂದೆಯ ಜನ್ಮಸ್ಥಳವನ್ನು ನವೀಕರಿಸಿ ಹೊಸ ಪಟ್ಟಣವಾಗಿಸಿ ಚಾಮರಾಜನಗರ ಎಂದು ಹೆಸರಿಟ್ಟರು.

ಮೈಸೂರು ಜಿಲ್ಲೆಯಲ್ಲಿನ ಅರಣ್ಯವಾಸಿ ಬುಡಕಟ್ಟುಗಳಲ್ಲಿ ಜೇನುಕುರುಬರು ಹೆಚ್ಚಾಗಿದ್ದಾರೆ. ಮೈಸೂರು ಜಿಲ್ಲೆಯು ಸಾಂಸ್ಕೃತಿವಾಗಿ ವಿಭಿನ್ನವಾಗಿ ಗುರುತಿಸಿಕೊಂಡ ಜಿಲ್ಲೆ. ಇಲ್ಲಿನ ಹೆಗ್ಗಡದೇವನ ಕೋಟೆ ತಾಲ್ಲೂಕು ಹುಣಸೂರು ತಾಲ್ಲೂಕುಗಳು ಬುಡಕಟ್ಟು ಸಮುದಾಯಗಳ ನೆಲೆಗಳು. ಸಾಂಸ್ಕೃತಿಕ ಹಾಗೂ ಪರಿಸರ ಎರಡರಿಂದಲೂ ವಿಶಿಷ್ಟವಾದ ಈ ಜಿಲ್ಲೆಯ ವಿವರಗಳನ್ನು ಅನುಬಂಧ 4 ಮತ್ತು 5 ರಲ್ಲಿ ಕೊಟ್ಟಿದೆ. ಮೂಲತಃ ಅರಣ್ಯವಾಸಿಗಳಾದ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯಗಳು ರಾಜ್ಯದ ಅತೀ ಹೆಚ್ಚು ಅರಣ್ಯ ಪ್ರದೇಶ ಹಾಗೂ ಪಶ್ಚಿಮ ಘಟ್ಟ ಪ್ರದೇಶದಿಂದ ಆವೃತವಾಗಿರುವ ಚಾಮರಾಜನಗರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯಲ್ಲಿ ಹೆಚ್ಚಾಗಿ ನೆಲೆಯನ್ನು ಕಂಡುಕೊಂಡಿವೆ.

ಅಧ್ಯಯನಕ್ಕಾಗಿ ಭೇಟಿ ನೀಡಿದ ಚಾಮರಾಜನಗರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯಲ್ಲಿರುಯವ ಸೋಲಿಗ ಮತ್ತು ಜೇನುಕುರುಬರ ಹಾಡಿಗಳ ವಿವರವನ್ನು ಕೋಷ್ಟಕ 4.1 ರಲ್ಲಿ ಕೊಡಲಾಗಿದೆ. ಅವರು ವಾಸಿಸುತ್ತಿರುವ ಪರಿಸರದ ಆಧಾರದ ಮೇಲೆ ಈ ಕೆಳಗಿನಂತೆ ವಿಂಗಡಿಸಲಾಗಿದೆ.

- ಅರಣ್ಯದೊಳಗೆ ವಾಸಿಸುತ್ತಿರುವವರು
- ಅರಣ್ಯದಂಚಿನಲ್ಲಿ ವಾಸಿಸುತ್ತಿರುವವರು
- ಅರಣ್ಯದಾಚೆ ವಾಸಿಸುತ್ತಿರುವವರು

**ಕೋಷ್ಟಕ 4.1 ಸೋಲಿಗ ಮತ್ತು ಜೇನುಕುರುಬ ಹಾಡಿಗಳು**

| ಅರಣ್ಯ ಪರಿಸರದ ವಿಧ | ಸೋಲಿಗರ ಹಾಡಿಗಳು | ಜೇನುಕುರುಬರ ಹಾಡಿಗಳು |
|---|---|---|
| ಅರಣ್ಯದೊಳಗೆ ವಾಸಿಸುತ್ತಿರುವವರು | ಮುತ್ತುಗದಗದ್ದೆ ಪೋಡು | ಬಳ್ಳೆ ಹಾಡಿ |
| ಅರಣ್ಯದಂಚಿನಲ್ಲಿ ವಾಸಿಸುತ್ತಿರುವವರು | ಕರಲಕಟ್ಟೆ ದೊಡ್ಡಿ ಕೋಣನಕೆರೆ | ಕುಂಟೇರಿ ಹಾಡಿ ಭೀಮನಹಳ್ಳಿ |
| ಅರಣ್ಯದಾಚೆ ವಾಸಿಸುತ್ತಿರುವವರು | ಸೋಲಿಗರ ಕಾಲೋನಿ | ಹುಣಸೆಕುಪ್ಪೆ |

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಕುಟುಂಬಗಳು ವಾಸಿಸುತ್ತಿರುವ ಹಳ್ಳಿಗಳಲ್ಲಿ ಆ ಸಮುದಾಯಗಳ ಅವಶ್ಯಕತೆಗಳನ್ನು ಪೂರೈಸುವ ಕ್ರಮಗಳಿಗೆ ಗಮನ ಕೊಡಲಾಗಿದೆ. ಇವರು ವಾಸಿಸುತ್ತಿರುವ ಎಲ್ಲಾ ಹಳ್ಳಿಗಳು ಇವರ ಪೋಡಿಗಳೇ ಆಗಿವೆ. ಸೋಲಿಗ ಮತ್ತು ಜೇನುಕುರುಬ ಸಮುದಾಯವನ್ನು ಮುಖ್ಯವಾಹಿನಿಗೆ ತರುವಲ್ಲಿ ಈ ವಸತಿ ಪ್ರದೇಶಗಳು ಗಣನೀಯ ಪಾತ್ರ ವಹಿಸಿವೆ. ಹಲವಾರು ಕುಟುಂಬಗಳು 40–50 ವರ್ಷಗಳ ಹಿಂದೆಯೇ ಈ ವಸತಿ ಪ್ರದೇಶಗಳ ಸಂಪರ್ಕವನ್ನು ಇಟ್ಟುಕೊಂಡವರಾಗಿದ್ದಾರೆ. ಇವರು ವಾಸಸುತ್ತಿರುವ ಎಲ್ಲ ಪ್ರದೇಶಗಳು ತಾವು ಹಿಂದೆ ವಾಸಿಸುತ್ತಿದ್ದ ಅರಣ್ಯ ಪ್ರದೇಶದ ಸನಿಹವೇ ಇದ್ದು, ಅರಣ್ಯ ಜೀವನದ ಅನುಭವವನ್ನು ಉಳಿಸುವ ಮಾದರಿಯದ್ದಾಗಿವೆ. ಹಲವಾರು ವಸತಿ ಪ್ರದೇಶಗಳು ಇತರೆ ಪ್ರದೇಶಗಳಿಗೆ ನೇರ ಸಂಪರ್ಕವನ್ನು ಹೊಂದಿರದ ಸ್ಥಳಗಳಾಗಿವೆ. ಹಾಗಾಗಿ ಮುಖ್ಯ ರಸ್ತೆಗೆ ಅಥವಾ ಸಾರಿಗೆ ವ್ಯವಸ್ಥೆ ಇರುವ ರಸ್ತೆಗೆ ಬರಲು ಕನಿಷ್ಠ ಒಂದು ಕಿ.ಮೀ. ಗಿಂತ ಹೆಚ್ಚು ದೂರ ಇವೆ. ಸರ್ಕಾರದ ಸಹಾಯದಿಂದ ಬಹುಪಾಲು ಮನೆಗಳು ನಿರ್ಮಿತವಾಗಿದ್ದರೂ ತಮ್ಮ ಹಳೆಯ ಸಂಪ್ರದಾಯದ ಶೈಲಿಗಳನ್ನು ವಿಸ್ತರಿಸಿದ ಮನೆಗಳನ್ನು ಕಟ್ಟಿಕೊಳ್ಳುವುದರ ಮೂಲಕ ಉಳಿಸಿಕೊಂಡಿದ್ದಾರೆ.

ಅರಣ್ಯದೊಳಗೆ ವಾಸಿಸುತ್ತಿರುವ ಕುಟುಂಬಗಳು ತಾವೇ ನಿರ್ಮಿಸಿಕೊಂಡ ಮನೆಗಳು ಅವರ ಕನಿಷ್ಠ ವಸತಿ ಸೌಲಭ್ಯಕ್ಕಷ್ಟೇ ಗಮನ ಕೊಟ್ಟಿರುವುದು ಸಹಜವೇ ಆಗಿದೆ. ಇರುವಷ್ಟೇ ಸಂಪನ್ಮೂಲಗಳಿಂದ ರಕ್ಷಣೆಗೆಂದು ಒಂದು ಆಧಾರವನ್ನು ನಿರ್ಮಿಸಿಕೊಂಡಿದ್ದಾರೆ. ಚಿತ್ರ 4.1 ಇದರ ಸಹಜ ಚಿತ್ರವನ್ನು ಕೊಡುವುದು. ಅಲ್ಲದೆ, ಬೆಟ್ಟದ ತಪ್ಪಲಿನಲ್ಲಿ ಅರಣ್ಯಕ್ಕೆ ಹತ್ತಿರವಾಗಿಯೇ ಕಾಡಿನ ಅಂಚಿನಲ್ಲಿ ವಾಸಿಸುವವರನ್ನು ಚಿತ್ರ 4.2ರಲ್ಲಿ ಕಾಣಬಹುದು. ಸುಮಾರು 80 ವರ್ಷಗಳ ಹಿಂದಯೇ ಅರಣ್ಯವನ್ನು ಬಿಟ್ಟು ಬಂದು ನಾಗರೀಕ ಸಮಾಜದ ವಾಸಸ್ಥಳಗಳ ಹತ್ತಿರ ಸರ್ಕಾರ ನಿರ್ಮಿಸಿಕೊಟ್ಟ ಮನೆಗಳಲ್ಲಿ ವಾಸಿಸುತ್ತಿರುವರನ್ನು ಚಿತ್ರ 4.3ರಲ್ಲಿ ಕಾಣಬಹುದಾಗಿದೆ.



ಚಿತ್ರ 4.1 ವಸತಿಗಾಗಿ ಬುಡಕಟ್ಟುಗಳು ತಾವೇ ನಿರ್ಮಿಸಿಕೊಂಡ ಮನೆಗಳು



ಚಿತ್ರ 4.2 ಅರಣ್ಯದ ಅಂಚಿನಲ್ಲಿ ವಾಸಕ್ಕಾಗಿ ಸರ್ಕಾರ ನಿರ್ಮಿಸಿಕೊಟ್ಟ ಮನೆಗಳು





ಚಿತ್ರ 4.3 ಅರಣ್ಯದಾಚೆ ನಗರಪ್ರದೇಶದ ಹತ್ತಿರದಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳ ಮನೆಗಳು

ಈ ಬಗೆಯ ಸೋಲಿಗರ ಮತ್ತು ಜೇನುಕುರುಬರ ನಡೆಯನ್ನು ಕಂಡಹಾಗೆ ತಿಳಿಯುವ ಅಂಶವೆಂದರೆ, ಕಾಡಿನೊಳಗಿಂದ ನಾಗರೀಕ ಜೀವನದ ಕಡೆಗೆ ಹೆಜ್ಜೆ ಇಟ್ಟಿರುವ ಇವರು ಮುಖ್ಯವಾಗಿ ಈ ನಾಗರೀಕತೆಯಡೆಗಿನ ಅವರ ಸಾಂಸ್ಕೃತಿಕ ಹೆಜ್ಜೆಗುರುತುಗಳು ಗೋಚರವಾಗುತ್ತವೆ. ಮುಖ್ಯವಾಹಿನಿಯತ್ತ ಸಾಗುತ್ತಿರುವ ಅವರ ಜೀವನ ವಿಧಾನವನ್ನು ವಸತಿ ಸ್ಥಳಗಳ ಬದಲಾವಣೆಯಲ್ಲೂ, ನೆಲೆಯಲ್ಲೂ ಗುರುತಿಸುವುದು ಸುಲಭವೇ ಇದೆ. ಇದರ ಬಹುವಾದ ಕಾರಣಗಳನ್ನು ಅವರ ಸಾಮಾಜಿಕ ಸ್ಥಿತಿ, ಆಡಳಿತ ನಿರ್ಧಾರಗಳು ಮುಂತಾದ ಸಂಗತಿಗಳಿಂದ ಹೆಚ್ಚಿನ ವಿವರಗಳನ್ನು ಹೊಂದಲು ಶಕ್ಯವಿದೆ. ಮುಂದೆ ಅದರ ವಿವರಗಳೂ ಇವೆ.

### 4.2.3 ಸಾಮಾಜಿಕ ವೈಶಿಷ್ಟತೆ

**ಕೌಟುಂಬಿಕ ವಿವರಗಳು:** ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿ ಸಾಮಾನ್ಯವಾಗಿ 3–6 ಸದಸ್ಯರನ್ನು ಒಳಗೊಂಡ ಕುಟುಂಬಗಳಿವೆ. ಸೋಲಿಗ ಕುಟುಂಬಗಳಲ್ಲಿಯ ಸರಾಸರಿ ಸದಸ್ಯರ ಸಂಖ್ಯೆ 6 ಇದ್ದರೆ ಜೇನುಕುರುಬರ ಕುಟುಂಬಗಳಲ್ಲಿಯ ಸರಾಸರಿ ಸದಸ್ಯರ ಸಂಖ್ಯೆ 4.90 ಇದೆ. ಗಂಡ, ಹೆಂಡತಿ ಮತ್ತು ಮಕ್ಕಳು ಬಹುತೇಕ ಕುಟುಂಬಗಳಲ್ಲಿ ಕಾಣಬರುವ ಸದಸ್ಯರಾಗಿರುತ್ತಾರೆ. ಸಾಮಾನ್ಯವಾಗಿ ಇವರಲ್ಲಿ ಅನೇಕರು ಮದುವೆ ಆದ ತಕ್ಷಣದಿಂದ ಬೇರೆಯೆ ಮನೆ ಮಾಡಿ ಹೊಸ ಸಂಸಾರ ಆರಂಭಿಸುವುದರಿಂದ ಇವರಲ್ಲಿ ಚಿಕ್ಕ ಕುಟುಂಬಗಳೇ ಹೆಚ್ಚಾಗಿ ಕಂಡುಬರುತ್ತವೆ. ಇವರು ವಾಸಿಸುತ್ತಿರುವ ಪ್ರದೇಶಗಳಿಗುಣವಾಗಿ ಕುಟುಂಬ ಸದಸ್ಯರ ಸಂಖ್ಯೆ ವಿವರಣೆ ಈ ರೀತಿಯಾಗಿದೆ. ಅರಣ್ಯದೊಳಗೆ ವಾಸಿಸುತ್ತಿರುವ ಕುಟುಂಬಗಳ ಸರಾಸರಿ ಸದಸ್ಯರ ಸಂಖ್ಯೆ 4–6, ಅರಣ್ಯದಂಚಿನಲ್ಲಿ ವಾಸಿಸುತ್ತಿರುವ ಕುಟುಂಬಗಳ ಸರಾಸರಿ ಸದಸ್ಯರ ಸಂಖ್ಯೆ 5–7 ಹಾಗೂ ಅರಣ್ಯದಾಚೆ ವಾಸಿಸುತ್ತಿರುವ ಕುಟುಂಬಗಳ ಸದಸ್ಯರ ಸರಾಸರಿ ಸಂಖ್ಯೆ 6–8 ಇದೆ. ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಯನ್ನು ಬಿಂಬಿಸುವ ಮಾಹಿತಿಯನ್ನು ಕೋಷ್ಟಕ 4.2 ನೀಡಿದೆ. ಮೈಸೂರು ಜಿಲ್ಲೆಯ ವಿವಿಧ ತಾಲ್ಲೂಕುಗಳಲ್ಲಿ ವಾಸಿಸುತ್ತಿರುವ ವಿವಿಧ ಬುಡಕಟ್ಟು ಕುಟುಂಬಗಳು ಮತ್ತು ಜನಸಂಖ್ಯೆಯ ವಿವರವನ್ನು ಅನುಬಂಧ 6ರಲ್ಲಿ ಕೊಡಲಾಗಿದೆ.

**ಕೋಷ್ಟಕ 4.2 ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳ ಸಾಮಾಜಿಕ ಮತ್ತು ಆರ್ಥಿಕ ವೈಶಿಷ್ಟ್ಯ**

| ಕ್ರ ಸಂ | ಸಾಮಾಜಿಕ ಮತ್ತು ಆರ್ಥಿಕ ವೈಶಿಷ್ಟ್ಯ | ಸೋಲಿಗರು (N=90) | ಜೇನುಕುರುಬರು (N=90) |
|---|---|---|---|
| 1 | ಕುಟುಂಬ ಸದಸ್ಯರು | 6.00 | 4.90 |
| 2 | ಭೂ ಹಿಡುವಳಿ (ಹೆಕ್ಟೆರ್/ ಪ್ರತಿ ಕುಟುಂಬ) | 0.82 | 0.45 |
| 3 | ಸಾಕ್ಷರತೆ | | |
| | ವಯಸ್ಕರು | 20.35 | 9.64 |
| | ಒಟ್ಟು ಸಾಕ್ಷರತೆ ಪ್ರಮಾಣ | 36.11 | 15.87 |

**ಶೈಕ್ಷಣಿಕ ಸ್ಥಿತಿ :** ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿಯ ಸಾಕ್ಷರರ ಪ್ರಮಾಣವು ನಮ್ಮ ರಾಜ್ಯದ ಸರಾಸರಿ ಸಾಕ್ಷರರ ಪ್ರಮಾಣದ (66.6/2001ರ ಗಣತಿಯಂತೆ)ಅರ್ದಕ್ಕಿಂತಲೂ ಕಡಿಮೆಯೇ ಇದೆ. ಸೋಲಿಗರಲ್ಲಿ ಸರಾಸರಿ ಸಾಕ್ಷರರ ಪ್ರಮಾಣ 20.35 ಇದ್ದರೆ, ಜೇನುಕುರುಬರಲ್ಲಿ ಕೇವಲ 15.87 ರಷ್ಟು ಮಾತ್ರ ಸಾಕ್ಷರರಿದ್ದಾರೆ. ಬುಡಕಟ್ಟು ಜನಾಂಗದ ಶಿಕ್ಷಣ ಸ್ಥಿತಿಯು ಆಧುನಿಕ ಶಿಕ್ಷಣದ ಪ್ರಾಥಮಿಕ ಹಂತಕ್ಕಷ್ಟೇ ಸೀಮಿತವಾಗಿದೆ. ಇವರು ವಾಸಿಸುವ ಪ್ರದೇಶಗಳಲ್ಲಿ ಕೆಲವು ಕಡೆ ಅಂಗನವಾಡಿಗಳು ಹಾಗೂ ಪ್ರಾಥಮಿಕ ಶಾಲೆಗಳನ್ನು ಮಾತ್ರ ಕಾಣಬಹುದು. ಇತ್ತೀಚಿಗೆ ಅಂದರೆ, 2000–2001ನೇ ಸಾಲಿನಲ್ಲಿ ಸರ್ಕಾರವು ಬುಡಕಟ್ಟು ಸಮುದಾಯಗಳಿಗಾಗಿ ಆಶ್ರಮ ಶಾಲೆಗಳನ್ನು ನಡೆಸುತ್ತಿದೆ ಕೋಷ್ಟಕ 4.3ರಲ್ಲಿ ಕೊಳ್ಳೆಗಾಲ ಮತ್ತು ಹೆಗ್ಗಡದೇವನಕೋಟೆಯಲ್ಲಿ ಬುಡಕಟ್ಟು ಮಕ್ಕಳಿಗಾಗಿ ಕಾರ್ಯನಿರ್ವಹಿಸುತ್ತಿರುವ ವಸತಿ ಶಾಲೆಗಳ ವಿವರಣೆಯನ್ನು ಕಾಣಬಹುದು. ಇವುಗಳು ಒಂದನೇ ತರಗತಿಯಿಂದ ಐದನೇ ತರಗತಿವರೆಗೆ ವಸತಿಯುತ ಶಾಲೆಗಳಾಗಿದ್ದು ಚಿತ್ರ 4.4ರಲ್ಲಿ ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ತಾಲ್ಲೂಕಿನ ಕೋಣನಕೆರೆಯಲ್ಲಿರುವ ಬುಡಕಟ್ಟು ಮಕ್ಕಳಿಗಾಗಿ ಕಾರ್ಯನಿರ್ವಹಿಸುತ್ತಿರುವ ಆಶ್ರಮ ಶಾಲೆಯನ್ನು ಕಾಣಬಹುದು. ಮತ್ತು ಊಟದ ವ್ಯವಸ್ಥೆಯ ಚಿತ್ರವನ್ನು 4.5ದಲ್ಲಿ ಕಾಣಬಹುದು. ಬಿಳಿಗಿರಿ ರಂಗನ ಬೆಟ್ಟ ಪ್ರದೇಶದಲ್ಲಿರುವ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ ಹಾಗೂ ಹೆಗ್ಗಡದೇವನಕೋಟೆ ತಾಲ್ಲೂಕಿನ ಬೀರಂಬಳ್ಳಿಯಲ್ಲಿರುವ ವಿವೇಕ ಶೈಕ್ಷಣಿಕ ಕೇಂದ್ರವು ಬುಡಕಟ್ಟು ಮಕ್ಕಳಿಗೆ ಹೆಚ್ಚಿನ ವಿದ್ಯಾಭ್ಯಾಸಕ್ಕೆ ಆಸಕ್ತಿ ಮೂಡಿಸಿ ಅನುವು ಮಾಡಿ ಕೊಟ್ಟಿವೆ.

ಶಿಕ್ಷಣ ಅಭಿವೃದ್ಧಿಯ ಬಹುಮುಖ್ಯ ಮಾನದಂಡ ಸಮಾಜದ ಎಲ್ಲ ಆಶಯಗಳಿಗೆ ಕಲಿಕೆಯ ಮೂಲ ಸಾಮಗ್ರಿಯನ್ನೊದಗಿಸುವ ಪ್ರಕ್ರಿಯೆ. ಮನೆ, ಶಾಲೆ, ಸಂಸ್ಥೆ, ಕೇಂದ್ರಗಳು ಎನ್ನುವುದು ಸಾಂಪ್ರದಾಯಿಕವಾಗಿ ಎಲ್ಲ ನಾಗರಿಕ ಸಮಾಜದಲ್ಲಿ ವಿಕಾಸಗೊಂಡ ಕ್ರಮ. ಇದೇ ಮಾದರಿಯಲ್ಲಿ ಶಿಕ್ಷಣವನ್ನು ಪ್ರಸ್ತುತ ಅರಣ್ಯವಾಸಿ ಗಿರಿಜನರಿಗೆ 'ಹೇಗಿದೆಯೋ ಹಾಗೆ ಪುನರಾವರ್ತಿಸಲಾಗದು. ಹಾಗೆಂದೇ ಗಿರಿಜನ ಆಶ್ರಮ ಶಾಲೆಗಳು ಶಿಕ್ಷಣ ಹಾಗೂ ಸಮಾಜ ಕಲ್ಯಾಣ ಇಲಾಖೆಯ ಜಂಟಿ ಆಯೋಜನೆಗಳಾಗಿವೆ. ಈ ಎರಡು ಅಭಿವೃದ್ಧಿ ಇಲಾಖೆಗಳ ಜಂಟಿ ಕಾರ್ಯ ಯೋಜನೆಯಡಿ ಗಿರಿಜನ ಆಶ್ರಮ ಶಾಲೆಗಳು ವಿಕಸನಗೊಂಡಿವೆ. ಇವು ಕಲಿಕೆ ತಾಣವೂ, ವಸತಿ ತಾಣವೂ ಆಗಿದ್ದು ಗಿರಿಜನ ಮಕ್ಕಳ ಪೌಷ್ಟಿಕ, ಮಾನಸಿಕ, ದೈಹಿಕ ಅಗತ್ಯಗಳನ್ನು ಪರಿಪೂರ್ಣವಾಗಿ ಒದಗಿಸುವ ನಿಟ್ಟಿನಲ್ಲಿ ಆರಂಭಿಸಲಾಗಿದೆ.

ಸದ್ಯದ ಪರಿಸ್ಥಿತಿಯಲ್ಲಿ ಮಕ್ಕಳು ಶಾಲೆಯನ್ನು ಮಾತ್ರ ಬಳಸದ, ಆದರೂ ತಂಗಲು ರಾತ್ರಿ ಪೋಷಕರನ್ನು ಸೇರುವ ಕ್ರಮವೇ ರೂಢಿಯಲ್ಲಿದ್ದಂತೆ ಕಾಣುವುದು. ಮಕ್ಕಳಲ್ಲಿ ಕಲಿಕೆ ಸಾಮರ್ಥ್ಯ ಮತ್ತು ಆಸಕ್ತಿ ನಿರಂತರವಾಗಿ ಅಭಿವೃದ್ಧಿಯತ್ತ ಸಾಗುತ್ತಿರುವುದು ಸುಮಾರು 17 ವರ್ಷದಿಂದ ಗಿರಿಜನ ಮಕ್ಕಳಿಗೆ ಕಲಿಸುತ್ತಿರುವ ಉಪಾಧ್ಯಾಯರ ಅನಿಸಿಕೆ. ಶಾಲೆಗಳಲ್ಲಿ ಕಲಿತ ಹಾಗೂ ಹೆಚ್ಚಿನ ಕಲಿಕೆಯ ಆಸಕ್ತಿಯನ್ನು ಉಳ್ಳವರಿಗೆ ಮುಂದೆ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಬಿಳಿಗಿರಿ ರಂಗನಬೆಟ್ಟದಲ್ಲಿ ವ್ಯವಸ್ಥೆಗೆ ಅವಕಾಶವಿದೆ.



ಚಿತ್ರ 4.4 ಕೋಣನಕೆರೆಯಲ್ಲಿರುವ ಗಿರಿಜನ ವಸತಿ ಶಾಲೆಯ ನೋಟ



ಚಿತ್ರ 4.5 ಗಿರಿಜನ ವಸತಿ ಶಾಲೆಯ ವಸತಿನಿಲಯದಲ್ಲಿ ಊಟದ ಸಮಯದಲ್ಲಿ ಮಕ್ಕಳು

**ಕೋಷ್ಟಕ-4.3 ಚಾಮರಾಜನಗರ ಜಿಲ್ಲೆಯ ಕೊಳ್ಳೆಗಾಲ ಮತ್ತು ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆಯಲ್ಲಿ ಬುಡಕಟ್ಟು ಮಕ್ಕಳಿಗಾಗಿ ಕಾರ್ಯನಿರ್ವಹಿಸುತ್ತಿರುವ ವಸತಿ ಶಾಲೆಗಳು**

| ತಾಲ್ಲೂಕು | ಆಶ್ರಮ ಶಾಲೆಗಳು | | ಮೊರಾರ್ಜಿ ವಸತಿ ಶಾಲೆಗಳು | | | ಕಿತ್ತೂರ ಚನ್ನಮ್ಮ ವಸತಿ ಶಾಲೆಗಳು | |
|---|---|---|---|---|---|---|---|
| ಕೊಳ್ಳೆಗಾಲ | 10 | 1175 | 1 | 113 | | – | – |
| ಹೆಗ್ಗಡದೇವನಕೋಟೆ | 10 | 1550 | 2 | 300 | | 1 | 50 |

### 4.2.4 ಜೀವನೋಪಾಯಗಳು

ಕೃಷಿ, ಕೂಲಿ ಕೆಲಸ, ಅರಣ್ಯ ಉತ್ಪನ್ನಗಳ ಸಂಗ್ರಹಣೆ, ಪಶು ಸಂಗೋಪನೆ ಇವು ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಜೀವನೋಪಾಯಕ್ಕಾಗಿ ಪ್ರಮುಖವಾಗಿ ನಿರ್ವಹಿಸುತ್ತಿರುವ ಉದ್ಯೋಗಗಳಾಗಿವೆ. ಸೋಲಿಗ ಬುಡಕಟ್ಟುಗಳು ಪ್ರಮುಖವಾಗಿ ಜೀವನೋಪಾಯಕ್ಕಾಗಿ ಕೃಷಿ, ಅರಣ್ಯ ಉತ್ಪನ್ನಗಳ ಸಂಗ್ರಹಣೆಯಲ್ಲಿ ತೊಡಗಿದ್ದರೆ, ಜೇನು ಕುರುಬ ಬುಡಕಟ್ಟುಗಳು ಹೆಚ್ಚಾಗಿ ಕೂಲಿ ಕೆಲಸ ಮತ್ತು ಅರಣ್ಯ ಉತ್ಪನ್ನಗಳ ಸಂಗ್ರಹಣೆಯ ಮೇಲೆ ಅವಲಂಬಿತವಾಗಿವೆ. ವಾಸಸ್ಥಳಗಳ ಆಧಾರದ ಮೇಲೆ ವಿವಿಧ ವೃತ್ತಿ ನಿರತರನ್ನು ವಿಶ್ಲೇಷಿಸಿದಾಗ ಅರಣ್ಯದಾಚೆ ವಾಸಿಸುತ್ತಿರುವವರಲ್ಲಿ ಬಹುತೇಕ ಕುಟುಂಬಗಳು (ಶೇಕಡ 86.15ರಷ್ಟು) ಕೃಷಿಯಲ್ಲಿ ತೊಡಗಿದ್ದರೆ, ಅರಣ್ಯದೊಳಗೆ ವಾಸಿಸುವವರಲ್ಲಿ ಬಹುತೇಕ ಕುಟುಂಬಗಳು ಅರಣ್ಯ ಉತ್ಪನ್ನಗಳ ಸಂಗ್ರಹಣೆಯಲ್ಲಿ ನಿರತರಾಗಿರುವುದು ಕಂಡುಬರುತ್ತದೆ (48.55 %). ಕೃಷಿ ಮತ್ತು ಅರಣ್ಯ ಉತ್ಪನ್ನಗಳ ಸಂಗ್ರಹಣೆಯನ್ನು ಬಿಟ್ಟು ಇನ್ನುಳಿದಂತೆ ಅನೇಕರು ಬೇರೆಯವರ ಜಮೀನುಗಳಲ್ಲಿ ಕೂಲಿ ಕಾರ್ಮಿಕರಾಗಿ ದುಡಿಯುತ್ತಿರುವುದು ಸಾಮಾನ್ಯವಾಗಿದೆ. ಕೋಷ್ಟಕ 4.4 ರಲ್ಲಿ ಸೋಲಿಗ ಮತ್ತು ಜೇನುಕುರುಬರ ವಿವಿಧ ಬಗೆಯ ವೃತ್ತಿಗಳ ವಿವರವನ್ನು ಕೊಡಲಾಗಿದೆ. ಅಲ್ಲದೆ ಕೋಷ್ಟಕ 4.5 ರಲ್ಲಿ ವಿವಿಧ ವಸತಿ ಪ್ರದೇಶಗಳಲ್ಲಿ ವಾಸಿಸುತ್ತಿರುವ ಸೋಲಿಗ ಮತ್ತು ಜೇನುಕುರುಬರ ಜೀವನೋಪಾಯಗಳ ವಿವಿಧ ಬಗೆಯ ಚಿತ್ರಣವನ್ನು ಕೊಡಲಾಗಿದೆ.

**ಕೋಷ್ಟಕ 4.4 ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳ ವೃತ್ತಿಗಳು**

| ವೃತ್ತಿಗಳು | ಸೋಲಿಗ ಬುಡಕಟ್ಟು ಕುಟುಂಬಗಳು (N=90) | ಜೇನುಕುರುಬ ಬುಡಕಟ್ಟು ಕುಟುಂಬಗಳು (N=90) |
|---|---|---|
| ಕೃಷಿ | 33.58 | 13.31 |
| ಕೂಲಿ/ ಕಾರ್ಮಿಕರು | 17.28 | 40.78 |
| ಅರಣ್ಯ ಉತ್ಪನ್ನಗಳ ಸಂಗ್ರಹಣೆ | 26.32 | 39.47 |
| ಪಶು ಸಂಗೋಪನೆ | 7.19 | 3.40 |
| ಇತರೆ | 15.63 | 3.04 |

**ಕೋಷ್ಟಕ 4.5 ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳ ವಿವಿಧ ವಸತಿಗೆ ಅನುಗುಣವಾದ ಜೀವನೋಪಾಯಗಳು**

| ಜೀವನೋಪಾಯ | ಅರಣ್ಯದೊಳಗೆ ವಾಸಿಸುವವರು | ಅರಣ್ಯದಂಚಿನಲ್ಲಿ ವಾಸಿಸುವವರು | ಅರಣ್ಯದಾಚೆ ವಾಸಿಸುವವರು |
|---|---|---|---|
| ಕೃಷಿ | 20.74 | 33.58 | 86.15 |
| ಕೂಲಿ/ ಕಾರ್ಮಿಕರು | 25.16 | 17.28 | 1.20 |
| ಅರಣ್ಯ ಉತ್ಪನ್ನಗಳ ಸಂಗ್ರಹಣೆ | 48.55 | 26.32 | 0.0 |
| ಪಶು ಸಂಗೋಪನೆ | 1.38 | 10.74 | 9.52 |
| ಇತರೆ | 4.17 | 12.08 | 0.06 |

**ಕೃಷಿ:** ಕೃಷಿಯನ್ನು ಮತ್ತು ಸಂಸ್ಕೃತಿಯನ್ನು ಬೇರೆ ಬೇರೆಯಾಗಿ ನೋಡುವುದು ಸಾಧ್ಯವೇ ಇಲ್ಲ. ಎಲ್ಲ ಸಂಸ್ಕೃತಿ ಮತ್ತು ನಾಗರಿಕತೆಗಳ ಮೂಲ ಸೆಲೆಯೇ ಕೃಷಿ. ಗೆಡ್ಡೆ ಗೆಣಸು ಸಂಗ್ರಹಿಸುವ ಮತ್ತು ಬೇಟೆಯಾಡುವ ಮಾನವ ಕ್ರಮೇಣ ಕೃಷಿಗಾಗಿ ಒಂದೆಡೆ ನೆಲೆಯೂರಿದಾಗ ನಾಗರಿಕತೆ ಪ್ರಾರಂಭವಾಯಿತು. ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಸಹ ಬೆಟ್ಟದಿಂದ ಮೈದಾನ ಪ್ರದೇಶದ ಕಡೆ ಬಂದು ನೆಲೆ ಕಂಡುಕೊಂಡಾಗ ಜೀವನೋಪಾಯಕ್ಕಾಗಿ ಕೃಷಿಯಲ್ಲಿ ತೊಡಗಿದರು. ಇವರು ಕೃಷಿಯಲ್ಲಿ ಕುಮರಿ ಬೇಸಾಯ ಪದ್ದತಿಯನ್ನು ಅನೇಕ ವರ್ಷಗಳಿಂದ ರೂಢಿಸಿಕೊಂಡಿದ್ದರು. ಅರಣ್ಯ ನೀತಿಯ ಜಾರಿ ನಂತರ ಸ್ಥಿರ ಬೇಸಾಯ ಪದ್ದತಿಗೆ ಬದಲಾಗುತ್ತಿದ್ದಾರೆ. ಸರ್ಕಾರವು ಈ ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕೋಸ್ಕರ ಅವರಿಗೆ 2ರಿಂದ 2.1/2 ಎಕರೆ ಜಮೀನನ್ನು ನೀಡಿದ್ದಾರೆ. ಆದರೆ ಇವರಲ್ಲಿ ಅನೇಕರಿಗೆ ಇದುವರೆಗೆ ಕೃಷಿ ಭೂಮಿಯ ಖಾತೆ ಇತ್ಯಾದಿಗಳು ಅವರ ಹೆಸರಿಗೆ ನೋಂದಣಿಯಾಗಿಲ್ಲ.

ಭಾರತಕ್ಕೆ ಸ್ವಾತಂತ್ರ್ಯ ದೊರಕಿದಾಗ ಭಾರತೀಯ ಕೃಷಿಯು ಪ್ರಧಾನವಾಗಿ ಕೌಟುಂಬಿಕ ಕೃಷಿಯಾಗಿತ್ತು. ಸಾಮಾನ್ಯವಾಗಿ ಅದು ಬದುಕಿನ ಒಂದು ವಿಧಾನವಾಗಿತ್ತು, ಜೀವನಾಧಾರದ ಕಸುಬಾಗಿತ್ತು. ಸ್ಥಳೀಯ ಸಂಪ್ರದಾಯ ಮತ್ತು ಸಂಸ್ಕೃತಿಯೇ ಕೃಷಿ ಜೀವನದ ಆಧಾರವಾಗಿತ್ತು. ಅದು ಸಂಪೂರ್ಣ ಸ್ವಾವಲಂಬನೆಯ ಉದ್ಯೋಗವಾಗಿತ್ತು. ಅದಕ್ಕಾಗಿ ಹಿಂದಿನ ಬೆಳೆಯಿಂದ ಬಿತ್ತನೆ ಬೀಜ, ಸಸ್ಯ ಮತ್ತು ಪ್ರಾಣಿ ತ್ಯಾಜ್ಯಗಳಿಂದ ಗೊಬ್ಬರ ಹಾಗೂ ಕುಟುಂಬದ ಸದಸ್ಯರಿಂದ ಶ್ರಮ ಬರುತ್ತಿತ್ತು. ಬೇಸಾಯ ಪದ್ದತಿಗಳು ಶತಶತಮಾನದ ಅನುಭವ ಆಧಾರಿತ ಮಿಶ್ರಬೆಳೆ, ಮಿಶ್ರಕೃಷಿ ಮತ್ತು ಬೆಳೆ ಆವರ್ತನೆ ಮುಂತಾದ ಪದ್ಧತಿಗಳಾಗಿತ್ತು ಹಾಗೂ ಕೃಷಿ ಉತ್ಪಾದನೆ ಮುಖ್ಯವಾಗಿ ಕುಟುಂಬದ ಬಳಕೆಗಾಗಿತ್ತು. ಒಟ್ಟಾರೆ ಅದು, ಸುಸ್ಥಿರ ಕೌಟುಂಬಿಕ ಉದ್ಯೋಗವಾಗಿತ್ತು. ಈ ರೀತಿಯ ಕೃಷಿ ಪದ್ದತಿಯನ್ನು ಇಂದಿಗೂ ನಾವು ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿ ಕಾಣಬಹುದಾಗಿದೆ. ಚಿತ್ರ 4.6 ರಲ್ಲಿ ಕೃಷಿ ಚಟುವಟಿಕೆಯಲ್ಲಿ ನಿರತ ಸೋಲಿಗರನ್ನು ಕಾಣಬಹುದು.

ರಾಗಿ, ಮುಸುಕಿನಜೋಳ, ಅವರೆ ಮತ್ತು ಅಲಸಂದಿ ಬೆಳೆಗಳು, ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಬೆಳೆಯುವ ಪ್ರಮುಖ ಬೆಳೆಗಳಾಗಿವೆ. ಬಿತ್ತನೆಗೆ ಬೇಕಾದ ಬೀಜಗಳನ್ನು

ಇವರೇ ಸಂಗ್ರಹಿಸಿಟ್ಟುಕೊಂಡು ಬಳಸುತ್ತಾರೆ. ಮತ್ತು ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಲಭ್ಯವಿರುವ ಯಾವುದೇ ರಾಸಾಯನಿಕಗಳಿಗೆ ಮೊರೆ ಹೋಗದೆ ತಾವೇ ತಯಾರಿಸಿದ ಕಾಂಪೋಸ್ಟ್ ಗೊಬ್ಬರಗಳನ್ನು ಬಳಸುತ್ತಿದ್ದಾರೆ. ಬೆಳೆದ ಬೆಳೆಯನ್ನು ಸಂಪೂರ್ಣವಾಗಿ ಮಾರಾಟ ಮಾಡದೇ ಮುಖ್ಯವಾಗಿ ತಮ್ಮ ಮನೆ ಬಳಕೆಗಾಗಿ ಉಪಯೋಗಿಸುತ್ತಾರೆ.

ರಾಗಿಯು ಅಧ್ಯಯನ ಪ್ರದೇಶದ ಎಲ್ಲ ಕುಟುಂಬಗಳು ಬೆಳೆಯುವ ಬೆಳೆಯಾಗಿದೆ. ಇತ್ತೀಚಿನ ದಿನಗಳಲ್ಲಿ ಬಿಳಿಗಿರಿ ರಂಗನ ಬೆಟ್ಟ ಪ್ರದೇಶದ ಸೋಲಿಗರಲ್ಲಿ ಕೆಲವರು ಪಕ್ಕದ ಕಾಫಿ ತೋಟಗಳ ಬೆಳೆಗಾರರರಿಂದ ಪ್ರೇರಿತರಾಗಿ ಕಾಫಿ ಬೆಳೆಯತ್ತಿದ್ದಾರೆ. ಅರಣ್ಯದಾಚೆ ವಾಸಿಸುವವರಲ್ಲಿ ಕೆಲವರು ಭತ್ತ ಮತ್ತು ಕಬ್ಬನ್ನು ಆರ್ಥಿಕ ಬೆಳೆಯಾಗಿ ಬೆಳೆಯುತ್ತಿದ್ದಾರೆ. ರಾಗಿಯಲ್ಲಿ ಸಂಪ್ರದಾಯಕ ತಳಿಗಳಾದ ಸಣ್ಣರಾಗಿ, ದೊಡ್ಡರಾಗಿ, ನಾಡರಾಗಿ, ಗಿಡ್ಡ ರಾಗಿ ಮತ್ತು ಮಳೆರಾಗಿ ಎಂಬ ಸ್ಥಳೀಯ ತಳಿಗಳನ್ನು ತಾವೇ ಜತನವಾಗಿ ಸಂಗ್ರಹಿಸಿಟ್ಟುಕೊಂಡು ಉಪಯೋಗಿಸುತ್ತಿದ್ದಾರೆ. ಅರಣ್ಯದಾಚೆ ಇರುವವರು ಸಾಂಪ್ರದಾಯಿಕ ತಳಿ ಜತೆಗೆ ಸುಧಾರಿತ ತಳಿಯ ರಾಗಿಯನ್ನು ಕೆಲವರು ಬಿತ್ತನೆಗೆ ಉಪಯೋಗಿಸುತ್ತಿದ್ದಾರೆ. ರಾಗಿ ಇವರ ಪ್ರಮುಖ ಬೆಳೆಯಾಗಿದ್ದರೂ ಇದರೊಂದಿಗೆ ಮುಸುಕಿನ ಜೋಳ, ಹುಚ್ಚೆಳ್ಳು ಮತ್ತು ಸಾಸುವೆಯನ್ನು ಮಿಶ್ರ ಬೆಳೆಯಾಗಿ ಬೆಳೆಯುವುದನ್ನು ರೂಢಿಸಿಕೊಂಡಿದ್ದಾರೆ.

**ಬೆಳೆ ವಿಧಾನ :** ಇವರು ಕೃಷಿ ಚಟುವಟಿಕೆಗಾಗಿ ಆಧುನಿಕ ಪರಿಕರಗಳಿಗೆ ಮೊರೆಹೋಗದೆ, ಕೈಕೆಲಸದ ಮೇಲೆಯೆ ಹೆಚ್ಚು ಅವಲಂಬಿತರಾಗಿದ್ದಾರೆ. ಯಾವುದೇ ಬೆಳೆ ಇಡುವ ಮೊದಲು ಹಿಂದಿನ ಬೆಳೆಯ ಉಳಿಕೆಗಳನ್ನು ಹೊಲದಲ್ಲಿಯೇ ಸುಡುವುದು ನಂತರ, ಹೊಲವನ್ನು ಬಿತ್ತುವುದಕ್ಕಾಗಿ ಅಣಿ ಮಾಡಿಕೊಳ್ಳುವುದು ಕಂಡುಬರುತ್ತದೆ. ಇವರು ಮಿಶ್ರ ಬೆಳೆ ಬೆಳೆಯುವುದನ್ನು ರೂಢಿಸಿಕೊಂಡಿದ್ದಾರೆ. ಮೊದಲು ಮುಸುಕಿನ ಜೋಳವನ್ನು ಸಲಕೆಯ ಸಹಾಯದಿಂದ ಭೂಮಿಯಲ್ಲಿ ಊರುತ್ತಾರೆ. ಒಂದು ಮಳೆ ಬಂದ ನಂತರ ಮತ್ತೆ ಸಲಕೆಯ ಸಹಾಯದಿಂದ ಹೊಲವನ್ನು ಉಳುಮೆ ಮಾಡಿ ರಾಗಿಯನ್ನು ಚೆಲ್ಲುತ್ತಾರೆ. ಮತ್ತೆ ಒಂದು ಉಳುಮೆ ಮಾಡಿ ಬೀಜಗಳ ಮೇಲೆಲ್ಲ ಮಣ್ಣು ಬೀಳುವ ಹಾಗೆ ನೋಡಿಕೊಳ್ಳುತ್ತಾರೆ. ಬೆಳೆ ಹಂತದಲ್ಲಿ ಯಾವುದೇ ರಾಸಾಯನಿಕ ಗೊಬ್ಬರಗಳನ್ನು ಬಳಸದೇ ಕೊಟ್ಟಿಗೆ ಗೊಬ್ಬರವನ್ನು ಮಾತ್ರ ಬಳಸುತ್ತಾರೆ. ಹೊಲದಲ್ಲಿ ತುಂಬಾ ಪ್ರಮಾಣದಲ್ಲಿ ಕಳೆ ಬೆಳೆದಿದ್ದರೆ ಮಾತ್ರ ಅದೂ ಕೈಯಿಂದ ಕಳೆ ಕೀಳುತ್ತಾರೆ. ಕೊಯ್ಲನ್ನು ಒಂದೇ ಬಾರಿಗೆ ಮಾಡದೆ, ಬೆಳೆ ಬಂದ ಹಾಗೆ ಒಂದೊಂದಾಗಿ ಕಟಾವು ಮಾಡುತ್ತಾರೆ. ನಂತರ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ತಮ್ಮ ಮನೆ ಬಳಕೆಗಾಗಿ ಸಂಗ್ರಹಿಸಿಟ್ಟುಕೊಳ್ಳುತ್ತಾರೆ.

**ಅರಣ್ಯ ಉತ್ಪನ್ನಗಳ ಸಂಗ್ರಹಣೆ :** ಅರಣ್ಯದಲ್ಲಿ ವಾಸವಾಗಿರುವ ಬಹುತೇಕ ಕುಟುಂಬಗಳಿಗೆ ಅರಣ್ಯ ಉತ್ಪನ್ನಗಳ ಸಂಗ್ರಹಣೆಯು ದಿನನಿತ್ಯದ ಅವಶ್ಯಕತೆಗಳಾದ ಉರುವಲು, ಮರಮುಟ್ಟು, ಗೆಡ್ಡೆ-ಗೆಣಸು, ಸೊಪ್ಪು ತರಕಾರಿ ಮತ್ತು ಹಣ್ಣುಗಳನ್ನು ಒದಗಿಸುವುದಲ್ಲದೆ, ಅನೇಕ ಕಿರುಉತ್ಪನ್ನಗಳಾದ ಜೇನು, ಮೇಣ, ಸೀಗೆಕಾಯಿ, ಧೂಪ, ಅಳಲೆಕಾಯಿ, ನೆಲ್ಲಿಕಾಯಿ ಮುಂತಾದವುಗಳನ್ನು ಸಂಗ್ರಹಿಸಿ ತಂದು ಹತ್ತಿರದ ಮಾರುಕಟ್ಟೆ ಮತ್ತು ಲ್ಯಾಂಪ್ ಸೊಸೈಟಿಗೆ ಮಾರುವುದರಿಂದ ಇವರ ಆರ್ಥಿಕತೆಗೆ

ಪ್ರಮುಖ ಜೀವನಾಧಾರ ಒದಗಿಸಿದೆ. ಚಿತ್ರ 4.7 ರಲ್ಲಿ ಗಿಡದ ಬೇರುಗಳನ್ನು ಸಂಗ್ರಹಿಸುವದರಲ್ಲಿ ತೊಡಗಿದ ಜೇನುಕುರುಬರ ಮಕ್ಕಳನ್ನು ಕಾಣಬಹುದು. ಇಲ್ಲಿನ ಬಹುತೇಕ ಕುಟುಂಬಗಳು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಮಾರಾಟ ಮಾಡುವುದರಲ್ಲಿ ತೊಡಗಿರುವುದರಿಂದ ಇವರಿಗೆ ವರ್ಷ ಪೂರ್ತಿ ಉದ್ಯೋಗವನ್ನು ಒದಗಿಸಿದೆ. ಈ ವೃತ್ತಿಯು ಹೆಚ್ಚು ಬಂಡವಾಳ ಬೇಡದ ಹಾಗೂ ತಾಂತ್ರಿಕತೆ ನಿರೀಕ್ಷಿಸದ ಉದ್ಯೋಗವಾಗಿದೆ.

**ಪಶುಸಂಗೋಪನೆ** : ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯವು ಪಶು ಸಂಗೋಪನೆಯಲ್ಲಿ ಹೆಚ್ಚು ಆಸಕ್ತರಾಗಿಲ್ಲ. ತಮ್ಮ ಆಹಾರದ ಉಪಯೋಗ ಮತ್ತು ಗೊಬ್ಬರದ ಉತ್ಪಾದನೆಗಾಗಿ ಮಾತ್ರ ಇವರ ಪಶುಸಂಗೋಪನೆಯ ಆಸಕ್ತಿ ಕಂಡುಬರುತ್ತದೆ. ಅದಕ್ಕಾಗಿ ಕೆಲವು ದನಕರುಗಳು, ಆಡು, ಕೋಳಿಗಳನ್ನು ಸಾಕಿಕೊಂಡಿದ್ದಾರೆ. ಪಶುಸಂಗೋಪನೆಯಲ್ಲಿ ತೊಡಗಿರುವ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳ ವಿವರಣೆಯನ್ನು ಕೋಷ್ಟಕ 4.6 ರಲ್ಲಿ ನೀಡಲಾಗಿದೆ.

ಅರಣ್ಯಗೊಳಗೆ ವಾಸಿಸುತ್ತಿರುವ ಬುಡಕಟ್ಟುಗಳಲ್ಲಿ ಹಸು ಸಾಕಾಣಿಕೆಯು ಅಷ್ಟಾಗಿ ಕಂಡುಬಂದಿಲ್ಲ. ಇವರಲ್ಲಿ ಕೆಲವೇ ಕುಟುಂಬಗಳು ಮಾತ್ರ ಹಸು ಸಂಗೋಪಣೆಯಲ್ಲಿ ತೊಡಗಿವೆ ಇದಕ್ಕೆ ವನ್ಯ ಪ್ರಾಣಿಗಳ ಉಪಟಳ ಮತ್ತು ಅರಣ್ಯಾಧಿಕಾರಿಗಳು ಹಸುಗಳನ್ನು ಸಾಕುವುದಕ್ಕೆ ಅನುಮತಿಯನ್ನು ನೀಡದಿರುವುದು ಕಾರಣವಾಗಿರಬಹುದು

ಮೇಕೆ ಸಾಕಾಣಿಕೆ ಇವರಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಮೇಕೆಗಳನ್ನು ಹಬ್ಬದ ಸಮಯದಲ್ಲಿ ಮಾಂಸಾಹಾರಕ್ಕಾಗಿ ಎಂದೇ ಸಾಕುತ್ತಾರೆ. ಕೆಲವೊಂದು ಸಮಯ ಹಣದ ಅವಶ್ಯಕತೆ ಇದ್ದಾಗ ಮಾರಾಟ ಮಾಡಲಿಕ್ಕೆಂದು ಸಾಕುವುದುಂಟು. ಮೇಕೆಗಳಿಗೆ ಹೋಲಿಸಿದರೆ ಕುರಿ ಸಾಕಾಣಿಕೆ ಕಡಿಮೆಯೆ ಇದೆ.

ಕೋಳಿ ಸಾಕಾಣಿಕೆಯ ನಿರ್ವಹಣೆ ಖರ್ಚು ಕಡಿಮೆ ಇರುವುದರಿಂದ ಮತ್ತು ಮನೆಯ ಹಿತ್ತಲಿನಲ್ಲಿ ಸುಲಭವಾಗಿ ಸಾಕಬಹುದಾದ್ದರಿಂದ ಕೆಲ ಕುಟುಂಬಗಳು ಕೋಳಿಸಾಕಾಣಿಕೆಯಲ್ಲಿ ಆಸಕ್ತಿಯನ್ನು ಹೊಂದಿವೆ. ಪ್ರತಿಯೊಂದು ಕುಟುಂಬಗಳಲ್ಲಿ 2–6(5.26%) ಕೋಳಿಗಳಿರುವುದು ಕಂಡುಬರುತ್ತದೆ.

**ಕೋಷ್ಟಕ – 4.6 ಪಶುಸಂಗೋಪನೆಯಲ್ಲಿ ತೊಡಗಿರುವ ಸಮುದಾಯಗಳು**

| ಪಶುಗಳು | ಸೋಲಿಗ ಬುಡಕಟ್ಟು | ಜೇನುಕುರುಬ ಬುಡಕಟ್ಟು |
|---|---|---|
| ಎತ್ತು | 1.81 | 0.60 |
| ಎಮ್ಮೆ | 0.26 | 0.00 |
| ಆಡು | 1.80 | 2.24 |
| ಕುರಿ | 0.73 | 0.53 |
| ಕೋಳಿ | 5.26 | 6.30 |



ಚಿತ್ರ 4.6 ಕೃಷಿ ಚಟುವಟಿಕೆಯಲ್ಲಿ ನಿರತ ಸೋಲಿಗ ಬುಡಕಟ್ಟು



ಚಿತ್ರ 4.7 ಅರಣ್ಯ ಉತ್ಪನ್ನಗಳ ಸಂಗ್ರಹಣೆಯಲ್ಲಿ ನಿರತ ಜೇನುಕುರುಬ ಮಕ್ಕಳು

### 4.2.5 ಬುಡಕಟ್ಟುಗಳಿಗಾಗಿ ಕಾರ್ಯನಿರ್ವಹಿಸುತ್ತಿರುವ ಸಂಘ ಸಂಸ್ಥೆಗಳು

**ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ, ಬಿಳಿಗಿರಿರಂಗನ ಬೆಟ್ಟ, ಚಾಮರಾಜನಗರ ಜಿಲ್ಲೆ :** ನಿಸರ್ಗವೇ ಸರ್ವಸ್ವವೆಂದು ನಂಬಿ ನಿಸರ್ಗದ ಜತೆಯಲ್ಲಿ ಶತಮಾನಗಳ ಕಾಲದಿಂದ ಜೀವನ ನಡೆಸಿಕೊಂಡು ಬಂದಿರುವ ಸೋಲಿಗರನ್ನು ಸರ್ಕಾರದ ಅರಣ್ಯ ಸಂರಕ್ಷಣೆ ಕಾಯಿದೆ ಅಡಿಯಲ್ಲಿ ಅರಣ್ಯದಿಂದ ಹೊರಗೆ ಹೋಗಬೇಕಾದ ಪರಿಸ್ಥಿತಿಯಿಂದಾಗಿ ಜೀವನೋಪಾಯಕ್ಕಾಗಿ ಅರಣ್ಯವನ್ನೇ ಪ್ರಮುಖವಾಗಿ ಅವಲಂಬಿಸಿದ್ದ ಇವರ ಜೀವನವು ಸಂಕಷ್ಟಕ್ಕೆ ಒಳಗಾಯಿತು. ಇತ್ತ ನಾಗರೀಕ ಸಮಾಜದ ಜತೆ ಮಾತನಾಡಲೂ ಹಿಂಜರಿಯುವ, ಸರ್ಕಾರ ಇವರಿಗಾಗಿ ಯೋಜಿಸಿದ ಯಾವುದೇ ಯೋಜನೆಗಳ ಸದುಪಯೋಗ ಪಡೆದುಕೊಳ್ಳಲು ಸಾಧ್ಯವಾಗದೇ ಇತರ ಸಮುದಾಯಗಳಂತೆ ಬಾಳಲೂ ಆಗದೆ ಇರುವಂತಹ ಸ್ಥಿತಿಯಲ್ಲಿರುವಾಗ ಇವರ ಸಹಾಯಕ್ಕಾಗಿ ನಿಂತ ಸಂಸ್ಥೆಯೇ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ (VGKK). ಈ ಸಂಸ್ಥೆಯ ಸ್ಥಾಪಕರಾದ ಡಾ. ಸುದರ್ಶನ್‌ರವರು 1979 ನೇ ಇಸವಿಯಲ್ಲಿ ತಮ್ಮ ವೈದ್ಯ ವಿದ್ಯಾಭ್ಯಾಸ ಮುಗಿಯುತ್ತಿದ್ದಂತೆಯೇ ನೇರವಾಗಿ ಸೋಲಿಗರು ಹೆಚ್ಚಾಗಿ ವಾಸಿಸುತ್ತಿರುವ ಬಿಳಿಗಿರಿರಂಗನ ಬೆಟ್ಟ ಪ್ರದೇಶದಲ್ಲಿ ಸೋಲಿಗರ ಶ್ರೇಯೋಭಿವೃದ್ಧಿಗಾಗಿ ಕಾರ್ಯ ಆರಂಭಿಸಿದರು.

ಸೋಲಿಗರು ತಮ್ಮ ಸಮುದಾಯದವರನ್ನು ಬಿಟ್ಟು ಉಳಿದ ಜನರನ್ನು ಕಂಡರೆ ಭಯದಿಂದ ದೂರ ಓಡಿಹೋಗುತ್ತಿದ್ದ ಕಾಲದಲ್ಲಿ ಡಾ. ಸುದರ್ಶನ್‌ರವರು ಅತೀ ತಾಳ್ಮೆಯಿಂದ ಅವರ ಸಲುಗೆಯನ್ನು ಬೆಳೆಸಿಕೊಂಡರು. ಸೋಲಿಗರ ಹಕ್ಕು ರಕ್ಷಣೆಗಾಗಿ ಮತ್ತು ಅವರಿಗೂ ಸಹ ಇತರರಂತೆ ಉತ್ತಮ ಜೀವನ ನೀಡುವುದಕ್ಕೋಸ್ಕರ 1981ರಲ್ಲಿ ಬಿಳಿಗಿರಿರಂಗನ ಬೆಟ್ಟದಲ್ಲಿ "ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರವನ್ನು ಸ್ಥಾಪಿಸಿದರು (VGKK). ಆರಂಭದ ದಿನಗಳಲ್ಲಿ ಈ ಸಂಸ್ಥೆಯು ಸೋಲಿಗರಿಗೆ ಆರೋಗ್ಯ ಸೇವೆಯನ್ನು ಒದಗಿಸುತ್ತಿತ್ತು. ನಂತರ ಸೋಲಿಗರ ಸುಸ್ಥಿರ ಅಭಿವೃದ್ಧಿಗಾಗಿ ಆರೋಗ್ಯ ಸೇವೆಯೊಂದಿಗೆ ಶಿಕ್ಷಣ, ಸಬಲೀಕರಣ ಹಾಗೂ ಜೀವನ ನಡೆಸಲು ಕೌಶಲ್ಯಗಳು ಮುಂತಾದ ಇತರೇ ಅಭಿವೃದ್ಧಿ ಕಾರ್ಯಗಳನ್ನು ಕೈಗೊಂಡಿತು. ಸಂಸ್ಥೆ ಅಡಿಯಲ್ಲಿ ನಿರ್ವಹಿಸುತ್ತಿರುವ ಇತರೆ ಕೇಂದ್ರಗಳೆಂದರೆ,

- ❖ ಆಶ್ರಮ ಶಾಲೆ
- ❖ ವೃತ್ತಿ ತರಬೇತಿ ಕೇಂದ್ರ
- ❖ ಕಿರು ಉದ್ದಿಮೆ ಘಟಕ
- ❖ ಆರೋಗ್ಯ ಕೇಂದ್ರ

❖ ಸಾವಯವ ಗ್ರಾಮ

❖ ಸಮುದಾಯ ಭವನ

ಶಾಲೆಯನ್ನು ಆರಂಭಿದಸಿದ ಮೊದಲನೆಯ ಬ್ಯಾಚ್‌ನಲ್ಲಿ ಕೇವಲ ಆರು ವಿದ್ಯಾರ್ಥಿಗಳನ್ನು ಹೊಂದಿದ್ದು, ಪ್ರಸ್ತುತ ಪ್ರಾಥಮಿಕ, ಮಾಧ್ಯಮಿಕ, ಪ್ರೌಢ ಶಾಲೆ, ಕಾಲೇಜು ಮತ್ತು ವೃತ್ತಿ ತರಬೇತಿ ಕೇಂದ್ರಗಳಲ್ಲಿ 500ಕ್ಕೂ ಹೆಚ್ಚು ವಿದ್ಯಾರ್ಥಿಗಳು ವಿದ್ಯಾಭ್ಯಾಸ ಮಾಡುತ್ತಿದ್ದಾರೆ. ಈ ಶಾಲೆಯಲ್ಲಿ ಪಠ್ಯಕ್ರಮವನ್ನು ಭೋದಿಸುವುದರ ಜತೆಗೆ ಬುಡಕಟ್ಟು ಸಂಪ್ರದಾಯ, ಸುತ್ತಮುತ್ತಲಿನ ಪರಿಸರ, ಪ್ರಾಣಿ ಪಕ್ಷಿಗಳು, ಗಿಡಮರಗಳ ಕುರಿತು ತಿಳುವಳಿಕೆ, ತರಕಾರಿ, ಔಷಧಿ ಸಸ್ಯಗಳು, ಕೋಳಿ ಸಾಕಾಣಿಕೆ ಮತ್ತು ರೇಷ್ಮೆ ಸಾಕಾಣಿಕೆ ಕುರಿತಾಗಿ ಪ್ರಾಯೋಗಿಕ ಶಿಕ್ಷಣವನ್ನು ಸಹ ನೀಡುತ್ತಿದ್ದಾರೆ.

ಈ ಶಾಲೆಯ ಮೊದಲ ಬ್ಯಾಚ್‌ನ ಮೂವರು ವಿದ್ಯಾರ್ಥಿಗಳು ಸ್ನಾತಕೋತ್ತರ ಶಿಕ್ಷಣ ಪೂರೈಸಿದ್ದಾರೆ. ಇಲ್ಲಿ ಕಲಿತ ಪ್ರತಿಯೊಬ್ಬ ವಿದ್ಯಾರ್ಥಿಗೂ ಜೀವನ ನಿರ್ವಹಣೆ ದಾರಿಯನ್ನು ತೋರಿಸಿಯೇ ಶಾಲೆಯಿಂದ ಮರಳಿ ಮನೆಗೆ ಕಳುಹಿಸುವ ಜವಾಬ್ದಾರಿಯನ್ನು ಕೇಂದ್ರವು ಹೊತ್ತಿದೆ. ಔಪಚಾರಿಕ ಶಿಕ್ಷಣ ನೀಡುವುದರೊಂದಿಗೆ ಸಂಸ್ಥೆಯು ಆಸಕ್ತ ವಿದ್ಯಾರ್ಥಿಗಳಿಗೆ ವಿವಿಧ ರೀತಿಯ ವೃತ್ತಿ ತರಬೇತಿ ನೀಡುವ ಕೇಂದ್ರವನ್ನು ಸಹ ಹೊಂದಿದೆ.

ವೃತ್ತಿ ತರಬೇತಿ ಕೇಂದ್ರದಲ್ಲಿ ಸ್ಥಳೀಯವಾಗಿ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿ ತಯಾರಿಸಬಹುದಾದ ವಸ್ತುಗಳ ತಯಾರಿಕೆಯನ್ನು ಕಲಿಸಲಾಗುತ್ತಿದೆ. ಬುಟ್ಟಿ ಹೆಣೆಯುವುದು, ಅಗರಬತ್ತಿ ತಯಾರಿಕೆ, ಆಹಾರ ಪದಾರ್ಥಗಳ ಸಂಸ್ಕರಣೆ, ಜೇನು ಸಾಕಣೆ, ಕಾಗದ ತಯಾರಿಕೆ ಅಲ್ಲದೆ, ಇತರ ಕೌಶಲ್ಯಗಳಾದ ಹೆಣಿಕೆ, ನೂಲು ತೆಗೆಯುವುದು, ನೇಕಾರಿಕೆ ಮುಂತಾದವುಗಳನ್ನು ಕಲಿಸಿಕೊಡಲಾಗುತ್ತಿದೆ. ವೃತ್ತಿ ತರಬೇತಿಯ ಉದ್ದೇಶವು, ಜೀವನ ನಿರ್ವಹಣೆಗೆ ಪ್ರಮುಖವಾಗಿ ಅರಣ್ಯ ಉತ್ಪನ್ನಗಳನ್ನು ಅವಲಂಬಿಸಿರುವ ಸೋಲಿಗರಿಗೆ ಇತರೇ ಉದ್ಯೋಗಗಳಲ್ಲಿ ತೊಡಗಿಸಿ ಅರಣ್ಯ ಅವಲಂಬನೆಯನ್ನು ಕಡಿಮೆ ಮಾಡುವುದಾಗಿದೆ. ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರದ ವಿವಿಧ ಚಟುವಟಿಕೆಗಳನ್ನು ಒಳಗೊಂಡ ವ್ಯವಸ್ಥೆಗಳನ್ನು ಚಿತ್ರ 4.8, 4.9. 4.10 ಮತ್ತು 4.11 ರಲ್ಲಿ ಕಾಣಬಹುದು.



ಚಿತ್ರ 4.8 ಬಿಳಿಗಿರಿ ರಂಗನ ಬೆಟ್ಟದಲ್ಲಿರುವ ವಿವೇಕಾನಂದ ಗಿರಿಜನ ಕಲ್ಯಾಣ ಕೇಂದ್ರ




ಚಿತ್ರ 4.9 ವಿವೇಕಾನಂದ ಗಿರಿಜನ ಆರೋಗ್ಯ ಕೇಂದ್ರ




ಚಿತ್ರ 4.10 ವಿ.ಜಿ.ಕೆ.ಕೆ. ಆವರಣದಲ್ಲಿರುವ ಸಾವಯವ ಕೃಷಿ ಉತ್ಪನ್ನಗಳ ಮಾರಾಟ ಕೇಂದ್ರ




ಚಿತ್ರ 4.11 ವಿ.ಜಿ.ಕೆ.ಕೆ. ಆವರಣದಲ್ಲಿರುವ ಕಿರು ಅರಣ್ಯ ಉತ್ಪನ್ನಗಳ ಮಾರಾಟ ಕೇಂದ್ರ

**ವಿವೇಕ ಗಿರಿಜನ ಶೈಕ್ಷಣಿಕ ಕೇಂದ್ರ, ಹೊಸಹಳ್ಳಿ, ಹೆಗ್ಗಡದೇವನಕೋಟೆ** : ಹೆಗ್ಗಡದೇವನಕೋಟೆಯ ಬೀರಂಬಳ್ಳಿ ಸುತ್ತಲಿನ ನೈಸಗಿಕ ಪರಿಸರದ ಹೊಸಹಳ್ಳಿಯಲ್ಲಿ ಡಾ. ಆರ್. ಬಾಲಸುಬ್ರಮಣ್ಯಂ ಅವರ ನೇತೃತ್ವದಲ್ಲಿ ತಲೆ ಎತ್ತಿರುವ "ವಿವೇಕ ಗಿರಿಜನ ಶೈಕ್ಷಣಿಕ ಕೇಂದ್ರ"ವು ಅಲ್ಲಿ ಹೆಚ್ಚಾಗಿ ವಾಸಿಸುವ ಜೇನುಕುರುಬ ಮತ್ತು ಇತರೇ ಗಿರಿಜನರಿಗೆ ಶಿಕ್ಷಣ ಒದಗಿಸಿಕೊಡುವ ಕಾರ್ಯ ಮಾಡುತ್ತಿದ್ದು, ಗಿರಿಜನರನ್ನು ವಿದ್ಯಾವಂತರನ್ನಾಗಿ ಮಾಡಲು ಸಾಕಷ್ಟು ಶ್ರಮ ವಹಿಸುತ್ತಿದೆ.

ಉಚಿತ ವಿದ್ಯೆ, ಊಟೋಪಚಾರ ಮತ್ತು ವಸತಿ ಸೌಕರ್ಯವನ್ನು ಕಲ್ಪಿಸಿರುವ ಸಂಸ್ಥೆ ಕಾಡಿನ ಮಕ್ಕಳನ್ನು ಅಕ್ಷರಾಭ್ಯಾಸದತ್ತ ಕರೆತಂದಿದೆ. ಗಿರಿಜನರ ಅಭಿವೃದ್ಧಿಗೆ ಶ್ರಮಿಸುತ್ತಿರುವ ಸಂಸ್ಥೆಯು, ವಿದ್ಯೆಯ ಜತೆಗೆ ಪರಿಸರಾತ್ಮಕ ಚಟುವಟಿಕೆಗಳಲ್ಲೂ ತೊಡಗಿಸಿಕೊಂಡಿದೆ. ಮಕ್ಕಳಿಗೆ ಜೀವನಾವಶ್ಯಕ ತರಬೇತಿ ನೀಡುವಲ್ಲಿ ಹೊಸ ಹಾದಿ ತುಳಿದಿದೆ. ಇಲ್ಲಿ ಕಲಿಯುವ ವಿದ್ಯಾರ್ಥಿಯನ್ನು ಕೇವಲ ಅಕ್ಷರಾಭ್ಯಾಸಕ್ಕೆ ಸೀಮಿತಗೊಳಿಸದೇ, ಪರಿಸರ ಜ್ಞಾನ ಮತ್ತು ಸಾವಯವ ಕೃಷಿಯಲ್ಲೂ ಪ್ರಾಯೋಗಿಕವಾಗಿ ತೊಡಗಿಸಲಾಗಿದೆ.

ಇವರ ಪಠ್ಯಕ್ರಮದಲ್ಲಿ ಕಾಡಿನ ಬಗೆಗೆ ಪ್ರತ್ಯೇಕ ಅಧ್ಯಾಯ ಅಳವಡಿಸಿಕೊಳ್ಳಲಾಗಿದ್ದು, ವಿದ್ಯಾರ್ಥಿಗಳಲ್ಲಿ ಕಾಡಿನ ಬಗೆಗೆ ವೈಜ್ಞಾನಿಕ ದೃಷ್ಟಿಕೋನ ಬೆಳೆಸಲು ಮತ್ತು ಕಾಡನ್ನು ಅವಲಂಬಿಸಿ ಅಲ್ಲಿ ದೊರೆಯುವ ಸಂಪನ್ಮೂಲಗಳನ್ನೇ ಜೀವನಾಧಾರ ಮಾಡಿಕೊಂಡಿದ್ದ ಜನರಲ್ಲಿ ಸ್ವಾವಲಂಬಿತ್ವ ರೂಢಿಸಲು ಈ ರೀತಿಯ ಶಿಕ್ಷಣ ಅಳವಡಿಸಲಾಗಿದೆ. ಕಾಡಿನ ಜನರಿಗೆ ಕೃಷಿ ಪರ್ಯಾಯ ಉದ್ಯೋಗ, ಹೀಗಾಗಿ ಇಲ್ಲಿ ಕೃಷಿ ಶಿಕ್ಷಣಕ್ಕೆ ಹೆಚ್ಚು ಆದ್ಯತೆ ನೀಡಲಾಗಿದೆ. ಚಿತ್ರ 4.12, 4.13 ರಲ್ಲಿ ವಿವೇಕ ಗಿರಿಜನ ಶೈಕ್ಷಣಿಕ ಸಂಸ್ಥೆಯ ಶಿಕ್ಷಣದ ವಿವಿಧ ಬಗೆಯನ್ನು ನೀಡುತ್ತದೆ.

**ಡಾ. ಎಮ್. ಎಸ್. ಸ್ವಾಮಿನಾಥನ್ ಪ್ರತಿಷ್ಠಾನ ಸಂಸ್ಥೆ, ಚೆನ್ನೈ:** ನೋಬೆಲ್ ಪುರಸ್ಕೃತ ಭಾರತೀಯ ವಿಜ್ಞಾನಿ ಸರ್ ಸಿ.ವಿ. ರಾಮನ್‌ರವರು ಭೌತಶಾಸ್ತ್ರ ಸಂಶೋಧನೆಗೆ ತಮ್ಮ ಜೀವನವನ್ನು ಮುಡುಪಿಟ್ಟು ತಮ್ಮದೇ ಆದ ಸಂಶೋಧನಾ ಸಂಸ್ಥೆಯನ್ನು ಪ್ರಾರಂಭಿಸಿದವರು. ಇವರ ಪ್ರೇರಣೆಯಿಂದ ಡಾ. ಸ್ವಾಮಿನಾಥನ್‌ವರು ಸಹ ಕೃಷಿ ಸಂಶೋಧನೆಯ ವ್ಯವಸ್ಥೆಯಲ್ಲಿಯೇ ಭಿನ್ನವಾದ ಸಂಸ್ಥೆಯ ಕನಸನ್ನು ಕಂಡು **"ಎಮ್. ಎಸ್. ಸ್ವಾಮಿನಾಥನ್ ಪ್ರತಿಷ್ಠಾನ ಸಂಸ್ಥೆ"ಯ** ಸ್ಥಾಪನೆಗೆ ಕಾರಣರಾದರು.

ನಿಸರ್ಗಕ್ಕೆ ಪೂರಕವಾಗುವಂತಹ, ಬಡಜನತೆಗೆ ನೆರವಾಗಬಲ್ಲಂತಹ, ಹೆಣ್ಣುಮಕ್ಕಳ ಪರವಾಗಿರುವ, ಸುಸ್ಥಿರತೆ ಎಡೆಗೆ ಸಾಗುವಂತಹ ತಾಂತ್ರಿಕತೆಯನ್ನು ಅಭಿವೃದ್ಧಿಪಡಿಸಿ ಪ್ರಚರಪಡಿಸುವ ಉದ್ಧೇಶದಿಂದ 1987ರಲ್ಲಿ ಸಂಸ್ಥೆಯು ಚೆನ್ನೈನಲ್ಲಿ ಆರಂಭಗೊಂಡಿತು. ಈ ಸಂಸ್ಥೆಯು ಸಾಮಾಜಿಕ ಕಳಕಳಿ ಹೊಂದಿದ, ಕ್ರಿಯಾತ್ಮಕ ಹಾಗೂ ಪ್ರಯೋಗಶೀಲ ಯುವ ವಿಜ್ಞಾನಿಗಳಿಗೆ ಸಂಶೋಧನೆ ಕೈಗೊಳ್ಳಲು ಉತ್ತಮ ವೇದಿಕೆಯನ್ನು ಕಲ್ಪಿಸಿಕೊಟ್ಟಿದೆ.




ಚಿತ್ರ 4.12 ಹೆಗ್ಗಡದೇವನಕೋಟೆಯ ಬೀರಂಬಳ್ಳಿಯಲ್ಲಿರುವ ವಿವೇಕ ಗಿರಿಜನ ಶೈಕ್ಷಣಿಕ ಕೇಂದ್ರ



ಚಿತ್ರ 4.13 ವಿವೇಕ ಗಿರಿಜನ ಶೈಕ್ಷಣಿಕ ಕೇಂದ್ರದ ಪ್ರಕೃತಿ ಪರಿಸರದಲ್ಲಿರುವ ಶಾಲೆ

ಸಾಮಾಜಿಕ ಹಾಗೂ ವೈಜ್ಞಾನಿಕ ರಂಗದ ವಿವಿಧ ಕ್ಷೇತ್ರದಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಸ್ಥೆಯು ಜನತೆಯ ಮೂಲಭೂತ ಅವಶ್ಯಕತೆಯಾದ ಆಹಾರ ಹಾಗೂ ಪೌಷ್ಟಿಕ ಭದ್ರತೆ ಒದಗಿಸುವ ಕಾರ್ಯಕ್ರಮಗಳನ್ನು ರೂಪಿಸುವ ಕೆಲಸದಲ್ಲಿ ಪ್ರಮುಖ ಪಾತ್ರ ವಹಿಸಿದೆ. ತಮಿಳು ಕವಿ ಸುಬ್ರಮಣ್ಯ ಭಾರತೀಯಾರ್‌ರವರ "ಹಸಿದ ಜನರ ಹೊಟ್ಟೆಗೆ ಉಣಬಡಿಸಿ, ಜಗದ ಏಳಿಗೆಗೆ ಜನತೆಗೆ ಶಿಕ್ಷಣ ಕೊಡಿಸಿ" ಎನ್ನುವ ಕನಸನ್ನು ನನಸುಮಾಡುವ ಪ್ರಯತ್ನದಲ್ಲಿರುವ ಚೆನ್ನೈ ಸರ್ಕಾರವು ತನ್ನ ಜನತೆಗೆ ಅನೇಕ ಬಗೆಯ ಆಹಾರ ಹಾಗೂ ಪೌಷ್ಟಿಕ ಭದ್ರತೆ ಒದಗಿಸುವ ಕಾರ್ಯಕ್ರಮಗಳನ್ನು ಜಾರಿಗೊಳಿಸುತ್ತ ಬಂದಿದೆ. ಈ ಪ್ರಯತ್ನದಲ್ಲಿ ಯಶಸ್ವಿ ಹೊಂದಲು ಹಾಗೂ ರಾಜ್ಯವನ್ನು "ಹಸಿವು ಮುಕ್ತ ಕ್ಷೇತ್ರ" ವಾಗಿಸುವ ದೃಷ್ಟಿಯಿಂದ ಸರ್ಕಾರವು ಸರ್ವರಿಗೂ ಪೌಷ್ಟಿಕ ಭದ್ರತೆ ನೀಡುವ ಕಾರ್ಯಕ್ರಮ ರೂಪಿಸುವ ಜವಾಬ್ದಾರಿಯನ್ನು ಎಮ್. ಎಸ್. ಸ್ವಾಮಿನಾಥನ್ ಪ್ರತಿಷ್ಠಾನ ಸಂಸ್ಥೆಗೆ ವಹಿಸಿದೆ. ಈ ದೆಶೆಯಲ್ಲಿ ಸಂಸ್ಥೆಯು ಅನೇಕ ಸಂಶೋಧನಾ ಕಾರ್ಯದಲ್ಲಿ ತೊಡಗಿದೆ.

ಈ ನಿಟ್ಟಿನಲ್ಲಿ ಕಾರ್ಯನಿರತವಾದ ಸಂಸ್ಥೆಯು ಬಿಳಿಗಿರಿರಂಗನ ಬೆಟ್ಟ ಪ್ರದೇಶದಲ್ಲಿ ವಾಸಿಸುತ್ತಿರುವ ಪುರಾಣಿಪೋಡು ಹಾಗೂ ಗಾಣಿಗರ ಹಳ್ಳಿಯ ಸೋಲಿಗ ಬುಡಕಟ್ಟುಗಳಿಗೆ ಆದಾಯೋತ್ಪನ್ನ ಚಟುವಟಿಕೆಗಳ ಮೂಲಕ ಸಬಲೀಕರಣ ಯೋಜನೆ ಅಡಿಯಲ್ಲಿ ಅನೇಕ ಮಾಹಿತಿ ಮತ್ತು ತರಬೇತಿಗಳನ್ನು ನೀಡಿದೆ.

## 4.3 ಅರಣ್ಯವಾಸಿ ಬುಡಕಟ್ಟುಗಳ ಅರಣ್ಯ ಅವಲಂಬನೆಯ ಪ್ರಸ್ತುತ ಸ್ವರೂಪ

ಅರಣ್ಯವಾಸಿ ಬುಡಕಟ್ಟುಗಳ ಅರಣ್ಯ ಸಂಬಂಧ ಒಂದು ಅನಂತ. ಬಹುರೂಪ ಉಳ್ಳದ್ದು. ಇವರು ತಮ್ಮ ಜೀವನದ ಪ್ರತಿಯೊಂದು ಅವಶ್ಯಕತೆಯನ್ನು ಪೂರೈಸಿಕೊಳ್ಳಲು ಅರಣ್ಯದ ಮೇಲೆ ಹೆಚ್ಚು ಅವಲಂಬಿತರಾಗಿದ್ದಾರೆ. ಉದಾಹರಣೆಗೆ, ವಸತಿ, ಆಹಾರ, ಮೇವು, ಕಿರುಅರಣ್ಯ ಉತ್ಪನ್ನಗಳು ಅಲ್ಲದೆ, ಇತರೆ ಯಾವುದೇ ಜೀವನೋಪಾಯಕ್ಕೆ ಅರಣ್ಯವನ್ನೇ ಆಶ್ರಯಿಸಿದ್ದಾರೆ. ಅರಣ್ಯ ಮತ್ತು ಅವರ ಸಂಬಂಧವು ಸಾಂಸ್ಕೃತಿಕ, ಆಧ್ಯಾತ್ಮಿಕ, ಸಾಮಾಜಿಕ, ಆರ್ಥಿಕ ನೆಲೆಗಳನ್ನು ಒಳಗೊಂಡಿದ್ದು, ಒಂದು ರೀತಿಯಲ್ಲಿ ಸಂಬಂಧಗಳನ್ನು ವಿಂಗಡಿಸಿ ಮೌಲ್ಯಮಾಪನಕ್ಕೆ ಒಳಪಡಿಸುವುದು ಸಂಕೀರ್ಣವೇ ಆಗಿದೆ.

ಅರಣ್ಯದ ಜೈವಿಕ ವೈವಿಧ್ಯತೆಯ ವಿಸ್ತಾರದೊಂದಿಗೆ ಆಹಾರ ಭದ್ರತೆಯ ಆಶಯಗಳನ್ನು ಕಟ್ಟಿಕೊಂಡಿರುವ ಈ ಸಮುದಾಯಗಳು ಅದರ ಶ್ರೀಮಂತ ಅನುಭವವನ್ನು ಒಳಗೊಂಡಿರುತ್ತವೆ. ನಿಸರ್ಗದ ವಿವಿಧ ಋತುಗಳ ಅನುಸಾರ ದೊರೆಯುವ ಆಹಾರ ಪದಾರ್ಥಗಳನ್ನು ಉಪಯೋಗಿಸುತ್ತ ಜೀವ ಪರಂಪರೆಯೊಂದಿಗೆ ನಿಸರ್ಗ ಸಂಬಂಧಿ ಬದುಕು ಇವರದು.

### 4.3.1 ಆಹಾರಕ್ಕಾಗಿ ಅರಣ್ಯದ ಅವಲಂಬನೆ

ದಿನನಿತ್ಯದ ಬಳಕೆಗಾಗಿ ಇವರ ಪ್ರಮುಖ ಆಹಾರವಾದ ರಾಗಿ ಮುದ್ದೆ ಜತೆ ಬಳಸಲು ಅಗತ್ಯ ಸಾರು ಮುಂತಾದ ತಯಾರಿಗೆ ಅನುವಾಗುವ ಅರಣ್ಯದಲ್ಲಿ ಸಿಗುವ ಕೆಲವು ಸೊಪ್ಪು ತರಕಾರಿಗಳಾದ ಸೀಗೆಸೊಪ್ಪು, ಮಾರಾಡೆಸೊಪ್ಪು, ಅರಣ್ಯಸೊಪ್ಪು, ಕಿರಿಜಿದಿರು/ಕಳಲೆ, ಡಗಳಿಸೊಪ್ಪು, ಕಿಲಕಿರೆಸೊಪ್ಪು,

ಹೊನ್ನೆಸೊಪ್ಪು, ಅಣ್ಣೆಸೊಪ್ಪು, ಗೊರಜಿಸೊಪ್ಪು, ಹಾಲೆಸೊಪ್ಪು ಮುಂತಾದವುಗಳನ್ನು ತಂದು ಬಳಸುತ್ತಾರೆ. ಮತ್ತು ಇವರು ಹೇಳುವ ಪ್ರಕಾರ ಹೆಚ್ಚು ಶಕ್ತಿ ನೀಡುವ ಹೆಚ್ಚು ಆರೋಗ್ಯ ನೀಡುವ ವಿವಿಧ ಬಗೆಯ ಗೆಣಸುಗಳಾದ ನಾರೆಗೆಣಸು, ನೂರೆಗೆಣಸು ಮತ್ತು ಮುಳ್ಳು ಗೆಣಸುಗಳನ್ನು ಲಭ್ಯತೆಯ ಆಧಾರದ ಮೇರೆಗೆ ಋತುಮಾನಕ್ಕನುಗುಣವಾಗಿ ಅರಣ್ಯದಿಂದ ಆಯ್ದು ತಂದು ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ. ಚಿತ್ರ 4.14 ರಲ್ಲಿ ಸೋಲಿಗರು ಮತ್ತು ಜೇನುಕುರುಬರು ಅರಣ್ಯದಿಂದ ಸಂಗ್ರಹಿಸಿ ತರುವ ವಿವಿಧ ಸೊಪ್ಪುಗಳ ಮಾಹಿತಿಯನ್ನು ಕಾಣಬಹುದು.

ಎಲ್ಲ ಕುಟುಂಬಗಳು ಅರಣ್ಯದಲ್ಲಿ ತಾವೇ ತಾವಾಗಿ ನೈಸರ್ಗಿಕವಾಗಿ ಬೆಳೆಯುವ ಕಡಿಮೆ ಬಳಕೆಯಲ್ಲಿರುವ ಅಸಂಪ್ರದಾಯಿಕ ಸೊಪ್ಪುಗಳನ್ನು ಸಂಗ್ರಹಿಸಿ ತಂದು ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ. ಇವರಲ್ಲಿ ಶೇಕಡ 60ರಷ್ಟು ಕುಟುಂಬಗಳು ಗೆಡ್ಡೆ ಗೆಣಸುಗಳಾದ ಮರಗೆಣಸು ಮತ್ತು ಕಳಲೆಯನ್ನು ಅರಣ್ಯದಿಂದ ತಂದು ಸಾಂಬರ್, ಪಲ್ಯ ತಯಾರಿಸಿ ವಾರಕ್ಕೆ ಒಂದು ಬಾರಿಯಂತೆ ಬಳಸುತ್ತಾರೆ. ಸುಮಾರು 62 ಪ್ರತಿಶತ ಕುಟುಂಬಗಳು ಮಾನ್‌ಸೂನ್ ಕಾಲದಲ್ಲಿ ದೊರೆಯುವ ಸೀಗೆಸೊಪ್ಪನ್ನು ಕಡ್ಡಾಯವಾಗಿ ಬಳಸುತ್ತಾರೆ. ಶೇಕಡ 75 ರಷ್ಟು ಕುಟುಂಬಗಳು ಕಾಡುಸೊಪ್ಪನ್ನು ಪಲ್ಯದ ರೂಪದಲ್ಲಿ, ಶೇಕಡ 60ರಷ್ಟು ಕುಟುಂಬಗಳು ಕುಂಬಳ ಸೊಪ್ಪು, ಹೆಡ್ಡರಸೊಪ್ಪು, ಗಣಕೆಸೊಪ್ಪು ಮತ್ತು ಕುರುಸಣೆ ಸೊಪ್ಪನ್ನು ಸಾಂಬರ್ ಅಥವಾ ಪಲ್ಯದ ರೂಪದಲ್ಲಿ ಬಳಸುತ್ತಾರೆ.

ಶೇಕಡ 60ರಷ್ಟು ಕುಟುಂಬಗಳು ತಮ್ಮ ವಾಸಸ್ಥಳದ ಹತ್ತಿರದ ಅರಣ್ಯದಲ್ಲಿ ಸಿಗುವ ಮೊಲ, ಕಾಡುಹಂದಿ ಮತ್ತು ಗೌಜಗವನ್ನು ಬೇಟೆಯಾಡಿ ತಂದು ವಾರಕ್ಕೆ ಅಥವಾ ತಿಂಗಳಿಗೆ ಅಥವಾ ಲಭ್ಯವಾದಾಗ ಮಾತ್ರ ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ. ಸೋಲಿಗರು ಮತ್ತು ಜೇನುಕುರುಬರು ಆಹಾರಕ್ಕಾಗಿ ಅರಣ್ಯದಿಂದ ತಂದು ಬಳಸುವ ವಿವಿಧ ಫಲಗಳ ವಿವರವನ್ನು ಕೋಷ್ಟಕ 4.7 ರಲ್ಲಿ ನೀಡಿದೆ.

ಇಷ್ಟೆಲ್ಲ ವೈವಿಧ್ಯಮಯ ಆಹಾರಗಳಿಗಾಗಿ ಅರಣ್ಯದ ಮೇಲೆ ಅವಲಂಬಿತರಾಗಿದ್ದವರು, ಇತ್ತೀಚಿನ ಅವರ ಮುಖ್ಯವಾಹಿನಿಯತ್ತ ನಡೆಯು ವೈವಿಧ್ಯಮಯ ಆಹಾರ ಸೇವನೆಗೆ ತಡೆಯೊಡ್ಡಿದೆ. ಬದಲಾಗಿ ತಾವೇ ಬೆಳೆದ, ಬೆಳೆಯಬೇಕಾದ, ಅಥವಾ ಮಾರುಕಟ್ಟೆಯಲ್ಲಿ ಕೊಳ್ಳುವ ಪರಿಸ್ಥಿತಿಗೆ ತೆರೆದುಕೊಳ್ಳುತ್ತಿದ್ದಾರೆ.

**ಕೋಷ್ಟಕ 4.7 ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಅರಣ್ಯದಿಂದ ಸಂಗ್ರಹಿಸಿ ತರುವ ಆಹಾರ ವಸ್ತುಗಳು ಮತ್ತು ಉಪಯೋಗಿಸುವ ಬಗೆ**

| ಕ್ರ. ಸಂ. | ಸೋಲಿಗರು | | ಜೇನುಕುರುಬರು | |
|---|---|---|---|---|
| | ಆಹಾರ | ಉಪಯೋಗಿಸುವ ಬಗೆ | ಆಹಾರ | ಉಪಯೋಗಿಸುವ ಬಗೆ |
| | | **ಸೊಪ್ಪುಗಳು** | | |
| 1 | ಸೀಗೆ ಸೊಪ್ಪು | ಪಲ್ಯ/ ಸಾಂಬರ್ | ಅಣ್ಣೆ ಸೊಪ್ಪು | ಪಲ್ಯ/ ಸಾಂಬರ್ |
| 2 | ಹೊನಗೊನೆ ಸೊಪ್ಪು | | ಕೀರೆಸೊಪ್ಪು | |
| 3 | ಕಾಡು ಸೊಪ್ಪು | | ಮುಳ್ಳುಕೀರೆಸೊಪ್ಪು | |
| 4 | ಕಾರ್ವಡಿ ಸೊಪ್ಪು | | ಗಣಕೆ ಸೊಪ್ಪು | |
| 5 | ಕುಂಬಳ ಸೊಪ್ಪು | | ತುಂಬೆ ಸೊಪ್ಪು | |
| 6 | ಹೆಡ್ಡರ ಸೊಪ್ಪು | | ಕನ್ನೆ ಸೊಪ್ಪು | |
| 7 | ಗಣಕೆ ಸೊಪ್ಪು | | ಮಾಡಲೆ ಸೊಪ್ಪು | |
| 8 | ಕುರುಸನೆ ಸೊಪ್ಪು | | ಸೀಗೆ ಸೊಪ್ಪು | |
| 9 | ಡಗಳಿ ಸೊಪ್ಪ | | ಕಾಡುಸೀಗೆ ಸೊಪ್ಪು | |
| 10 | ಮಾರಾಡೆ ಸೊಪ್ಪು | | | |
| | | **ಹಣ್ಣುಗಳು** | | |
| 1 | ಸೊಳ್ಳಿಹಣ್ಣು | ನೇರವಾಗಿ ತಿನ್ನಲು | ಸೊಳ್ಳಿಹಣ್ಣು | ನೇರವಾಗಿ ತಿನ್ನಲು |
| 2 | ಬ್ಯಾಲದ ಹಣ್ಣು | | ಬ್ಯಾಲದ ಹಣ್ಣು | |
| 3 | ಕುಡಗಲಿ ಹಣ್ಣು | | ಕುಡಗಲಿ ಹಣ್ಣು | |
| 4 | ನೆಲ್ಲಿಕಾಯಿ | | ನೆಲ್ಲಿಕಾಯಿ | |
| 5 | ನೇರಳೆ ಹಣ್ಣು | | ನೇರಳೆ ಹಣ್ಣು | |
| 6 | ಗೇರು ಹಣ್ಣು | | ಗೇರು ಹಣ್ಣು | |
| 7 | ಸೊಟ್ಟೆ ಹಣ್ಣು | | ಸೊಟ್ಟೆ ಹಣ್ಣು | |
| 8 | ಕಂಬಿ ಹಣ್ಣು | | ಕಂಬಿ ಹಣ್ಣು | |
| 9 | ಹಿಪ್ಪೆ ಹಣ್ಣು | | ಹಿಪ್ಪೆ ಹಣ್ಣು | |
| 10 | ಆಲೆ ಹಣ್ಣು | | ಆಲೆ ಹಣ್ಣು | |
| 11 | ನಗರೆ ಹಣ್ಣು | | ನಗರೆ ಹಣ್ಣು | |
| | | **ಗೆಣಸುಗಳು** | | |
| 1 | ಸಾಂಬರ್ ಗೆಣಸು | ಸಾಂಬಾರ್ ಮತ್ತು ಪಲ್ಯ | ಮುಳ್ಳು ಗೆಣಸು | ಸುಟ್ಟು/ ಬೇಯಿಸಿ |
| 2 | ಮರಗೆಣಸು | ಸಾಂಬಾರ್ ಮತ್ತು ಪಲ್ಯ | ನಾರೆ ಗೆಣಸು | |
| 3 | ಬಿದಿರ ಗೆಣಸು | ಸಾಂಬಾರ್ ಮತ್ತು ಪಲ್ಯ | ನೂರೆ ಗೆಣಸು | |
| | | **ಮಾಂಸಾಹಾರ** | | |
| 1 | ಹಂದಿ | ಹುರಿಯುವುದು | ಹಂದಿ | ಹುರಿಯುವುದು |
| 2 | ಕೋಳಿ | | ಕೋಳಿ | |
| 3 | ಕಾಡುಹಂದಿ | ಮಸಾಲೆ ಬೆರಸಿ ಹುರಿಯುವುದು | ಕಾಡುಹಂದಿ | ಮಸಾಲೆ ಬೆರಸಿ ಹುರಿಯುವ್ವದು |
| | ಮೊಲ | ಹುರಿಯುವುದು | ಮೊಲ | ಹುರಿಯುವುದು |
| | ಗೌಜ | ಹುರಿಯುವುದು | ಸಾರಗ | ಹುರಿಯುವುದು |
| | | | ಕಡವೆ | ಹುರಿಯುವುದು |









ಚಿತ್ರ 4.14 ಅರಣ್ಯದಿಂದ ಸೋಲಿಗರು ಸಂಗ್ರಹಿಸಿ ತರುವ ಸೊಪ್ಪುಗಳು

### 4.3.2 ಇತರೆ ಕಾರ್ಯಕ್ಕಾಗಿ ಅರಣ್ಯದ ಅವಲಂಬನೆ

ಅರಣ್ಯದಲ್ಲಿ ನೆಲೆಯನ್ನು ಕಂಡುಕೊಂಡ ಬುಡಕಟ್ಟುಗಳು ಆಹಾರ ವಸ್ತುಗಳಿಗೆ ಮಾತ್ರವಲ್ಲದೆ, ತಮ್ಮ ಇತರೆ ಅವಶ್ಯಕತೆಗಳಾದ ಉರುವಲು, ಮನೆ ಕಟ್ಟುವ ಸಾಮಗ್ರಿಗಳು, ಸಾಕು ಪ್ರಾಣಿಗಳ ಆಹಾರಕ್ಕಾಗಿಯೂ ಸಹ ಅರಣ್ಯದ ಮೇಲೆ ಅವಲಂಬಿತರಾಗಿದ್ದಾರೆ. ಇವುಗಳಲ್ಲದೆ, ಅರಣ್ಯದಲ್ಲಿ ದೊರೆಯುವ ಜೇನು, ಮೇಣ, ಮಸಾಲೆ ಪದಾರ್ಥಗಳು, ಔಷಧಿ ಸಸ್ಯಗಳನ್ನು ಸಂಗ್ರಹಿಸಿ ತಂದು ಹತ್ತಿರದ ಮಾರುಕಟ್ಟೆ ಅಥವಾ ಲ್ಯಾಂಪ್ ಸೊಸೈಟಿಗೆ ಮಾರಾಟ ಮಾಡಿ ತಮ್ಮ ಇತರೇ ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಿದ್ದಾರೆ.

ನಮ್ಮ ರಾಜ್ಯದಲ್ಲಿ ಕಿರು ಅರಣ್ಯ ಉತ್ಪನ್ನಗಳನ್ನು ಖರೀದಿಸಿ ಮಾರಾಟ ಮಾಡುವ ಪರವಾನಿಗೆಯನ್ನು ಸರ್ಕಾರವು LAMPS (Large Sized Adivasi Co-operative Socity ) ಸೊಸೈಟಿಗೆ ನೀಡಿದೆ. ಅರಣ್ಯ ಇಲಾಖೆಯು ಆರಣ್ಯವಾಸಿ ಬುಡಕಟ್ಟು ಜನರಿಗೆ 45 ವಿವಿಧ ಬಗೆಯ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಿ ಲ್ಯಾಂಪ್ ಸೊಸೈಟಿಗೆ ಮಾರಲು ಅವಕಾಶ ನೀಡಿದೆ. 1971ರಲ್ಲಿ ಮೊಟ್ಟ ಮೊದಲ ಲ್ಯಾಂಪ್ ಸೊಸೈಟಿಯು ಮೈಸೂರು ಜಿಲ್ಲೆಯ ಹುಣಸೂರಿನಲ್ಲಿ ಕರ್ನಾಟಕ ಸರ್ಕಾರದ ಅನುಮತಿ ಮೇರೆಗೆ ಸ್ಥಾಪನೆಯಾಯಿತು. ಇದರ ಅಡಿಯಲ್ಲಿ ಒಟ್ಟು 20 ಲ್ಯಾಂಪ್ ಸೊಸೈಟಿಗಳು ಕಾರ್ಯನಿರ್ವಹಿಸುತ್ತಿವೆ. ಬುಡಕಟ್ಟು ಜನರು ಸಂಗ್ರಹಿಸಿದ ಕಿರು ಅರಣ್ಯ ಉತ್ಪನ್ನಗಳು ಹಾಗೂ ಔಷಧಿ ಸಸ್ಯಗಳನ್ನು ಖರೀದಿಸಿ ಮಾರಾಟ ಮಾಡುವುದು, ಇವರಿಗೆ ಪ್ರಮುಖವಾಗಿ ಆಹಾರ ತಯಾರಿಸಲು ಹಾಗೂ ಸೇವಿಸಲು ಅವಶ್ಯಕವಿರುವಂತಹ ವಸ್ತುಗಳಾದ ಅಕ್ಕಿ, ಸಕ್ಕರೆ, ಅಡುಗೆ ಎಣ್ಣೆ ವಿತರಿಸುವುದು ಅಲ್ಲದೆ, ಜೀವನೋಪಾಯಕ್ಕಾಗಿ ಅನುಸರಿಸುತ್ತಿರುವ ಕೃಷಿ ಚಟುವಟಿಕೆಗೆ ಬೇಕಾದ ಪರಿಕರಗಳನ್ನು ಖರೀದಿಸಲು ಮತ್ತು ಹಸು ಕೊಳ್ಳಲು ಸಾಲ ನೀಡುವುದು ಲ್ಯಾಂಪ್ ಸೊಸೈಟಿಯ ಮುಖ್ಯ ಉದ್ಧೇಶವಾಗಿದೆ.

ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯ ಅರಣ್ಯ ಪ್ರದೇಶದಲ್ಲಿನ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಕಿರು ಅರಣ್ಯ ಉತ್ಪನ್ನಗಳಾದ – ಸೀಗೆಕಾಯಿ, ಹುಣಸೆ, ನೆಲ್ಲಿ, ಕಸಬರಿಗೆ ಕಟ್ಟುವ ಕಡ್ಡಿಗಳು, ಮರದ ಪಾಚಿ ಮುಂತಾಗಿ ವಿವಿಧ ಬಗೆಯ ಉತ್ಪನ್ನಗಳನ್ನು ಸಂಗ್ರಹಿಸಿ ತಂದು ಮಾರಾಟ ಮಾಡುತ್ತಿದ್ದಾರೆ. ಈ ಬುಡಕಟ್ಟುಗಳು ಅರಣ್ಯದಿಂದ ಸಂಗ್ರಹಿಸುವ ಕಿರು ಅರಣ್ಯ ಉತ್ಪನ್ನಗಳ ವಿವರವನ್ನು ಕೋಷ್ಟಕ 4.8 ಮತ್ತು ಕೋಷ್ಟಕ 4.9ರಲ್ಲಿ ನೀಡಲಾಗಿದೆ.

ಕೋಷ್ಟಕ 4.8 ಸೋಲಿಗರು ಅರಣ್ಯದಿಂದ ಸಂಗ್ರಹಿಸಿ ತರುವ ಕಿರು ಅರಣ್ಯ ಉತ್ಪನ್ನಗಳು

| ಕ್ರ ಸಂ. | ಅರಣ್ಯದ ಉಪ ಉತ್ಪನ್ನಗಳು | ವೈಜ್ಞಾನಿಕ ಹೆಸರು | ಉಪಯೋಗಿಸುವ ಭಾಗ | ಸಂಗ್ರಹಿಸುವ ಕಾಲ | ಉಪಯೋಗ |
|---|---|---|---|---|---|
| 1 | ಅಂಚೆ ಹುಲ್ಲು | *Aristida hystrix* | ಒಣಗಿದ ಎಲೆಗಳು | ವರ್ಷ ಪೂರ್ತಿ | ಕಸಬರಿಗೆ |
| 2 | ಮಾಕಳಿ ಬೇರು | *Decalepis hamiltonii* | ಬೇರು | ವರ್ಷ ಪೂರ್ತಿ | ಆಹಾರ ಮತ್ತು ಔಷಧಿ |
| 3 | ನೆಲ್ಲಿ ಕಾಯಿ | *Phyllanthus emblica* | ಹಣ್ಣು | ಸೆಪ್ಟಂಬರ್-ಫೆಬ್ರುವರಿ | ಆಹಾರ ಮತ್ತು ಔಷಧಿ |
| 4 | ಅಂಟವಾಳ | *Sapindus laurifolius* | ಹಣ್ಣು | ಡಿಸೆಂಬರ್-ಎಪ್ರಿಲ್ | ಸ್ವಚ್ಛಗೊಳಿಸಲು ಮತ್ತು ಮಾರ್ಜಕ ತಯಾರಿಕೆಗೆ |
| 5 | ಹುಣಸೆ | *Tamarindus indica* | ಹಣ್ಣು ಮತ್ತು ಬೀಜ | ಮಾರ್ಚ್-ಮೇ | ಆಹಾರ, ಔಷಧಿ ತಯಾರಿಕೆಗೆ |
| 6 | ಅಳಲೆ | *Terminelia chebula* | ಕಾಯಿ ಮತ್ತು ಹೂವು | ಜೂನ್-ಮೇ | ಔಷಧಿ ತಯಾರಿಕೆಗೆ |
| 7 | ಜೇನು | - | ಜೇನುತುಪ್ಪ ಮತ್ತು ಮೇಣ | ನವೆಂಬರ್-ಎಪ್ರಿಲ್ | ಆಹಾರ, ಔಷಧಿ, Polishes |
| 8 | ಮರದ ಪಾಚಿ | - | Moss | ಜೂನ್-ಡಿಸೆಂಬರ್ | ಮಸಾಲೆ ಪದಾರ್ಥ ಮತ್ತು ಬಣ್ಣಗಳ ತಯಾರಿಕೆ |
| 9 | ಹೊಂಗೆ | *Pongemia pinnata* | ಬೀಜ | ಡಿಸೆಂಬರ್-ಜನವರಿ | ಎಣ್ಣೆ, ಕೀಟನಾಶಕ ತಯಾರಿಕೆಗೆ |
| 10 | ಸೀಗೆಕಾಯಿ | *Acacia concinna* | Pods | ನವೆಂಬರ್-ಫೆಬ್ರುವರಿ | ಸ್ವಚ್ಛಗೊಳಿಸಲು ಮತ್ತು ಮಾರ್ಜಕ ತಯಾರಿಕೆಗೆ |

**ಕೋಷ್ಟಕ 4.9 ಜೇನುಕುರುಬರು ಅರಣ್ಯದಿಂದ ಸಂಗ್ರಹಿಸಿ ತರುವ ಕಿರು ಅರಣ್ಯ ಉತ್ಪನ್ನಗಳು**

| ಕ್ರ ಸಂ | ಅರಣ್ಯದ ಉಪುತ್ಪನ್ನಗಳು | ವೈಜ್ಞಾನಿಕ ಹೆಸರು | ಉಪಯೋಗಿಸುವ ಭಾಗ | ಸಂಗ್ರಹಿಸುವ ಕಾಲ | ಉಪಯೋಗ |
|---|---|---|---|---|---|
| 1 | ಸೀಗೆಕಾಯಿ | *Acacia concinna* | ಕಾಯಿ | ನವೆಂಬರ್ | ಕೂದಲು ಸ್ವಚ್ಛಗೊಳಿಸಲು, |
| 2 | ನೆಲ್ಲಿಕಾಯಿ | *Phyllanthus emblica* | ಹಣ್ಣು | ಸೆಪ್ಟಂಬರ್–ಫೆಬ್ರುವರಿ | ಆಹಾರ, ಔಷಧಿ ತಯಾರಿಕೆಗೆ |
| 3 | ಹುಣಸೆ | *Tamarindus indica* | ಹಣ್ಣು ಮತ್ತು ಬೀಜ | ಮಾರ್ಚ್–ಮೇ | ಆಹಾರ, ರಸಾಯನಿಕ |
| 4 | ಜೇನು | | ಜೇನುತುಪ್ಪ, ಮೇಣ | ನವೆಂಬರ್–ಎಪ್ರೀಲ್ | ಆಹಾರ, ಔಷಧ ಮತ್ತು ಪಾಲಿಶ್ ತಯಾರಿಕೆಗೆ |
| 5 | ಮರದ ಪಾಚಿ | - | | ವರ್ಷಪೂರ್ತಿ | ಮಸಾಲೆ ಪದಾರ್ಥ, ಪೇಂಟ್ ತಯಾರಿಕೆಗೆ |
| 6 | ಅಳಲೆ | *Terminelia chebula* | ಕಾಯಿ ಮತ್ತು ಹೂವು | ಜೂನ್–ಮೇ | ಔಷಧಿ ತಯಾರಿಕೆಗೆ |
| 7 | ಅಂಟವಾಳ | *Sapindus laurifolius* | ಹಣ್ಣು | ಡಿಸೆಂಬರ್–ಎಪ್ರೀಲ್ | ಸ್ವಚ್ಛಗೊಳಿಸಲು ಮತ್ತು ಮಾರ್ಜಕ ತಯಾರಿಕೆಗೆ |

### 4.3.3 ಆಹಾರ ಸಂಗ್ರಹಣೆ ವಿಧಾನಗಳು

ಆಹಾರವನ್ನು ಸಂಗ್ರಹಿಸಿ ಬೇಕಾದ ಕಾಲದಲ್ಲಿ ಬಳಸುವುದು ಸಾಮಾನ್ಯ ಸಂಗತಿ. ಬುಡಕಟ್ಟು ಸಮುದಾಯಗಳು ಬಹು ಕಾಲದ ಸಂಗ್ರಹಣೆಗಾಗಲಿ ಅಥವಾ ಅವುಗಳ ಸಂಸ್ಕರಣೆಗಾಗಲಿ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಂತೆ ಕಾಣುವುದಿಲ್ಲ. ಬದಲಿಗೆ ಸಂಗ್ರಹಣೆಯಲ್ಲಿ ಅಲ್ಪ ಕಾಲದ ಗುರಿಯುಳ್ಳ ಪದ್ಧತಿಗಳನ್ನು ರೂಡಿಸಿಕೊಂಡಿದ್ದಾರೆ. ಇವುಗಳ ಕುರಿತ ವಿವರಗಳ ಒತ್ತಾಸೆಯೆಂದರೆ ಮುಖ್ಯವಾಗಿ ಆಯಾ ದಿನಗಳ ಬಳಕೆಗೆ ಅತೀವ ಪ್ರಾಮುಖ್ಯತೆಯ ಕೊಟ್ಟ ಸಂಗತಿಯಾಗಿದೆ. ಹಾಗಾಗಿ ಉಳಿಕೆಯಲ್ಲೂ ಮತ್ತು ಬಳಕೆಯಲ್ಲೂ ಜಾಣತನ ಪ್ರದರ್ಶಿಸುವ ಬದುಕು ಇವರದು.

**ಆಹಾರ ಧಾನ್ಯಗಳ ಸಂಗ್ರಹಣೆ :** ರಾಗಿ ಮತ್ತು ಮುಸುಕಿನ ಜೋಳವನ್ನು ಕಟಾವು ಮಾಡಿದ ನಂತರ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಗೋಣಿ ಚೀಲಗಳಲ್ಲಿ ಸಂಗ್ರಹಿಸಿಡುತ್ತಾರೆ. ಹೀಗೆ ಸಂಗ್ರಹಿಸಿದ ಧಾನ್ಯಗಳನ್ನು ಒಂದು ವರ್ಷದವರೆಗೆ ಬಳಸುತ್ತಾರೆ. ಅಲ್ಲದೆ ರಾಗಿಯನ್ನು ಸಂಗ್ರಹಿಸಿಡಲು 'ರಾಯಗುಳಿ' ಎಂಬ ವಿಧಾನವನ್ನು ಅನುಸರಿಸುತ್ತಾರೆ. ರಾಯಗುಳಿ ಎಂದರೆ, ಮನೆ ಒಳಗಡೆ 2-3 ಅಡಿ ಆಳದ ಗುಂಡಿ ತೋಡಿ ನಂತರ ಗುಂಡಿಯೊಳಕ್ಕೆ ಬೆಂಕಿ ಹಾಕಿ ಕಾಯಿಸಿ ಅನಂತರ ಸಗಣಿಯಿಂದ ಸಾರಿಸಿ ಅದರಲ್ಲಿ ರಾಗಿ ಧಾನ್ಯವನ್ನು ಒಂದು ವರ್ಷದವರೆಗೆ ಸಂಗ್ರಹಿಸಿಡುವ ಪದ್ಧತಿಯನ್ನು ಅನುಸರಿಸುತ್ತಾರೆ. ಅಲಸಂದಿ ಮತ್ತು ಅವರೆಯನ್ನು ಸಾದ್ಯವಾದಷ್ಟು ಹಸಿ ತರಕಾರಿಯಾಗಿ ಬಳಸಿ ಮಿಕ್ಕವುಗಳನ್ನು ಚೆನ್ನಾಗಿ ಬಿಸಿಲಿನಲ್ಲಿ ಒಣಗಿಸಿ ಬೂದಿ ಮತ್ತು ಬೇವಿನ ಸೊಪ್ಪನ್ನು ಬೆರಸಿ ಸಂಗ್ರಹಿಸಿಡುವುದನ್ನು ಅನುಸರಿಸುತ್ತಿದ್ದಾರೆ.

ನಮ್ಮ ದೇಶದಲ್ಲಿರುವ ಅರಣ್ಯಗಳಿಂದ ಸುಮಾರು 3000 ಪ್ರಭೇದಗಳ ವಿವಿಧ ಕಿರು ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಬಹುದಾಗಿದೆ. ಇದರಲ್ಲಿ ಕೆಲವು ಮಾತ್ರ ವಾಣಿಜ್ಯಕವಾಗಿ ಬೆಲೆ ಉಳ್ಳದ್ದಾಗಿವೆ. ಕಿರು ಅರಣ್ಯ ಉತ್ಪನ್ನಗಳಲ್ಲಿ ಕೆಲವೊಂದು ಮನೆಬಳಕೆಗಾಗಿ, ಕೆಲವೊಂದನ್ನು ಚಿಕ್ಕಮಟ್ಟ ಹಣಕಾಸಿನ ಅವಶ್ಯಕತೆ ನೀಗಿಸಲು, ಧಾರ್ಮಿಕ, ಸಾಂಸ್ಕೃತಿಕ ಮತ್ತು ಔಷಧೀಯ ತಯಾರಿಕೆಗಾಗಿ ಬಳಕೆಯಲ್ಲಿವೆ.

ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಸಂಗ್ರಹಿಸುವ ವಿವಿಧ ಕಿರು ಅರಣ್ಯ ಉತ್ಪನ್ನಗಳು ಮತ್ತು ಅವುಗಳನ್ನು ಕೊಯ್ಲು ಮಾಡುವ ವಿಧಾನವನ್ನು ಗಮನಿಸಲಾಗಿದೆ.

**ಜೇನು :** ಸೋಲಿಗರು ಮತ್ತು ಜೇನುಕುರುಬರು ಅರಣ್ಯದಿಂದ ಸಂಗ್ರಹಿಸಿ ತರುವ ಕಿರುಅರಣ್ಯ ಉತ್ಪನ್ನಗಳಲ್ಲಿ ಜೇನು ಪ್ರಮುಖವಾದದ್ದು. ಇವರು ಅರಣ್ಯ ಪ್ರದೇಶದಲ್ಲಿ ದೊರೆಯುವ ಹೆಜ್ಜೇನು, ತುಡುವೆ ಜೇನು ಮತ್ತು ಕಡ್ಡಿ ಜೇನನ್ನು ಸಂಗ್ರಹಿಸುತ್ತಾರೆ. ಬಿಳಿಗಿರಿರಂಗನ ಪ್ರದೇಶದ ಅರಣ್ಯದಲ್ಲಿ ವಾಸಿಸುತ್ತಿರುವ ಬುಡಕಟ್ಟುಗಳು ವರ್ಷಕ್ಕೆ ಸುಮಾರು 20 ರಿಂದ 25 ಟನ್ ಜೇನನ್ನು ಸಂಗ್ರಹಿಸುತ್ತಾರೆ. ಜೇನನ್ನು ವರ್ಷದಲ್ಲಿ ನಾಲ್ಕು ತಿಂಗಳುಗಳಲ್ಲಿ ಎಪ್ರಿಲ್ ತಿಂಗಳಿಂದ ಮೇ ತಿಂಗಳೊಳಗೆ ಹೆಚ್ಚು ಪ್ರಮಾಣದಲ್ಲಿ ಮತ್ತು ನವೆಂಬರ್ ತಿಂಗಳಲ್ಲಿ ಸ್ವಲ್ಪ ಪ್ರಮಾಣದಲ್ಲಿ

ಸಂಗ್ರಹಿಸುತ್ತಾರೆ. ಜೇಣು ನೊಣಗಳು ಈ ಅರಣ್ಯದಲ್ಲಿ ನಾಲ್ಕು ತಿಂಗಳು ಇದ್ದು ಉಳಿದ ತಿಂಗಳುಗಳಲ್ಲಿ ಬೇರೆಡೆ ವಲಸೆ ಹೋಗುವ ಕಾರಣ ಈ ತಿಂಗಳುಗಳಲ್ಲಿ ಮಾತ್ರ ಜೇನು ಸಂಗ್ರಹಿಸಲು ಲಭ್ಯವಿರುತ್ತದೆ.

ಜೇನನ್ನು ಸಂಗ್ರಹಿಸಲು ಇವರದೇ ಆದ ಸಾಂಪ್ರದಾಯಿಕ ಶೈಲಿಯನ್ನು ಅನುಸರಿಸುವುದು ಕಂಡುಬರುತ್ತದೆ. ಸಾಮಾನ್ಯವಾಗಿ ಮರ ಅಥವಾ ಬಂಡೆಗಳಲ್ಲಿ ಕಟ್ಟಿರುವ ಹಲವಾರು ಜೇನುಗೂಡುಗಳಲ್ಲಿ ಒಂದು ಅಥವಾ ಎರಡು ಗೂಡಿನಿಂದ ಮಾತ್ರ ಜೇನನ್ನು ಕೊಯ್ಲು ಮಾಡಿ ಉಳಿದವುಗಳನ್ನು ಹಾಗೆಯೇ ಅಲ್ಲಿಯೇ ಬಿಡುತ್ತಾರೆ. ಸಾಮಾನ್ಯವಾಗಿ ಜೇನನ್ನು ಹಗಲಿನ ಸಮಯದಲ್ಲಿ ಸಂಗ್ರಹಿಸುತ್ತಾರೆ. ಎರಡಕ್ಕಿಂತ ಹೆಚ್ಚು ಗೂಡುಗಳಿಂದ ಸಂಗ್ರಹಿಸಬೇಕಾದಲ್ಲಿ ಮಾತ್ರ ರಾತ್ರಿ ಹೊತ್ತು ಸಂಗ್ರಹಿಸುತ್ತಾರೆ. ಜೇನನ್ನು ಸಂಗ್ರಹಿಸುವುದಕ್ಕಿಂತ ಮೊದಲು ದೇವರಿಗೆ ಪೂಜಿಸುವುದು ಇವರ ವಾಡಿಕೆ.

ಜೇನನ್ನು ಕೊಯ್ಲು ಮಾಡಲಿಕ್ಕೆ ಮೊದಲು ವಿವಿಧ ಬಗೆಯ ಎಲೆಗಳು ಮತ್ತು ಒಣಗಿದ ಕಡ್ಡಿಗಳನ್ನು ಸೇರಿಸಿ ಕೈಯಲ್ಲಿ ಹಿಡಿದುಕೊಂಡು ಹೋಗಲು ಬರುವಂತೆ ಪಂಜು (ಟಾರ್ಚ್) ಮಾಡಿಕೊಳ್ಳುತ್ತಾರೆ. ಇದರ ತುದಿಗೆ ಬೆಂಕಿ ಅಂಟಿಸಿ ಹೊಗೆ ಬರಿಸುತ್ತಾರೆ. ಇದಕ್ಕೆ ಇವರು 'ಸೂಟೆ' ಎಂದು ಕರೆಯುತ್ತಾರೆ. ಇದಲ್ಲದೆ, ಜೇನುನೊಣಗಳಿಗೆ ಹೊಗೆ ಹಾಕುವ ಸಲುವಾಗಿ ಗೂಡುಕಟ್ಟಿದ ಮರದ ಅಥವಾ ಬಂಡೆಯ ಕೆಳಗೆ ವಿವಿಧ ಬಗೆಯ ಎಲೆಗಳು ಮತ್ತು ಒಣಗಿದ ಕಡ್ಡಿಗಳನ್ನು ಗುಡ್ಡೆ ಹಾಕಿ ಬೆಂಕಿ ಹಚ್ಚುತ್ತಾರೆ. ಹೀಗೆ ಬೆಂಕಿಯಿಂದ ಹೊಗೆ ಬರಲಾರಂಬಿಸಿದ ಮೇಲೆ ಜೇನು ನೊಣಗಳು ಗೂಡಿನಿಂದ ಆಚೆ ಹೋಗುತ್ತವೆ. ಆಗ ಜೇನು ಕೀಳಲು ಬಂದವರು ಅಲ್ಲಿಯೇ ದೊರೆಯುವ ಮರಗಳ ತೊಗಟೆ ಮತ್ತು ನಾರುಗಳಿಂದ ಮೈಯನ್ನು ಮುಚ್ಚಿಕೊಂಡು, ಒಂದು ಕೈಯಲ್ಲಿ ಸೂಟೆ ಮತ್ತು ಇನ್ನೊಂದು ಕೈಯಲ್ಲಿ ಚಾಕು ಮತ್ತು ಜೇನು ಹುಟ್ಟು ಹಾಕಲು ಬೇಕಾದ ಪಾತ್ರೆಯನ್ನು ಕೈಯಲ್ಲಿ ಹಿಡಿದುಕೊಂಡು ಮರವನ್ನು ಹತ್ತಿ ಜೇನುಹುಟ್ಟನ್ನು ಚಾಕುವಿನಿಂದ ಕೊಯ್ದು ಪಾತ್ರೆಯಲ್ಲಿ ಹಾಕಿಕೊಂಡು ಮರದಿಂದ ಕೆಳಗಿಳಿದು ಬರುತ್ತಾರೆ. ನಂತರ ಹುಟ್ಟಿನಿಂದ ಜೇನನ್ನು ಹಿಂಡಿಕೊಂಡು ಹುಟ್ಟನ್ನು ಅಲ್ಲಿಯೇ ಬಿಟ್ಟು ಜೇನುತುಪ್ಪ ಮಾತ್ರ ತಮ್ಮೊಂದಿಗೆ ಕೊಂಡೊಯ್ಯುತ್ತಾರೆ. ಹೀಗೆ ಹುಟ್ಟನ್ನು ಅಲ್ಲಿಯೇ ಬಿಡುವುದರಿಂದ ಅದು ಅಲ್ಲಿರುವ ಇತರ ಪ್ರಾಣಿ ಪಕ್ಷಿಗಳಿಗೆ ಆಹಾರವಾಗುತ್ತದೆ.

**ನೆಲ್ಲಿಕಾಯಿ :** ಮರದಲ್ಲಿ ಸಾಮಾನ್ಯವಾಗಿ 25 ಕಿಲೋ ಗಿಂತ ಅಧಿಕ ನೆಲ್ಲಿಕಾಯಿಗಳು ಇದ್ದರೆ ಅಂತಹ ಮರಗಳಿಂದ ಮಾತ್ರ ನೆಲ್ಲಿಕಾಯಿಗಳನ್ನು ಸಂಗ್ರಹಿಸಲು ಆಯ್ಕೆ ಮಾಡಿಕೊಳ್ಳುತ್ತಾರೆ. ಅದಕ್ಕಿಂತ ಕಡಿಮೆ ಕಾಯಿಗಳು ಇದ್ದರೆ ಕೊಯ್ಲು ಮಾಡದೆ, ಮರದಲ್ಲಿಯೇ ಬಿಡುತ್ತಾರೆ. ಇವರು ಕೊಯ್ಲು ಮಾಡುವಾಗ ಎಲ್ಲಾ ಕಾಯಿಗಳನ್ನು ಕಿತ್ತುಕೊಳ್ಳದೆ, ಸ್ವಲ್ಪ ಕಾಯಿಗಳನ್ನು ಮರದಲ್ಲಿಯೇ ಬಿಡುತ್ತಾರೆ. ಅಲ್ಲದೆ, ಕೊಯ್ಲು ಮಾಡಿದ ಮೇಲೆ ಸ್ವಲ್ಪ ಕಾಯಿಗಳನ್ನು ಮರದ ಸುತ್ತ ಮುತ್ತ ಚೆಲ್ಲುತ್ತಾರೆ. ಇದು ಮತ್ತೆ ಸಸ್ಯಗಳು ಬೆಳೆಯಲು ಸಹಾಯವಾಗುತ್ತದೆ. ಅಲ್ಲದೆ, ಕೆಲ ಪ್ರಾಣಿ ಪಕ್ಷಿಗಳಿಗೆ ಆಹಾರ ದೊರೆತಂತಾಗುತ್ತದೆ.

**ಮಾಕಳಿ ಬೇರು :** ಮಾಕಳಿ ಬೇರನ್ನು ಸಂಗ್ರಹಿಸಬೇಕಾದರೆ, ಇವರು ಒಂದು ಸಸ್ಯದಲ್ಲಿ 2–4 ಬೇರುಗಳನ್ನು ಮಾತ್ರ ಕಿತ್ತುಕೊಂಡು ಮಿಕ್ಕವನ್ನು ಸಸ್ಯದಲ್ಲಿಯೇ ಬಿಡುತ್ತಾರೆ. ಅಲ್ಲದೆ, ಸಸ್ಯಗಳಿಂದ

ಬೇರುಗಳನ್ನು ಕಿತ್ತುಕೊಂಡ ಮೇಲೆ ಉಳಿದ ಬೇರುಗಳನ್ನು ಅಲ್ಲಿಯೇ ಇದ್ದ ಮಣ್ಣಿನಿಂದ ಮುಚ್ಚುತ್ತಾರೆ. ಹೀಗೆ ಮಾಡುವುದರಿಂದ ಬೇರುಗಳು ಮತ್ತೆ ಚಿಗುರೊಡೆದು ಬೆಳೆಯಲು ಸಾಧ್ಯವಾಗುತ್ತದೆ.

ಗೆಡ್ಡೆ-ಗೆಣಸುಗಳಾದ ನುವೆ ಗೆಣಸು, ನಾರೆ ಗೆಣಸು, ಬೆಲಾರೆ ಗೆಣಸು ಸಂಗ್ರಹಿಸುವಾಗಲೂ ಇದೇ ವಿಧಾನವನ್ನು ಅನುಸರಿಸುತ್ತಾರೆ. ಅರಣ್ಯ ಉತ್ಪನ್ನಗಳನ್ನು ಸಂಗ್ರಹಿಸಲು ತಮ್ಮ ಮಕ್ಕಳನ್ನು ಜತೆಗೆ ಕರೆದುಕೊಂಡು ಹೋಗಿ ಸಂಗ್ರಹಿಸುವ ವಿಧಾನವನ್ನು ಮಕ್ಕಳಿಗೆ ಪ್ರಾತ್ಯಕ್ಷಿಕೆ ಮೂಲಕ ತೋರಿಸಿಕೊಡುವುದರಿಂದ ತಮ್ಮ ದೇಶಿ ಅರಿವನ್ನು ಮುಂದಿನ ತಲೆಮಾರುಗಳಿಗೆ ತಲುಪಿಸುತ್ತಾರೆ.

**ಹುಣಸೆ** : ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ವಾಸಿಸುತ್ತಿರುವ ಸುತ್ತಲ ಪ್ರದೇಶದಲ್ಲಿ ಸಾಕಷ್ಟು ಹುಣಸೆ ಮರಗಳು ಇವೆ. ಮರಗಳು ಸಾಮಾನ್ಯವಾಗಿ ಡಿಸೆಂಬರ್ ಮತ್ತು ಫೆಬ್ರುವರಿ ತಿಂಗಳಲ್ಲಿ ಹಣ್ಣು ಮಾಗಿ ಕೊಯ್ಲಿಗೆ ಬಂದಿರುತ್ತದೆ. ಆದ್ದರಿಂದ ಡಿಸೆಂಬರ್‌ದಿಂದ ಫೆಬ್ರುವರಿಯಲ್ಲಿ ಕೊಯ್ಲು ಮಾಡುತ್ತಾರೆ.

ಇವರು ಗಿಡದಿಂದ ಕಾಯಿಯನ್ನು ಬಿಡಿಸಬೇಕಾದರೆ, ಒಬ್ಬಿಬ್ಬರು ಗಿಡವನ್ನು ಏರಿ ಕೊಂಬೆಗಳನ್ನು ಜೋರಾಗಿ ಅಲುಗಾಡಿಸುತ್ತಾರೆ. ಅಥವಾ ಉದ್ದನೆಯ ಕೋಲಿನ ಸಹಾಯದಿಂದ ಮಾಗಿದ ಕಾಯಿಗಳನ್ನು ಕೆಳಗೆ ಬೀಳಿಸುತ್ತಾರೆ. ಕೆಳಗೆ ಬಿದ್ದ ಕಾಯಿಗಳನ್ನು ಇವರ ಜತೆ ಬಂದ ಹೆಣ್ಣುಮಕ್ಕಳು ಮತ್ತು ಮಕ್ಕಳು ಆಯ್ದುಕೊಳ್ಳುತ್ತಾರೆ. ಭಾರತೀಯರ ಸಾಂಪ್ರದಾಯಿಕ ಅಡುಗೆಯಲ್ಲಿ ಹೆಚ್ಚು ಪ್ರಾಮುಖ್ಯತೆ ಪಡೆದಿರುವ ಇದು ಅಡುಗೆಗಾಗಿಯೇ ಹೆಚ್ಚು ಬಳಕೆಯಲ್ಲಿದೆ. ಹುಣಸೆ ಬೀಜವನ್ನು ಸಾಕುಪ್ರಾಣಿಗಳ ಆಹಾರವಾಗಿ ಬಳಸುತ್ತಾರೆ. ಇದಲ್ಲದೆ, ಹುಣಸೆ ಚಿಗುರೆಲೆ, ಹೂವನ್ನು ಸಾರು ಮಾಡಲು ಬಳಸುತ್ತಾರೆ.

**ಅಂಟವಾಳಕಾಯಿ** : ಸಾಮಾನ್ಯವಾಗಿ ಎಪ್ರಿಲ್ ತಿಂಗಳಲ್ಲಿ ಕೊಯ್ಲು ಮಾಡುತ್ತಾರೆ. ಕೊಂಬೆಯನ್ನು ಅಲುಗಾಡಿಸಿ ಕಾಯಿಗಳನ್ನು ಕೆಳಗೆ ಬೀಳಿಸಿ ನಂತರ ಸಂಗ್ರಹಿಸುತ್ತಾರೆ. ಅಂಟವಾಳಕಾಯಿಯು ಸ್ವಚ್ಛಗೊಳಿಸುವ ಗುಣ ಹೊಂದಿರುವುದರಿಂದ ನೆಲ ತೊಳೆಯಲು, ಸಿಂಕ್ ತೊಳೆಯಲು ಪಾತ್ರೆಯ ಎಣ್ಣೆ ಕಲೆಗಳನ್ನು ಹೋಗಲಾಡಿಸಲು ಹಾಗೂ ಚಿನ್ನ, ಬೆಳ್ಳಿ, ರೇಷ್ಮೆ ವಸ್ತುಗಳನ್ನು ಸ್ವಚ್ಛಗೊಳಿಸಲು ಉಪಯೋಗಿಸುತ್ತಾರೆ. ಇದೇ ವಿಧಾನದಲ್ಲಿ ಸೀಗೆಕಾಯಿ ಮತ್ತು ಅಳಲೆಯನ್ನು ಸಂಗ್ರಹಿಸುತ್ತಾರೆ.

## 4.4 ಬುಡಕಟ್ಟುಗಳ ಆಹಾರ ಸಂಸ್ಕೃತಿ, ವೈವಿಧ್ಯತೆ ಮತ್ತು ಪ್ರಸ್ತುತ ಸ್ಥಿತಿ

### 4.4.1 ಆಹಾರ ಪದ್ಧತಿ

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಜನರ ಆಹಾರ ಪದ್ಧತಿಯು ಪ್ರಮುಖವಾಗಿ ತಾವೇ ಬೆಳೆಯುವ ಧಾನ್ಯಗಳು, ಬೇಳೆ-ಕಾಳುಗಳು ಮತ್ತು ಹತ್ತಿರದ ಅರಣ್ಯದಲ್ಲಿ ಕಾಲಕ್ಕನುಗುಣವಾಗಿ ದೊರೆಯುವ ಸೊಪ್ಪು, ಗೆಡ್ಡೆಗೆಣಸು, ಹಣ್ಣುಗಳು ಮತ್ತು ಅರಣ್ಯದಿಂದ ಬೇಟೆಯಾಡಿ ತರುವ ಚಿಕ್ಕಪುಟ್ಟ ಪ್ರಾಣಿಗಳ ಮೇಲೆ ಅವಲಂಬಿತವಾಗಿದೆ.

ರಾಗಿಯು ಇವರು ಬೆಳೆಯುವ ಮುಖ್ಯ ಬೆಳೆಯಾಗಿದ್ದು ಇವರ ದೈನಿಂದಿನ ಆಹಾರದ ಬಹುಭಾಗವನ್ನು ಆವರಿಸಿದೆ. ಹಾಗೂ ಇವರ ಆಹಾರದ ಪ್ರಮುಖ ಆಹಾರ ಧಾನ್ಯವಾಗಿದೆ. ಇತ್ತೀಚಿನ ದಿನಗಳಲ್ಲಿ ಪಡಿತರ ಯೋಜನೆ ಅಡಿಯಲ್ಲಿ ಪ್ರತೀ ಕುಟುಂಬಕ್ಕೆ ತಿಂಗಳಿಗೆ 25–30ಕಿಲೋ ಗ್ರಾಂ ಅಕ್ಕಿ ದೊರೆಯುತ್ತಿರುವುದರಿಂದ ಅಕ್ಕಿಯೂ ಸಹ ಇವರು ಬಳಸುವ ಆಹಾರ ಧಾನ್ಯಗಳಲ್ಲಿ ಪ್ರಮುಖ ಭಾಗವಾಗಿದೆ.

ತೊಗರಿ, ಅವರೆ, ಅಲಸಂದೆ, ಹುರಳಿ ಇವು ಇವರ ದೈನಂದಿನ ಆಹಾರದಲ್ಲಿ ಬಳಕೆಯಲ್ಲಿರುವ ಪ್ರಮುಖ ದ್ವಿದಳ ಧಾನ್ಯಗಳು. ಸಾಮಾನ್ಯವಾಗಿ ಈ ಧಾನ್ಯಗಳನ್ನು ಇವರು ಬೆಳೆಯುವುದರಿಂದ ಇವುಗಳೂ ಸಹ ಆಹಾರದ ಭಾಗವಾಗಿವೆ. ಆದರೆ ಬಳಕೆಯ ಪ್ರಮಾಣವು ಮುಖ್ಯವಾಗಿ ಲಭ್ಯತೆಯನ್ನು ಆಧರಿಸಿರುತ್ತದೆ. ದ್ವಿದಳಧಾನ್ಯಗಳನ್ನು ಪ್ರತಿನಿತ್ಯದ ಅಡುಗೆಯಲ್ಲಿ ಸಾಮಾನ್ಯವಾಗಿ ಯಾವುದಾದರೊಂದು ಸೊಪ್ಪಿನ ಜತೆ ಬೆರಸಿ ಸಾಂಬರ್ ಅಥವಾ ಪಲ್ಯ ತಯಾರಿಸಲು ಬಳಸುತ್ತಾರೆ.

ಇವರ ಆಹಾರ ಪದ್ದತಿಯು ತುಂಬಾ ಸರಳವಾಗಿದ್ದು, ಅಷ್ಟೇನು ವೈವಿಧ್ಯಮಯವಾಗಿರದೇ ಏಕರೂಪದ್ದಾಗಿರುತ್ತದೆ. ಸಾಮಾನ್ಯವಾಗಿ ಬೆಳಗಿನ ಸಮಯದ ತಿಂಡಿ ಅಥವಾ ಊಟಕ್ಕೆ ರಾಗಿ ಮುದ್ದೆ ಜತೆಗೆ ನೆಂಚಿಕೊಳ್ಳಲು ಯಾವುದಾದರೊಂದು ಬೇಳೆ ಜತೆಗೆ ಸೊಪ್ಪು ಅಥವಾ ತರಕಾರಿ ಬೆರಸಿದ ಸಾರು ಇರುತ್ತದೆ. ಮಧ್ಯಾಹ್ನಕ್ಕೆ ಹೆಚ್ಚಾಗಿ ಅದೇ ಊಟ ಅಥವಾ ಕೂಲಿ ಕೆಲಸಕ್ಕೆ ಹೋಗುವವರಾಗಿದ್ದಲ್ಲಿ, ಅವರು ಕೊಡುವ ಊಟ ಹಾಗೂ ಅಂಗನವಾಡಿ ಮತ್ತು ಶಾಲೆಯಲ್ಲಿ ಕೊಡುವ ಆಹಾರವೇ ಬಹುತೇಕ ಸಮಯ ಮಕ್ಕಳ ಮಧ್ಯಾಹ್ನದ ಊಟವಾಗಿರುತ್ತದೆ. ರಾತ್ರಿ ಊಟಕ್ಕೆ ಮತ್ತೆ ಅದೇ ಬೆಳಿಗ್ಗೆ ತಯಾರಿಸಿದ ಸಾರಿಗೆ ಅನ್ನ ಅಥವಾ ಮುದ್ದೆ ಮಾಡಿ ಸೇವಿಸುವುದು ಕಂಡುಬರುತ್ತದೆ. ಕೋಷ್ಟಕ 4.10 ರಲ್ಲಿ ಸೋಲಿಗ ಮತ್ತು ಜೇನುಕುರುಬರ ದೈನಂದಿನ ಆಹಾರ ಪದ್ದತಿಯ ಮಾದರಿಯನ್ನು ಕೊಡಲಾಗಿದೆ.

**ಕೋಷ್ಟಕ 4.10 ಸೋಲಿಗ ಮತ್ತು ಜೇನುಕುರುಬರ ಆಹಾರ ಪದ್ದತಿಯ ಮಾದರಿ**

| **ಸಮಯ** | **ಖಾದ್ಯಗಳು** |
|---|---|
| ಬೆಳಿಗ್ಗೆ | ಬರಗಾಪೀ (ಹಾಲು ಹಾಕದೇ ಬರೀ ಟೀಸೊಪ್ಪು ಮತ್ತು ಸಕ್ಕರೆ ಬೆರಸಿ ಕುದಿಸಿ ಕುಡಿಯುವುದು) |
| ಬೆಳಗಿನ ತಿಂಡಿ | ಮುದ್ದೆ/ ಅನ್ನ, ಸೊಪ್ಪುಸಾರು/ಕಾಳುಸಾರು/ತರಕಾರಿ ಸಾಂಬರ್, |
| ಮಧ್ಯಾಹ್ನ | ಸಾಮಾನ್ಯವಾಗಿ ಕೂಲಿ ಕೆಲಸಕ್ಕೆ ಹೋದಾಗ ಅವರು ಕೊಡುವ ಊಟ |
| ಸಾಯಂಕಾಲ | ಬರಗಾ ಪೀ ಕೆಲವೊಮ್ಮೆ ಏನಾದರೂ ತಿಂಡಿ |
| ರಾತ್ರಿ | ಮುದ್ದೆ / ಅನ್ನ, ಸೊಪ್ಪುಸಾರು/ಕಾಳುಸಾರು/ತರಕಾರಿ ಸಾಂಬರ್, |

ಇವರ ಪ್ರತಿನಿತ್ಯದ ಅಡುಗೆಯಲ್ಲಿ ಅಷ್ಟೇನು ವೈವಿಧ್ಯತೆ ಇರದಿದ್ದರೂ ಸಹ ಇವರು ಬಳಸುವ ಸೊಪ್ಪುಗಳು, ಗೆಡ್ಡೆಗೆಣಸುಗಳು, ಹಣ್ಣುಗಳು ವೈವಿಧ್ಯಮಯವಾಗಿವೆ. ಅರಣ್ಯದ ಒಳಗೆ ಮತ್ತು ಅರಣ್ಯದ ಅಂಚಿನಲ್ಲಿ ವಾಸಿಸುತ್ತಿರುವ ಬಹುತೇಕ ಕುಟುಂಬಗಳು ವರ್ಷದಲ್ಲಿ ಸುಮಾರು 10–15 ವಿವಿಧ ಬಗೆಯ ಸೊಪ್ಪುಗಳು(ಕೋಷ್ಟಕ–4.7), 15–20 ಬಗೆಯ ಕಾಡು ಜಾತಿಯ ಹಣ್ಣುಗಳು, 4–5 ಬಗೆಯ ಗೆಡ್ಡೆಗೆಣಸುಗಳು ಇರುತ್ತವೆ. ಇವುಗಳಲ್ಲದೆ, ಇವರು ಸಾಮಾನ್ಯವಾಗಿ ಮನೆಯ ಮುಂದೆ ಅಥವಾ ಹಿಂದೆ ಕೈತೋಟದಲ್ಲಿ ಬೆಳೆದ ತಾಜಾ ತರಕಾರಿಗಳು, ಸೊಪ್ಪು ಮತ್ತು ಹಣ್ಣುಗಳನ್ನು ಬಳಸುವುದರಿಂದ ಈ ಆಹಾರಗಳು ಇವರ ಆಹಾರದ ಪ್ರಾಮುಖ್ಯತೆಯನ್ನು ಹೆಚ್ಚಿಸಿವೆ.

ಇವರು ಮಾಂಸಾಹಾರಿಗಳಾಗಿದ್ದರೂ ಮಾಂಸವನ್ನು ನಿಯಮಿತವಾಗಿ ಸೇವಿಸುವುದು ಕಂಡುಬಂದಿಲ್ಲ. ಮಾರುಕಟ್ಟೆಗೆ ಹೋಗಿ ಮಾಂಸ ತಂದು ಸೇವಿಸುವ ಪದ್ಧತಿ ಇವರಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಆದರೆ, ಸಾಕಿದ ಕೋಳಿ ಮತ್ತು ಕೆರೆಕುಂಟೆಗಳಲ್ಲಿ ದೊರಕುವ ಮೀನು ಇವರು ಮಾಂಸಕ್ಕಾಗಿ ಬಳಸುವ ಆಹಾರಗಳಾಗಿವೆ. ಇದಲ್ಲದೆ, ಅಪರೂಪಕ್ಕೆ ಒಮ್ಮೊಮ್ಮೆ ಕಾಡಲ್ಲಿ ದೊರಕುವ ಮೊಲ, ಅಳಿಲು, ಕಾಡಹಂದಿಗಳನ್ನು ಬೇಟೆ ಆಡಿ ತಂದು ತಿನ್ನುತ್ತಾರೆ.

ಇವರ ಆಹಾರದಲ್ಲಿ ಹಾಲು ಮತ್ತು ಹಾಲಿನ ಪದಾರ್ಥಗಳ ಬಳಕೆ ವಿರಳ ಎನ್ನಬಹುದು. ಹೈನೋತ್ಪನ್ನಗಳ ಸಲುವಾಗಿ ಎಂದೇ ಹಸು ಸಾಕಾಣಿಕೆ ಪದ್ಧತಿ ರೂಢಿಸಿಕೊಂಡವರಲ್ಲ. ಇವರು ಪ್ರತಿನಿತ್ಯ ಟೀ ಸೇವನೆ ಮಾಡುತ್ತಿದ್ದರೂ ಸಹ ಟೀ ತಯಾರಿಕೆಗೆ ಹಾಲನ್ನು ಬಳಸದೇ ಬರೀ ಟೀ ಪುಡಿ ಮತ್ತು ಸಕ್ಕರೆ ಬೆರಸಿ ತಯಾರಿಸುತ್ತಾರೆ. ಇದಕ್ಕೆ ಇವರ ಆಡು ಭಾಷೆಯಲ್ಲಿ ಬರಗಾಪೀ ಎಂದು ಕರೆಯುತ್ತಾರೆ.

ಇವರ ಪ್ರತಿನಿತ್ಯದ ಆಹಾರ ಪದ್ಧತಿಯಲ್ಲಿ ಹಣ್ಣುಗಳ ಬಳಕೆ ನಿಯಮಿತವಾಗಿರದಿದ್ದರೂ ಸಹ ಅರಣ್ಯದಲ್ಲಿ ಆಯಾ ಋತುಮಾನದಲ್ಲಿ ದೊರಕುವ ಕಾಡು ಜಾತಿಯ ಹಣ್ಣುಗಳಾದ ಚೊಟ್ಟೆ ಹಣ್ಣು, ಆಲೆ ಹಣ್ಣು, ನಗರಿ ಹಣ್ಣು ಮುಂತಾದವುಗಳುನ್ನು ಸಂಗ್ರಹಿಸಿ ತಂದು ಸೇವಿಸುತ್ತಾರೆ. ಅಲ್ಲದೆ, ಮನೆಯ ಕೈತೋಟದಲ್ಲಿ ಬಾಳೆ, ಹಲಸು, ಸೀಬೆ ಮುಂತಾದವಗಳನ್ನು ಬೆಳಸಿ ಸೇವಿಸುವುದನ್ನು ರೂಢಿಸಿಕೊಂಡಿದ್ದಾರೆ.

ಇವರು ಸೇವಿಸುವ ಆಹಾರದಲ್ಲಿನ ಪೋಷಕಾಂಶಗಳ ಪ್ರಮಾಣವನ್ನು ತಿಳಿಯಲು ಒಂದು ದಿನದ ಆಹಾರ ಸೇವನೆಯನ್ನು ಡಯಟ್ ರಿಕಾಲ್ ವಿಧಾನದ ಮೂಲಕ ವಿಶ್ಲೇಷಿಸಲಾಗಿದೆ (ಕೋಷ್ಟಕ–4.11). ಇವರು ಸೇವಿಸುವ ಆಹಾರದಿಂದ 1678 ಕಿಲೊ ಕ್ಯಾಲೊರಿ ಶಕ್ತಿ, 39 ಗ್ರಾಂ ಪ್ರೊಟೀನ್, 11.6 ಗ್ರಾಂ ಕೊಬ್ಬು ಖನಿಜ ಲವಣಾಂಶವಾದ ಕ್ಯಾಲ್ಸಿಯಂ 483 ಮಿ.ಗ್ರಾಂ, ಕಬ್ಬಿಣ 20 ಮಿ.ಗ್ರಾಂ. ಮತ್ತು ಸಿ ಜೀವಸತ್ವ 27.4 ಮಿ.ಗ್ರಾಂ. ಇರುವುದು ವಿಶ್ಲೇಷಣೆಯಿಂದ ತಿಳಿದುಬಂದಿದೆ. ಕ್ಯಾಲ್ಸಿಯಂ ಒಂದನ್ನು ಬಿಟ್ಟು ಮಿಕ್ಕೆಲ್ಲಾ ಪೋಷಕಾಂಶಗಳು ಆಹಾರ ಮತ್ತು ಪೋಷಣೆ ತಜ್ಞರು ಭಾರತೀಯರಿಗೆ ಶಿಫಾರಸ್ಸು ಮಾಡಿದ ಪ್ರಮಾಣಕ್ಕಿಂತ ಕಡಿಮೆಯೇ ಇದೆ.

**ಕೋಷ್ಟಕ 4.11 ಸೋಲಿಗ ಮತ್ತು ಜೇನುಕುರುಬ ಮಹಿಳೆಯರಿಗೆ ಒಂದು ದಿನದ ಆಹಾರದಿಂದ ದೊರೆಯುವ ಪೋಷಕಾಂಶಗಳು**

| ಪೋಷಕಾಂಶಗಳು | ಆಹಾರದಿಂದ ದೊರಕುವ ಪೋಷಕಾಂಶಗಳ ಪ್ರಮಾಣ | ಭಾರತೀಯ ಮಹಿಳೆಗೆ(ICMR) ನಿಗಧಿಪಡಿಸಿದ ಪೋಷಕಾಂಶಗಳ ಪ್ರಮಾಣ | ನಿಗದಿಪಡಿಸಿದ ಪ್ರಮಾಣದ ಶೇಕಡಾವಾರು |
|---|---|---|---|
| ಶಕ್ತಿ(ಕಿ.ಕ್ಯಾಲೋರಿ) | 1678 | 2225 | 75 |
| ಪ್ರೊಟೀನ್(ಗ್ರಾಂ) | 39.0 | 50 | 78 |
| ಕೊಬ್ಬು(ಗ್ರಾಂ) | 11.6 | 20 | 58 |
| ಕ್ಯಾಲ್ಸಿಯಂ(ಮಿ.ಗ್ರಾಂ) | 483 | 400 | 120 |
| ಕಬ್ಬಿಣ(ಮಿ.ಗ್ರಾಂ) | 20.0 | 30 | 66 |
| ಜೀವಸತ್ವ'ಸಿ' (ಮಿ.ಗ್ರಾಂ) | 27.4 | 30 | 91 |

ಇವರ ಆಹಾರದಲ್ಲಿ ಬೇಳೆಕಾಳುಗಳು ಹಾಲು ಮತ್ತು ಹಾಲಿನ ಪದಾರ್ಥ, ತರಕಾರಿಗಳು ಕಡಿಮೆ ಪ್ರಮಾಣದಲ್ಲಿ ಇರುವುದು ಮುಖ್ಯವಾಗಿ ಪೋಷಕಾಂಶಗಳ ಕೊರತೆಗೆ ಕಾರಣವಾಗಿದೆ. ರಾಗಿಯಲ್ಲಿ ಖನಿಜಲವಣವಾದ ಕ್ಯಾಲ್ಸಿಯಂ ಅಧಿಕ ಪ್ರಮಾಣದಲ್ಲಿ ಇರುತ್ತದೆ. ಇವರ ಆಹಾರದಲ್ಲಿ ರಾಗಿ ಪ್ರಮುಖ ಭಾಗವನ್ನು ಆವರಿಸಿರುವುದರಿಂದ ಜತೆಗೆ ಸೊಪ್ಪುಗಳನ್ನು ಯಥೇಚ್ಛವಾಗಿ ಬಳಸುತ್ತಿರುವುದರಿಂದ ಕ್ಯಾಲ್ಸಿಯಂ ಇವರಿಗೆ ಸಾಕಷ್ಟು ಪ್ರಮಾಣದಲ್ಲಿ ಲಭ್ಯವಾಗುತ್ತಿದೆ. ನೆಲ್ಲಿಕಾಯಿ ಮತ್ತು ಇತರೇ ಹುಳಿಯುಕ್ತ ಹಣ್ಣುಗಳ ಬಳಕೆ 'ಸಿ' ಜೀವಸತ್ವದ ಬೇಡಿಕೆಯನ್ನು ಪೂರೈಸುವಲ್ಲಿ ಸಹಕಾರಿಯಾಗಿವೆ.

### 4.4.2 ವಿಶೇಷ ಸಂದರ್ಭದಲ್ಲಿ ಆಹಾರ ಪದ್ದತಿ

ನವಜಾತ ಶಿಶುವಿಗೆ ತಾಯಿ ಹಾಲು ಸಂಪೂರ್ಣ ಆಹಾರ. ಮಗುವಿಗೆ ಆರು ತಿಂಗಳು ತುಂಬುವವರೆಗೆ ತಾಯಿಯ ಹಾಲೊಂದೇ ಸಾಕಾಗುತ್ತದೆ. ಆರು ತಿಂಗಳ ನಂತರ ಮಗುವಿನ ಬೆಳವಣಿಗೆಗೆ ತಾಯಿಯ ಹಾಲು ಸಾಕಾಗದ ಕಾರಣ ತಾಯಿಯ ಹಾಲಿನೊಂದಿಗೆ ಮೇಲು ಅಹಾರ ಅಥವಾ ಪೂರಕ ಆಹಾರದ ಅವಶ್ಯಕತೆ ಇರುತ್ತದೆ. ಈ ಮೇಲು ಆಹಾರವನ್ನು ಕೊಡುವ ಪದ್ದತಿಯು ಒಂದೊಂದು ಸಂಪ್ರದಾಯದಲ್ಲಿ ಒಂದೊಂದು ರೀತಿಯಾಗಿದ್ದು ಇದು ಅವರ ಸಾಮಾಜಿಕ-ಆರ್ಥಿಕ ಸ್ಥಿತಿ, ಸಂಪ್ರದಾಯ ಹಾಗೂ ಆಹಾರದ ಪರಂಪರೆಯು ಮೇಲೆ ಅವಲಂಬಿತವಾಗಿರುತ್ತದೆ.

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯದವರು ಸಾಮಾನ್ಯವಾಗಿ ಮೇಲು ಆಹಾರವನ್ನು ಮಗುವಿಗೆ 4–6 ತಿಂಗಳು ತುಂಬಿದಾಗ ಆರಂಭಿಸುತ್ತಾರೆ. ಉಪ್ಪಿಟ್ಟು, ಬೆಲ್ಲ ಅಥವಾ ಉಪ್ಪು ಬೆರಸಿ ತಯಾರಿಸಿದ ರವೆ ಗಂಜಿ ಮತ್ತು ಕಾಡು ಸೊಪ್ಪಿನ ಸಾರು ಇವು ಸೋಲಿಗರ ಸಮುದಾಯದಲ್ಲಿ ಐದು ತಿಂಗಳಿನಿಂದ ಎರಡು ವರ್ಷದ ಮಕ್ಕಳಿಗೆ ವಿಶೇಷವಾಗಿ ತಯಾರಿಸಿ ಕೊಡುವ ಆಹಾರ ಪದಾರ್ಥಗಳಾಗಿವೆ. ಏಲಕ್ಕಿ ಮತ್ತು ಲವಂಗ ಬೆರಸಿ ತಯಾರಿಸಿ ಕೊಡುವ ಮುದ್ದೆಯು ಜೇನುಕುರುಬರ ಚಿಕ್ಕ ಮಕ್ಕಳ ವಿಶೇಷ ಆಹಾರವಾಗಿದೆ(ಕೋಷ್ಟಕ–4.12).

ಸ್ತ್ರೀ ಗರ್ಭಿಣಿಯಾದಾಗ ಪೋಷಕಾಂಶಗಳ ಬೇಡಿಕೆ ಹೆಚ್ಚಾಗುವುದು ಸಹಜ. ಈ ಸಮಯದಲ್ಲಿ ಗರ್ಭದಲ್ಲಿರುವ ಮಗುವಿನ ಬೆಳವಣಿಗೆ ಹಾಗೂ ತಾಯ್ತನದ ತಯಾರಿಗಾಗಿ ಹೆಚ್ಚುವರಿ ಪೋಷಕಾಂಶಗಳ ಅವಶ್ಯಕತೆ ಇರುತ್ತದೆ. ಈ ಒಂದು ಅವಶ್ಯಕತೆಯನ್ನು ನೀಗಿಸಲು ನಮ್ಮ ಪರಂಪರೆಯಲ್ಲಿ ಹಲವು ಬಗೆಯ ಸಂಪ್ರದಾಯಗಳು ಹುಟ್ಟಿಕೊಂಡು ರೂಢಿಗತವಾಗಿರುವುದನ್ನು ಕಾಣುತ್ತೇವೆ. ಸ್ತ್ರೀ ಗರ್ಭಿಣಿ ಎಂದು ತಿಳಿದಾಗ ಸಾಮಾನ್ಯವಾಗಿ ಗರ್ಭಿಣಿ ಸ್ತ್ರೀಯ ತವರು ಮನೆಯವರು, ಪರಿಚಯಸ್ತರು, ನೆರೆಹೊರೆಯವರು ಅವಳಿಗೆಂದೇ ವಿಶೇಷವಾಗಿ ವಿವಿಧ ಬಗೆಯ ಆಹಾರ ಪದಾರ್ಥಗಳನ್ನು ತಯಾರಿಸಿ ಕೊಡುವುದುಂಟು. ಮತ್ತು ಅದಕ್ಕೆಂದೇ ವಿಶೇಷ ಆಚರಣೆಗಳನ್ನು ರೂಢಿಸಿಕೊಂಡಿರುವುದುಂಟು. ಅಲ್ಲದೆ, ಇಂತಹ ಸಮಯದಲ್ಲಿ ಹುಟ್ಟಲಿರುವ ಮಗುವಿನ ಆರೋಗ್ಯವನ್ನು ಗಮನದಲ್ಲಿಟ್ಟುಕೊಂಡು ಆಹಾರಕ್ಕೆ ಸಂಬಂಧಿಸಿದಂತೆ ಕೆಲವೊಂದು ಆಹಾರಗಳನ್ನು ಸೇವಿಸಬಾರದು ಮತ್ತು ಕೆಲವನ್ನು ಹೆಚ್ಚಾಗಿ ಸೇವಿಸಬೇಕೆಂಬ ಕಟ್ಟುಪ್ಪಣೆಗಳನ್ನು ಪಾಲಿಸುವುದನ್ನು ಕಾಣುತ್ತೇವೆ. ಇಂತಹ ಯಾವುದೇ ಕಟ್ಟುಪಾಡುಗಳು ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿ ಆಚರಣೆಯಲ್ಲಿಲ್ಲದಿದ್ದರೂ ಸಹ ಈ ಸಮಯದಲ್ಲಿ ಅವಳು ಇಷ್ಟಪಡುವ ಆಹಾರನ್ನು ಸೇವಿಸಲು ಕೊಡುತ್ತಾರೆ. ಇಲ್ಲದಿದ್ದರೆ, ಗರ್ಭಿಣಿ ಯಾವುದಾದರೂ ಆಹಾರ ಪದಾರ್ಥದ ಮೇಲೆ ಆಸೆ ಇಟ್ಟುಕೊಂಡು ಸಹ ಸೇವಿಸದಿದ್ದರೆ, ಹುಟ್ಟುವ ಮಗವಿಗೆ ಅಂಗವೈಕಲ್ಯ ಅಥವಾ ಬುದ್ಧಿಮಾಂದ್ಯತೆ ಉಂಟಾಗಬಹುದೆಂದು ಇವರು ನಂಬಿದ್ದಾರೆ. ಕೋಷ್ಟಕ 4.12 ಮತ್ತು ಕೋಷ್ಟಕ 4.13 ರಲ್ಲಿ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿ ಮಕ್ಕಳು, ಗರ್ಭಿಣಿ ಮತ್ತು ಬಾಣಂತಿಯರಿಗಾಗಿ ಕೊಡುವ ವಿಶೇಷ ಆಹಾರಗಳ ಕುರಿತು ಉಲ್ಲೇಖಿಸಿದೆ.

ಸಾಮಾನ್ಯ ಅವಧಿಗಿಂತ ಬಾಣಂತನದಲ್ಲಿ ಪೋಷಕಾಂಶಗಳ ಅಗತ್ಯತೆ ಅಧಿಕವಾಗಿರುತ್ತದೆ. ಇದು ಹಾಲು ಉತ್ಪಾದನೆಗೆ ಹಾಗೂ ಹೆರಿಗೆಯಲ್ಲಿ ನಷ್ಟವಾದ ಶಕ್ತಿಯನ್ನು ಸರಿದೂಗಿಸಲು ಬೇಕಾಗುತ್ತದೆ. ಮಗು ಹುಟ್ಟಿದ ಮೊದಲ ಆರು ತಿಂಗಳು ಶಕ್ತಿಯ ಅವಶ್ಯಕತೆ ಮೊದಲಿಗಿಂತ ಸುಮಾರು 500 ಕ್ಯಾಲೊರಿ ಹಾಗೂ ಪ್ರೋಟೀನ್ 25 ಗ್ರಾಂ, ಕ್ಯಾಲ್ಸಿಯಂ 600 ಮಿ. ಗ್ರಾಂ ಹಾಗೂ ರಂಜಕ 600 ಮಿ.ಗ್ರಾಂನಷ್ಟು ಅಧಿಕ ಪ್ರಮಾಣದಷ್ಟು ಬೇಕಾಗುತ್ತದೆ. ಸೋಲಿಗ ಬುಡಕಟ್ಟುಗಳಲ್ಲಿ ವಿಶೇಷವಾಗಿ ಬಾಣಂತಿಯರಿಗೆ ಕೊಬ್ಬರಿ ಖಾರ, ಸಬ್ಬಕ್ಕಿ ಪಾಯಸ ಮತ್ತು ಸೊಪ್ಪುಗಳನ್ನು ಕೊಡುವುದನ್ನು ರೂಢಿಸಿಕೊಂಡಿರುವುದನ್ನು ಕಾಣಬಹುದು. ಇಂತಹ ಆಹಾರಗಳು ಬಾಣಂತಿಯರ ಹೆಚ್ಚಿದ ಪೋಷಕಾಂಶಗಳ ಅವಶ್ಯಕತೆಯನ್ನು ನೀಗಿಸಲು ಪ್ರಯೋಜನಕಾರಿಯಾಗಿವೆ. ಆದರೆ

ಬಾಣಂತಿಯರಿಗಾಗಿ ಯಾವುದೇ ವಿಶೇಷ ಆಹಾರ ತಯಾರಿಸಿ ಕೊಡುವ ಪದ್ದತಿ ಜೇನುಕುರುಬರಲ್ಲಿ ಕಂಡುಬಂದಿಲ್ಲ.

**ಕೋಷ್ಟಕ–4.12 ಸೋಲಿಗ ಬುಡಕಟ್ಟುಗಳಲ್ಲಿ ವಿಶೇಷ ಸಂದರ್ಭದ ಆಹಾರಗಳು**

| ಸಂದರ್ಭ | ವಿಶೇಷವಾಗಿ ಬಳಸುವ ಆಹಾರಗಳು | ಕ್ಫರಣ |
|---|---|---|
| ಮಕ್ಕಳು | ಬೆಲ್ಲ ಅಥವಾ ಉಪ್ಪು ಹಾಕಿ ತಯಾರಿಸಿದ ರವೆಗಂಜಿ/ರಾಗಿಗಂಜಿ<br>ಕಾಡುಸೊಪ್ಪು<br>ಉಪ್ಪಿಟ್ಟು | ಮಕ್ಕಳ ಬೆಳವಣಿಗೆಗೆ ಒಳ್ಳೆಯದೆಂದು |
| ಗರ್ಭಿಣಿ | ಇವರಿಗೆಂದೇ ಪ್ರತ್ಯೇಕವಾಗಿ ಯಾವುದೇ ವಿಶೇಷ ಆಹಾರ ತಯಾರಿಸಿ ಕೊಡುವುದಿಲ್ಲ. ಆದರೆ ಸೊಪ್ಪುಗಳು, ಹಣ್ಣುಗಳು ಮಾಂಸಾಹಾರ, ಕೋಳಿ ಮಾಂಸ, ಏಡಿ ಮತ್ತು ಅಣಬೆ ಇವುಗಳನ್ನು ಮಾಮೂಲಿಗಿಂತ ಹೆಚ್ಚಿಗೆ ಸೇವಿಸಲು ಕೊಡುತ್ತಾರೆ | ಗರ್ಭದಲ್ಲಿನ ಶಿಶುವಿನ ಬೆಳವಣಿಗೆಗೆ ಉತ್ತಮ, ಸರಳ ಹೆರಿಗೆಗೆ |
| ಬಾಣಂತಿ | ಕೊಬ್ಬರಿಖಾರಾ, ಸಬ್ಬಕ್ಕಿ ಪಾಯಸ, ಉತ್ತತ್ತಿ, ಮಾಂಸದ ಊಟ | ತಾಯಿಹಾಲು ಉತ್ಪತ್ತಿ ಹೆಚ್ಚಾಗಲು |

**ಕೋಷ್ಟಕ–4.13 ಜೇನುಕುರುಬ ಬುಡಕಟ್ಟುಗಳಲ್ಲಿ ವಿಶೇಷ ಸಂದರ್ಭದ ಆಹಾರಗಳು**

| ಸಂದರ್ಭ | ವಿಶೇಷವಾಗಿ ಬಳಸುವ ಆಹಾರಗಳು | ಕಾರಣ |
|---|---|---|
| **ಮಕ್ಕಳು** | ಏಲಕ್ಕಿ, ಲವಂಗ ಬೆರಸಿ ತಯಾರಿಸಿದ ರಾಗಿ ಮುದ್ದೆ | ಮಕ್ಕಳ ಆರೋಗ್ಯ ಚನ್ನಾಗಿರಲು |
| **ಗರ್ಭಿಣಿ** | ಮಾಮೂಲಿ ಆಹಾರ | – |

### 4.4.3 ಬುಡಕಟ್ಟು ಸಂಪ್ರದಾಯದಲ್ಲಿ ಹಬ್ಬಗಳು

ಹಬ್ಬಗಳ ಆಚರಣೆಯು ಸಾಮಾನ್ಯವಾಗಿ ವಿಶೇಷ ತಿಂಡಿ ತಿನಿಸು, ಸಿಹಿ ತಿನಿಸುಗಳನ್ನು ತಯಾರಿಸಿ ಸೇವಿಸುವುದು ಹಾಗೂ ಆಯಾ ಋತುಮಾನಕ್ಕನುಗುಣವಾಗಿ ದೊರಕುವ ಆಹಾರಗಳನ್ನು ಹಬ್ಬದ ನೆಪದಲ್ಲಿ ಕಡ್ಡಾಯವಾಗಿ ಸೇವಿಸುವ ಅವಕಾಶ ಮಾಡಿಕೊಡುತ್ತವೆ. ಸೋಲಿಗ ಬುಡಕಟ್ಟುಗಳಲ್ಲಿ ಅಕ್ಕಿಪಾಯಸ, ಮಂಸಾಹಾರ ತಯಾರಿಸಿ ಬಂದುಮಿತ್ರರೆಲ್ಲ ಒಂದೆಡೆ ಸೇರಿ ಆಹಾರ ಸೇವಿಸುವಂತಹ ಪದ್ಧತಿಗಳನ್ನು ರೂಢಿಸಿಕೊಂಡಿರುವುದು ತಿಳಿದುಬರುತ್ತದೆ.

ಸಾಮಾನ್ಯವಾಗಿ ಅತಿಥಿಗಳು ಮನೆಗೆ ಬಂದರೆ ಅವರನ್ನು ಸತ್ಕರಿಸುವುದು, ಉಪಚರಿಸುವುದನ್ನು ಬಹುತೇಕ ಸಂಪ್ರದಾಯಗಳು ರೂಢಿಸಿಕೊಂಡಿವೆ. ಅಂತೆಯೇ ಸೋಲಿಗರಲ್ಲೂ ಸಹ ಅತಿಥಿಗಳು ಆಗಮಿಸಿದರೆ, ಅವರಿಗಾಗಿಯೇ ಎಂದು ವಿಶೇಷವಾಗಿ ಮಾಂಸದ ಅಡಿಗೆಯನ್ನು ತಯಾರಿಸಿ ಉಪಚರಿಸುವುದನ್ನು ಕಾಣಬಹುದು ಈ ಕುರಿತ ವಿವರಣೆಯನ್ನು ಕೋಷ್ಟಕ 4.14 ಮತ್ತು ಕೋಷ್ಟಕ 4.15ರಲ್ಲಿ ವಿವರಿಸಲಾಗಿದೆ.

**ಕೋಷ್ಟಕ 4.14 ಸೋಲಿಗರ ಹಬ್ಬ ಆಚರಣೆಗಳಲ್ಲಿ ವಿಶೇಷ ಆಹಾರಗಳು**

| ಹಬ್ಬಗಳು | ವಿಶೇಷ ಭಕ್ಷಗಳು | ಕಾರಣ |
|---|---|---|
| ಯುಗಾದಿ | ಅಕ್ಕಿ ಪಾಯಸ, ಮೊಲ, ಹಂದಿ ಮುಂತಾದ ಪ್ರಾಣಿಗಳ ಮಾಂಸ | ಸಂಪ್ರದಾಯ |
| ಮದುವೆ | ಗೋಧಿ ಹುಗ್ಗಿ, ಬುಂದಿ, ಅನ್ನ | ಸಂಪ್ರದಾಯ |
| ಅಥಿತಿಗಳು | ಮಾಂಸ, ಮೀನು, ಚಿಕನ್, ಏಡಿ | ಸಂಪ್ರದಾಯ |
| ರೊಟ್ಟಿ ಹಬ್ಬ | ರಾಗಿ ರೊಟ್ಟಿ, ಕುಂಬಳಕಾಯಿ ಪಲ್ಯ, ಅನ್ನ, ಕುಂಬಳಕಾಯಿ ಸಾಂಬಾರ್ | ಸಂಪ್ರದಾಯ |

**ಕೋಷ್ಟಕ 4.15 ಜೇನುಕುರುಬರ ಹಬ್ಬ ಆಚರಣೆಗಳಲ್ಲಿ ವಿಶೇಷ ಆಹಾರಗಳು**

| ಹಬ್ಬಗಳು | ವಿಶೇಷ ಭಕ್ಷಗಳು | ಕಾರಣ |
|---|---|---|
| ಯುಗಾದಿ | ಒಬ್ಬಟ್ಟು, ಪಾಯಸ | ಬೀರದೇವರಿಗೆ ಎಡೆ ಕೊಡುವುದು |
| ದೀಪಾವಳಿ | ಒಬ್ಬಟ್ಟು, ಪಾಯಸ | ದನಕರುಗಳು, ಮನೆ ತೊಳೆಯುವುದು ಸಂಬಂಧಿಕರನ್ನು ಊಟಕ್ಕೆ ಕರೆಯುವುದು |

ಕಾಡು, ಸೋಲಿಗರ ಮತ್ತು ಜೇನುಕುರುಬರ ಬದುಕಿನ ಅವಿಭಾಜ್ಯ ಅಂಗ. ಅವರ ದೈನಂದಿನ ಬದುಕು, ನಂಬಿಕೆ, ಧಾರ್ಮಿಕ ಆಚರಣೆಗಳು, ಪೂಜೆ ಪುನಸ್ಕಾರಗಳೆಲ್ಲ ನಿಸರ್ಗದೊಡನೆ ಬೆಸೆದುಕೊಂಡಿವೆ. ಇಂದಿಗೂ ಅರಣ್ಯ, ಹೊಳೆ–ಹಳ್ಳ, ಕಲ್ಲು, ಹುಲಿ, ಭೂಮಾತೆ ಇತ್ಯಾದಿಗಳೇ ಇವರಿಗೆ ದೇವತೆಗಳು. ಸೋಲಿಗರ ಧರ್ಮದಲ್ಲಿ ಮರ ಕಡಿಯುವುದು ಮಹಾಪಾಪ. ಹೀಗಾಗಿ, ಮರಗಳ ಬುಡಕ್ಕೆ ಅವರು ಕೊಡಲಿ ಹಾಕುವುದು ಅಪರೂಪ. ಮರ ಕಡಿಯುವುದು ಅನಿವಾರ್ಯವಾಗಿದ್ದರೆ, ಆ ಮರಕ್ಕೆ ಮೊದಲು ಸಾಂಪ್ರದಾಯಿಕವಾಗಿ ಪೂಜೆ ಸಲ್ಲಿಸುತ್ತಾರೆ. ಕಡಿದ ಮರದ ಬುಡದಲ್ಲಿ ಸಣ್ಣದೊಂದು ಕಲ್ಲು ಇಡುವ ವಾಡಿಕೆ. ಆ ಸ್ಥಳದಲ್ಲಿ ಅಮೂಲ್ಯ ಜೀವವೊಂದು ಇತ್ತು ಎಂಬುದರ ಗುರುತಿಗೆ ಕಲ್ಲು ಇಡುತ್ತಾರೆ. ಸಂಪಿಗೆ, ತಾರೆ, ನೇರಳೆ ಮತ್ತಿ, ಬಾಗೆ, ಮುತ್ತುಗದ ಮರಗಳಿಗೆ

ಪೂಜನೀಯ ಸ್ಥಾನ ನೀಡಿದ್ದಾರೆ. ಆ ಮರಗಳಿಗೆ ಅವರು ಎಂದೆಂದೂ ಕೊಡಲಿ ತಾಗಿಸುವುದಿಲ್ಲ. ಅಂತಹ ಮರಗಳ ಬುಡದಲ್ಲಿಯೇ ದೇವರನ್ನು ಪ್ರತಿಷ್ಠಾಪಿಸುವುದು ಅವರ ಸಂಪ್ರದಾಯ. ಸೋಲಿಗರ ನಂಬಿಕೆ ಹಾಗೂ ಧರ್ಮ ಪ್ರಾಕೃತಿಕ ಸಂಪತ್ತಿನ ರಕ್ಷಣೆಗೆ ಬೆಂಗಾವಲಾಗಿವೆ.

**ರೊಟ್ಟಿ ಹಬ್ಬ :** ವರ್ಷಕ್ಕೆ ಒಂದು ಬಾರಿ ಆಚರಿಸುವ ರೊಟ್ಟಿ ಹಬ್ಬವು ಕುಲದೇವರಿಗಾಗಿ ಆಚರಿಸುವ ಹಬ್ಬವಾಗಿದೆ. ಇವರಲ್ಲಿ ಅನೇಕ ಕುಲಗಳು ಇದ್ದು ಒಂದೊಂದು ಕುಲದವರು ಒಂದೊಂದು ದೇವರನ್ನು ಮನೆ ದೇವರನ್ನಾಗಿ ಪೂಜಿಸುವುದನ್ನು ರೂಢಿಸಿಕೊಂಡು ಬಂದಿದ್ದಾರೆ. ಇವರು ಹಬ್ಬವನ್ನು ಆಚರಿಸುವ ಕುರಿತು ಹಾಡಿಯ ಒಂದೇ ಕುಲಕ್ಕೆ ಸೇರಿದ ಎಲ್ಲ ಕುಟುಂಬಗಳ ಹಿರಿಯರು ಒಂದೆಡೆ ಸೇರಿ ಹಬ್ಬದ ವಿಷಯವಾಗಿ ಚರ್ಚಿಸಿ ಹಬ್ಬಕ್ಕಾಗಿ ಆಹಾರಧಾನ್ಯ ಮತ್ತು ದುಡ್ಡನ್ನು ಸಂಗ್ರಹಿಸುತ್ತಾರೆ. ನಂತರ, ಹಾಡಿಯ ಜನಕ್ಕೆ ಮಾಹಿತಿ ನೀಡಲು ಹಾಡಿಯ ತುಂಬೆಲ್ಲ ಮೆರವಣಿಗೆ ಮಾಡುತ್ತಾರೆ. ಇದು ಸುತ್ತಮುತ್ತಲಿನ ಪ್ರತಿಯೊಂದು ಹಾಡಿಗಳಲ್ಲಿ ಸಾಮಾನ್ಯವಾಗಿ ನಡೆಯುವ ದೃಶ್ಯ. ಇದಾದ ನಂತರ ಹಬ್ಬವನ್ನು ಆಚರಿಸಬೇಕಾದ ದಿನವನ್ನು ನಿಗಧಿಪಡಿಸುತ್ತಾರೆ.

ಹಬ್ಬದ ದಿನ ಹಾಡಿಯ ದೇವಸ್ಥಾನದ ಮುಂದೆ ಬೆಂಕಿ ಕೊಂಡವನ್ನು ಹಾಕುವುದು, ಸಾಯಂಕಾಲ ಮುತ್ತುಗದ ಎಲೆಯ ಮೇಲೆ ರಾಗಿ ಹಿಟ್ಟಿನಿಂದ ರೊಟ್ಟಿಯನ್ನು ತಟ್ಟಿ ಕೊಂಡದ ಬೆಂಕಿಯಲ್ಲಿ ಸುಡುವುದು, ಸಂಜೆ ಕೊಂಡದಲ್ಲಿ ನಡೆದುಕೊಂಡು ದೇವಸ್ಥಾನಕ್ಕೆ ಹೋಗುವುದು ಈ ಹಬ್ಬದ ವಿಶೇಷ. ಇದಾದ ನಂತರ ಎಲ್ಲರೂ ಸೇರಿ ದೇವಸ್ಥಾನದ ಆವರಣದಲ್ಲಿ ಹಬ್ಬಕ್ಕೆಂದೇ ವಿಶೇಷವಾಗಿ ತಯಾರಿಸಿದ ರೊಟ್ಟಿ, ಅನ್ನ, ಕುಂಬಳಕಾಯಿ ಪಲ್ಯ ಮತ್ತು ಕುಂಬಳಕಾಯಿ ಸಾಂಬರ್ ಅನ್ನು ಸೇವಿಸುತ್ತಾರೆ. ಹಬ್ಬದ ದಿನ ದೇವರನ್ನು ಹೊತ್ತ ಪೂಜಾರಿ, ಹಾಡಿಯ ಎಲ್ಲ ಸೋಲಿಗರಿಗೆ ಉತ್ತಮ ಆರೋಗ್ಯ ಕರುಣಿಸಬೇಕೆಂದು ಮತ್ತು ಒಳ್ಳೆ ಮಳೆ ಬೆಳೆ ಕೊಟ್ಟು ಅರಣ್ಯವನ್ನು ಹಾಗೂ ಹೊಲಗದ್ದೆಗಳನ್ನು ಸಂಪತ್ಭರಿತವಾಗಿಸಬೇಕೆಂದು ಪ್ರಾರ್ಥಿಸುತ್ತಾನೆ

ರಾತ್ರಿ ಊಟದ ನಂತರ ಸುಮಾರು 8 ಗಂಟೆಯಿಂದ ಬೆಳಗಿನ ಜಾವ 6 ಗಂಟೆಯವರೆಗೆ ಹಾಡಿಯ ಎಲ್ಲರೂ ದೇವಸ್ಥಾನದ ಮುಂದೆ ಸೇರಿ ಗೊರಕನ ಹಾಡು ಹೇಳಿ ನೃತ್ಯವನ್ನು ಮಾಡುತ್ತಾರೆ. ಇವರ ಹಾಡುಗಳು ದೇವ–ದೇವತೆಗಳು, ನಿಸರ್ಗ, ಹೂವು–ಹಣ್ಣು, ಪ್ರಾಣಿ–ಪಕ್ಷಿ, ಕೀಟಗಳ ಬಗೆಗೆ ಅದರ ವೈವಿಧ್ಯತೆ ಕುರಿತಾಗಿ ಮತ್ತು ರಾಗಿ ಬೆಳೆಯುವ ವಿಧಾನವನ್ನು ತಿಳಿಸುವಂತಾಗಿರುತ್ತದೆ. ಈ ಹಾಡು ಮತ್ತು ನೃತ್ಯಗಳ ಮೂಲಕ ತಮ್ಮ ದೇಶಿ ಜ್ಞಾನವನ್ನು ಮುಂದಿನ ತಲೆಮಾರಿನವರಿಗೆ ತಲುಪಿಸುವುದು ಇದರ ಉದ್ದೇಶ.

**ರಾಗಿ ಹಬ್ಬ :** ಇವರ ಮುಖ್ಯ ಕಸಬು ಕೃಷಿಯಾಗಿದ್ದು, ರಾಗಿಯನ್ನು ಪ್ರಮುಖ ಆಹಾರವನ್ನಾಗಿ ಬೆಳೆಯುತ್ತಿದ್ದಾರೆ. ಅಲ್ಲದೆ 'ರಾಗಿ ಹಬ್ಬವನ್ನು' ಆಚರಿಸಲು ಸ್ವತಃ ಕೃಷಿ ಮಾಡಿ ಧಾನ್ಯಗಳನ್ನು ಬೆಳದೇ ಹಬ್ಬವನ್ನು ಆಚರಿಸುವ ಪದ್ಧತಿಯನ್ನು ರೂಢಿಸಿಕೊಂಡಿರುವುದರಿಂದ ಪ್ರತಿಯೊಂದು ಕುಟುಂಬವು ಕೃಷಿಯಲ್ಲಿ ತೊಡಗಿಸಿಕೊಂಡಿವೆ. ಈ ಹಬ್ಬದಲ್ಲಿ ರಾಗಿ ರೊಟ್ಟಿ ಮತ್ತು ಕುಂಬಳಕಾಯಿ ಪಲ್ಯ ಇವರು ತಯಾರಿಸುವ ವಿಶೇಷ ಭಕ್ಷಗಳು.

**ಹೊಸ ಬೆಳೆ ಹಬ್ಬ : ಯಾವುದೇ** ಹೊಸ ಬೆಳೆ ಬಂದಾಗ ಮೊದಲು ಭೂಮಿ ತಾಯಿ ಪೂಜೆ ಮಾಡಿ ಬೆಳೆಯ ಸ್ವಲ್ಪ ಭಾಗವನ್ನು ಅಕ್ಕಪಕ್ಕದ ಮನೆಯವರಿಗೆ ಹಂಚಿ ತಿನ್ನುವ ಅಭ್ಯಾಸವನ್ನು ಇಟ್ಟುಕೊಂಡಿದ್ದಾರೆ. ಇದನ್ನು ಸೋಲಿಗರು ಹೊಸಬೆಳೆ ಹಬ್ಬವೆಂದು ಆಚರಿಸಿಕೊಂಡು ಬಂದಿದ್ದಾರೆ.

**4.4.4 ಆಹಾರ ಕುರಿತ ನಂಬಿಕೆಗಳು**

ಆಹಾರದಲ್ಲಿ ಕೆಲವೊಂದು ರೀತಿಯ ತಯಾರಿಯ ಪದ್ಧತಿಗಳು ಹಾಗೂ ಬಳಕೆಗಳು ಬುಡಕಟ್ಟು ಸಮುದಾಯದಲ್ಲಿ ಉಳಿದುಕೊಂಡು ಬಂದಿವೆ. ಅದಕ್ಕೆ ಪ್ರಮುಖ ಕಾರಣಗಳು ಆಹಾರವನ್ನು ಕುರಿತಂತೆ ಅವರಲ್ಲಿರುವ ನಂಬಿಕೆಗಳು. ಈ ನಂಬಿಕೆಗಳು ಅವರ ಅನುಭವದಿಂದ ಅಲ್ಲದೆ, ಕೆಲವೊಂದು ಅವರಲ್ಲಿ ವಿವರಿಸಲಾಗದ ಕಾರಣಗಳಿಂದಲೂ ಹುಟ್ಟಿರುವ ಸಾಧ್ಯತೆಗಳಿವೆ.

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿ ಕಂಡುಬರುವ ಆಹಾರ ಕುರಿತ ನಂಬಿಕೆಗಳ ಮಾಹಿತಿಯನ್ನು ಕೋಷ್ಟಕ 4.16 ರಲ್ಲಿ ನೀಡಿದೆ. ಮೊಸರು, ಮಜ್ಜಿಗೆ, ಸವತೆಕಾಯಿ, ಬಾಳೆಹಣ್ಣು ಮುಂತಾದವುಗಳು ತಂಪು ಪದಾರ್ಥಗಳೆಂದು ನಂಬಿರುವ ಸೋಲಿಗ ಮತ್ತು ಜೇನುಕುರುಬರು ಮಕ್ಕಳಿಗೆ ಇಂತಹ ಆಹಾರಗಳನ್ನು ಸೇವಿಸಲು ಕೊಡುವುದಿಲ್ಲ. ಇವು ಮಕ್ಕಳಲ್ಲಿ ನೆಗಡಿ, ಕೆಮ್ಮು ಉಂಟುಮಾಡುತ್ತವೆಂದು ನಂಬಿದ್ದಾರೆ. ಮಾಂಸಾಹಾರ ಅಜೀರ್ಣ ಉಂಟುಮಾಡುತ್ತದೆಂದು ತಿಳಿದು ಮಾಂಸಾಹಾರವನ್ನು ಮಕ್ಕಳಿಗೆ ಸೇವಿಸಲು ಕೊಡುವುದಿಲ್ಲ.

ಗರ್ಭಿಣಿ ಸ್ತ್ರೀ ಪಪ್ಪಾಯ ಸೇವಿಸಿದರೆ ಗರ್ಭಪಾತವಾಗುವ ಸಂಭವವಿರುತ್ತದೆಂದು ನಂಬಿದ ಇವರು ಗರ್ಭಿಣಿಯರಿಗೆ ಪಪ್ಪಾಯ ಸೇವಿಸಲು ಕೊಡುವುದಿಲ್ಲ. ಅಲ್ಲದೆ, ಮೆಣಸು, ಶುಂಠಿ ಮತ್ತು ಕೊಬ್ಬರಿ ಹೊಟ್ಟೆಯ ಆಮ್ಲತೆಗೆ ಕಾರಣವೆಂದು ಇಂತಹ ಆಹಾರಗಳನ್ನು ಸಹ ಗರ್ಭಿಣಿಯರಿಗೆ ಸೇವಿಸಲು ಕೊಡುವುದಿಲ್ಲ. ಇದೇ ರೀತಿಯ ನಂಬಿಕೆಗಳು ಕೊಂಡ, ಗಡಬ ಮತ್ತು ಪೋರ್ಜ ಬುಡಕಟ್ಟುಗಳಲ್ಲಿ ಕಾಣಬಹುದು. ಇವರು ಬದನೆಕಾಯಿ, ಯಾಮ್, ಮೊಟ್ಟೆಯನ್ನು ಗರ್ಭಿಣಿಯರು ಸೇವಿಸುವುದರಿಂದ ಚರ್ಮವ್ಯಾಧಿಗೆ ಕಾರಣವಾಗುತ್ತದೆಂದು ತಿಳಿದು ಇಂತಹ ಆಹಾರಗಳನ್ನು ಸೇವಿಸಲು ಕೊಡುವುದಿಲ್ಲ.

ಬಾಣಂತಿಯರು ತಂಪು ಆಹಾರ ಮತ್ತು ಅಧಿಕ ಮಸಾಲೆಯುಕ್ತ ಆಹಾರ ಪದಾರ್ಥಗಳನ್ನು ಸೇವಿಸುವುದರಿಂದ ಮಗುವಿನ ಆರೋಗ್ಯದ ಮೇಲೆ ವ್ಯತಿರಿಕ್ತ ಪರಿಣಾಮ ಬೀರುತ್ತದೆಂದು ತಿಳಿದು ಇಂತಹ ಆಹಾರಗಳನ್ನು ಸೋಲಿಗರು ಬಾಣಂತಿಯರಿಗೆ ಸೇವಿಸಲು ಕೊಡುವುದಿಲ್ಲ. ಇಂತಹ ಆಹಾರಗಳನ್ನು ಬಾಣಂತಿ ಸೇವಿಸುವುದರಿಂದ ಮಗುವಿಗೆ ವಾಂತಿ ಬೇಧಿ ಉಂಟಾಗುತ್ತದೆಂದು ಇವರು ನಂಬಿದ್ದಾರೆ. ಅಲ್ಲದೆ, ಅಸಮರ್ಪಕ ಹಾಲಿನ ಉತ್ಪಾದನೆಗೆ ಕಾರಣವಾಗುತ್ತದೆ ಎಂಬ ನಂಬಿಕೆ ಇವರಲ್ಲಿದೆ.

**ಕೋಷ್ಟಕ 4.16 ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯದಲ್ಲಿ ಆಹಾರ ಕುರಿತ ನಂಬಿಕೆಗಳು**

| ಕ್ರ. ಸಂ. | | ಆಹಾರ ಮತ್ತು ಪಾನೀಯ | ಕಾರಣ |
|---|---|---|---|
| 1 | ಮಕ್ಕಳು | ತಂಪಾದ ನೀರು, ಮೊಸರು, ಹಣ್ಣಿನ ರಸ, ಮಾಂಸ | ನೆಗಡಿ, ವಾಂತಿ |
| 2 | ಬಾಣಂತಿಯರು | ಹಸಿಮೆಣಸಿನಕಾಯಿ | ಬೇಧಿ |
| | | ಸವತೆಕಾಯಿ, ಬಾಳೆಹಣ್ಣು ಮತ್ತು ತಂಪಾದ ಆಹಾರ, ಕಿತ್ತಳೆ | ನೆಗಡಿ |
| | | ಹುಣಸೆ ಹಣ್ಣು | ಸೆಪ್ಟಿಕ್/ನಂಜು |
| | | ಕಡಲೆಬೀಜ | ಆಮ್ಲತೆ |
| 3 | ಗರ್ಭಿಣಿ | ಪಪ್ಪಾಯ, ಕುಂಬಳಕಾಯಿ, ಮೀನು, ಶುಂಠಿ, ಮೆಣಸು, ಒಣ ಮೀನು | ಗರ್ಭಪಾತ, ಹೆಚ್ಚಿದ ರಕ್ತದೊತ್ತಡ, ವಾತ, ಉಷ್ಣ ಆಹಾರ |
| 4 | ಅನಾರೋಗ್ಯದಿಂದ ಬಳಲುವವರಿಗೆ | ಮಸಾಲೆ ಪದಾರ್ಥ | ಅಜೀರ್ಣ |
| | | ಮಜ್ಜಿಗೆ/ಮೊಸರು | ತಂಪು |
| | | ಎಣ್ಣೆ/ತುಪ್ಪ | ಅಜೀರ್ಣ |
| | | ಬಾಳೆಹಣ್ಣು | ತಂಪು |
| | | ಬದನೆಕಾಯಿ | ವಾತ |

### 4.4.5 ಪಾರಂಪರಿಕ ಆಹಾರ ಕ್ರಮಗಳು ಮತ್ತು ಆರೋಗ್ಯ

ಪಾರಂಪರಿಕ ಜ್ಞಾನದ ಬಹು ವ್ಯಾಪ್ತಿಯಾದ ಪರಂಪರೆ ಆರೋಗ್ಯ ಮತ್ತು ಆಹಾರ ಕ್ರಮಗಳದ್ದು. ಆರೋಗ್ಯವಂತರಾಗಿರುವಂತೆ ಉತ್ತಮ ವೈವಿಧ್ಯದ ಆಹಾರಗಳು ಸಾಂಸ್ಕೃತಿಕವಾಗಿ ವಿಕಾಸಗೊಂಡು ಬಳಕೆಯಲ್ಲಿದ್ದುದಕ್ಕೆ ಸಾಕ್ಷಿಗಳಿವೆ. ಇವು ಒಂದು ಸಂಸ್ಕೃತಿ ನಡೆಸಿಕೊಂಡ ಪರಂಪರೆಯು ಒಂದು ಹಬ್ಬವಾಗಿಯೂ, ಒಂದು ಆಚರಣೆಯಾಗಿಯೋ ಉಳಿದು ಬಂದಿರುವುದರಲ್ಲಿ ಕಾಣಬಹುದು. ಆರೋಗ್ಯ ಜ್ಞಾನದಲ್ಲಿ ಪಾರಂಪರಿಕ ಜ್ಞಾನದ ಪಾತ್ರ ತುಂಬಾ ಹಿರಿದು. ಹಾಗೆಯೇ ಆಹಾರವನ್ನೂ ಆರೋಗ್ಯದಲ್ಲಿ ಸಮೀಕರಿಸುವ ವ್ಯಾಪ್ತಿಯೂ ಇಲ್ಲಿ ಸೇರಿದೆ. ಇಡೀ ಔಷಧ ಪರಂಪರೆಗೆ ಭದ್ರ ಬುನಾದಿ ಒದಗಿಸಿದ ಔಷಧೀಯ ಸಸ್ಯಗಳ ಜ್ಞಾನ ಭಂಡಾರವೇ ಬಲುದೊಡ್ಡ ಸಾಂಸ್ಕೃತಿಕ

ಆಸ್ತಿಯೂ ಹೌದು. ಗಿಡ ಮೂಲಿಕೆಗಳು, ಮನೆ ಮದ್ದು, ಮಾಟ–ಮಂತ್ರ–ತಂತ್ರದಂತಹ ಮನೋವೈಜ್ಞಾನಿಕ ನಿಲುವುಳ್ಳ ಬಗೆಗಳೂ ಇಲ್ಲಿವೆ. ಹಾಡಿಗೊಬ್ಬರಂತೆ ನಾಟಿ ವೈದ್ಯರು ಇಂದಿಗೂ ಕಾಣಬರುತ್ತಾರೆ.

ಆರೋಗ್ಯದ ಗ್ರಹಿಕೆಯು ಪರಂಪರೆಗಳಲ್ಲಿ, ಸಾಂಸ್ಕೃತಿಕ ವಿಕಾಸದಲ್ಲಿ ಮುಖ್ಯ ಜ್ಞಾನಶಿಸ್ತಿಗಿಂತಲೂ ಭಿನ್ನವಾಗಿ ಬೆಳೆದಿದೆ. ಇಲ್ಲಿ ಇದೊಂದು ಸಮಗ್ರ ಸುಖದ ತಳಹದಿಯ ಮೇಲೆ ಹುಟ್ಟಿದ್ದು, ಒಂದೇ ಗುರುತರ ಸಮಸ್ಯೆಯನ್ನು ಎದುರಿಸುವ ಮೇಲಲ್ಲ. ಹಾಗಾಗಿ ಆರೋಗ್ಯವಂತ ಜೀವನಕ್ಕೆ ಪರಿಪೂರ್ಣ ಜೀವನ ಶೈಲಿಯಲ್ಲಿ ವ್ಯಾಪಕತೆಯನ್ನು ಕಂಡಿದೆ. ಇದು ಊಟ, ನಿದ್ರೆ, ವ್ಯಾಯಾಮ, ಕಲಿಕೆ, ಬದುಕು ಎಲ್ಲವನ್ನು ಅರ್ಥವತ್ತಾಗಿ ಸಂಬಂಧವಿರಿಸಲು ಪ್ರಯತ್ನಿಸಿದೆ.

**ಬುಡಕಟ್ಟುಗಳಲ್ಲಿ ಔಷಧೀಯ ಸಸ್ಯಗಳ ಪ್ರಾಮುಖ್ಯತೆ :** ಬಿಳಿಗಿರಿರಂಗನ ಬೆಟ್ಟದಲ್ಲಿ ಸುಮಾರು 300 ಪ್ರಭೇದಗಳ ವಿವಿಧ ಔಷಧಿ ಸಸ್ಯಗಳಿವೆ ಎಂದು ಗುರುತಿಸಲಾಗಿದೆ. ಇವುಗಳಲ್ಲಿ ಸುಮಾರು 60 ಬಗೆಯ ಪ್ರಭೇದಗಳನ್ನು ವಿವಿಧ ಕಾಯಿಲೆಗಳನ್ನು ನಿವಾರಿಸಲು ಸೋಲಿಗರು ಬಳಸುತ್ತಿರುವುದಾಗಿ ಈ ಅಧ್ಯಯನದಿಂದ ತಿಳಿದುಬಂದಿದೆ. ಇವರು ಇಂಗ್ಲೀಶ್ ಔಷಧಿಗಿಂತ ಹರ್ಬಲ್ ಔಷಧಿಗೆ ಹೆಚ್ಚು ಒಲವು ಉಳ್ಳವರಾಗಿದ್ದಾರೆ.

ಅರಣ್ಯದೊಳಗೆ ವಾಸಿಸುವ ಬುಡಕಟ್ಟುಗಳು ಅರಣ್ಯದಲ್ಲಿ ದೊರಕುವ ಹಲವು ಬಗೆಯ ಔಷಧೀಯ ಸಸ್ಯಗಳ ಅರಿವನ್ನು ಉಳ್ಳವರಾಗಿದ್ದಾರೆ. ಇವರಲ್ಲಿ ಸಾಂಪ್ರದಾಯಿಕ ಪದ್ಧತಿಯಲ್ಲಿ ಔಷಧಿ ಕೊಡುವ ವೈದ್ಯರಿದ್ದಾರೆ. ಬಿಳಿಗಿರಿರಂಗನ ಬೆಟ್ಟ ಪ್ರದೇಶದಲ್ಲಿ ಸುಮಾರು 34 ವಿವಿಧ ಬಗೆಯ ಗಿಡ ಮೂಲಿಕೆಗಳು ಮತ್ತು ಸಸ್ಯಗಳನ್ನು ಸಾಮಾನ್ಯವಾಗಿ ಕಂಡುಬರುವ ಕಾಯಿಲೆಗಳಿಗೆ ಔಷಧಿ ತಯಾರಿಸಲು ಬಳಸುತ್ತಿದ್ದಾರೆ. ಇವುಗಳಲ್ಲಿ 6 ವಿವಿಧ ಬಗೆಯ ಗಿಡಮೂಲಿಕೆಗಳನ್ನು ಸ್ತ್ರೀ ರೋಗ ನಿವಾರಿಸಲು ಅಂದರೆ ಮಹಿಳೆಯರಲ್ಲಿ ಸಾಮಾನ್ಯವಾಗಿ ಕಂಡುಬರುವ ರಕ್ತಹೀನತೆ, ನ್ಯೂನ್ಯಪೋಷಣೆ, ತಲೆನೋವು, ಹೊಟ್ಟೆನೋವು ಅಥವಾ ಹೊಟ್ಟೆಗೆ ಸಂಬಂಧಿಸಿದ ತೊಂದರೆಗಳು, ಚರ್ಮವ್ಯಾಧಿ, ಗಂಟಲು ನೋವು ಮುಂತಾದವುಗಳು. ಈ ರೀತಿಯ ತೊಂದರೆಗಳು ಕಾಣಿಸಿಕೊಂಡರೆ, ಔಷಧಿಸಸ್ಯಗಳ ಕುರಿತು ಜ್ಞಾನವುಳ್ಳ ಹಾಡಿಯ ಹಿರಿಯರು ಔಷಧಿ ತಯಾರಿಸಿ ಕೊಡುತ್ತಾರೆ. ತೀವ್ರತರವಾದ ಆರೋಗ್ಯ ಸಮಸ್ಯೆ, ಅಪಘಾತ ಅಥವಾ ಹಾವು ಚೇಳುಗಳಂತಹ ವಿಷಜಂತುಗಳು ಅಥವಾ ಪ್ರಾಣಿಗಳು ಕಚ್ಚಿದರೆ ಇಂಗ್ಲೀಶ್ ಔಷಧಿಗೆ ಮೊರೆಹೋಗುತ್ತಾರೆ.

**ಬುಡಕಟ್ಟು ಮಹಿಳೆಯರಲ್ಲಿ ಸಾಮಾನ್ಯವಾಗಿ ಕಂಡುಬರುವ ಆರೋಗ್ಯ ಸಮಸ್ಯೆಗಳು :** ಬೆನ್ನು ನೋವು, ತಲೆನೋವು, ಕೈಕಾಲುನೋವು, ಹೊಟ್ಟನೋವು ಮುಂತಾದವುಗಳು ಸೋಲಿಗ ಮತ್ತು ಜೇನುಕುರುಬ ಮಹಿಳೆಯರು ಅನುಭವಿಸುತ್ತಿರುವ ಆರೋಗ್ಯ ಸಮಸ್ಯೆಗಳಾಗಿವೆ. ಇವರಲ್ಲಿ ಮಹಿಳೆಯರು ಸಾಮಾನ್ಯವಾಗಿ 8–9 ಗಂಟೆ ಶ್ರಮದಾಯಕ ದುಡಿಮೆಯಲ್ಲಿ ತೊಡಗುವುದು ಜತೆಗೆ ಮನೆಕೆಲಸ ಒಟ್ಟಾರೆಯಾಗಿ ಅತಿಯಾದ ಭೌತಿಕ ಕೆಲಸದ ಒತ್ತಡದಿಂದ ಜತೆಗೆ ಅಸಮರ್ಪಕ ಆಹಾರ ಸೇವನೆ ಈ ತೊಂದರೆಗಳಿಗೆ ಕಾರಣವೆನ್ನಬಹುದು.

ಸತತವಾಗಿ ಅಸಮರ್ಪಕ ಮತ್ತು ಅಸಮತೋಲನ ಆಹಾರ ಸೇವನೆ ಪರಿಣಾಮ ಇವರಲ್ಲಿ ಅನೇಕ ಮಹಿಳೆಯರು ಪೌಷ್ಟಿಕ ಆಹಾರದ ಕೊರತೆಯ ಲಕ್ಷಣಗಳಿಂದ ಬಳಲುವುದು ಸಾಮಾನ್ಯವಾಗಿದೆ. ಇವರಲ್ಲಿ ಕಂಡುಬರುವ ಅಪೌಷ್ಟಿಕತೆಯ ಲಕ್ಷಣಗಳೆಂದರೆ, ಕಣ್ಣಿನ ಕೆಳರೆಪ್ಪೆ ಬಿಳಿಚಿಕೊಂಡಿರುವುದು, ಹೊಳಪು ಕಳೆದುಕೊಂಡ ಕೂದಲು, ಆಗಾಗ ವಸಡುಗಳಲ್ಲಿ ರಕ್ತಸ್ರಾವ ಒಣ ಮತ್ತು ಒರಟಾದ ಚರ್ಮ. ಇದಕ್ಕೆ ಇವರು ಸೇವಿಸುವ ಆಹಾರದಲ್ಲಿ ಕೊಬ್ಬಿಣಾಂಶ ಮತ್ತು ಬಿ ಸಮೂಹದ ಜೀವಸತ್ವಗಳ ಕೊರತೆ ಕಾರಣವಾಗಿರಬಹುದೆಂದು ಅಂದಾಜಿಸಲಾಗಿದೆ.

**ಕೋಷ್ಟಕ 4.17 ಸೋಲಿಗ ಮತ್ತು ಜೇನುಕುರುಬ ಮಹಿಳೆಯರು ಎದುರಿಸುತ್ತಿರುವ ಸಾಮಾನ್ಯ ಆರೋಗ್ಯ ಸಮಸ್ಯೆಗಳು**

| ಕ್ರ ಸಂ | ಆರೋಗ್ಯ ತೊಂದರೆಗಳು | ಸೋಲಿಗ ಬುಡಕಟ್ಟು | | ಜೇನುಕುರುಬ ಬುಡಕಟ್ಟು | |
|---|---|---|---|---|---|
| | | N=90 | ಪ್ರತಿಶತ | N=90 | ಪ್ರತಿಶತ |
| 1 | ಬೆನ್ನುನೋವು | 26 | 23.40 | 28 | 25.50 |
| 2 | ಅಶಕ್ತಿ | 25 | 22.50 | 23 | 20.70 |
| 3 | ಕೈ ಕಾಲುನೋವು | 24 | 21.60 | 25 | 22.50 |
| 4 | ತಲೆನೋವು | 20 | 18.00 | 15 | 16.20 |
| 5 | ಕೆಮ್ಮು | 17 | 15.30 | 16 | 14.40 |
| 6 | ನೆಗಡಿ | 15 | 13.50 | 16 | 14.40 |
| 7 | ಹೊಟ್ಟೆಆಮ್ಲತೆ | 14 | 12.60 | 12 | 10.80 |
| 8 | ಹೊಟ್ಟೆನೋವು | 14 | 12.60 | 15 | 13.50 |
| 9 | ಜ್ವರ | 13 | 11.70 | 8 | 07.20 |
| 10 | ಹಲ್ಲುನೋವು | 4 | 03.60 | 7 | 06.30 |

**ಅನಾರೋಗ್ಯ ಸಂದರ್ಭದಲ್ಲಿ ವಿಶೇಷ ಆಹಾರಗಳು** : ಅರಣ್ಯ ಮತ್ತು ಅರಣ್ಯ ತಪ್ಪಲಿನಲ್ಲಿ ವಾಸಿಸುವ ಸೋಲಿಗ ಮತ್ತು ಜೇನುಕುರುಬರು ತಮ್ಮ ಮಕ್ಕಳಲ್ಲಿ ಸಾಮಾನ್ಯವಾಗಿ ಕಂಡುಬರುವ ಕಾಯಿಲೆಗಳಿಗೆ ಅರಣ್ಯದಲ್ಲಿ ದೊರಕುವ ವಿವಿಧ ಬಗೆಯ ಆಹಾರಗಳಿಂದ ಉಪಚರಿಸುವುದನ್ನು ಅರಿತುಕೊಂಡು ಅದನ್ನೇ ಅನುಸರಿಸುತ್ತ ಬಂದಿದ್ದಾರೆ. ಇವರ ಮಕ್ಕಳು ಜ್ವರ, ವಾಂತಿ ಬೇಧಿ ಮತ್ತು ಶ್ವಾಸಕೋಶದ ತೊಂದರೆಯಿಂದ ಬಳಲುವಾಗ ಬಳಸುವ ಆಹಾರದ ಮಾಹಿತಿಯನ್ನು ಕೋಷ್ಟಕ 4.18ರಲ್ಲಿ ನೀಡಲಾಗಿದೆ.

**ಕೋಷ್ಟಕ 4.18 ಅನಾರೋಗ್ಯ ಸಂದರ್ಭದಲ್ಲಿ ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಕೊಡುವ ವಿಶೇಷ ಆಹಾರಗಳು**

| ಸಂದರ್ಭ | ವಿಶೇಷವಾಗಿ ಬಳಸುವ ಆಹಾರಗಳು |
|---|---|
| ಜ್ವರ | ಹೊಂಗೆಸೊಪ್ಪಿಗೆ ಬೆಳ್ಳುಳ್ಳಿ ಬೆರಸಿ ಕಷಾಯ ತಯಾರಿಸಿ ಹೊಟ್ಟಗೆ ಸವರುವುದು |
| ವಾಂತಿ ಬೇಧಿ | ಅಳಲೆಕಾಯಿ ಅಥವಾ ನವಿಲುಗರಿಯನ್ನು ಸುಟ್ಟು ಹಾಲು ಅಥವಾ ಜೇನುತುಪ್ಪಕ್ಕೆ ಬೆರಸಿ ಹೊಯ್ಯುವುದು |
| ಶ್ವಾಸಕೋಶ ತೊಂದರೆ | ಅಳಲೆಕಾಯಿ, ಜೇನುತುಪ್ಪ |

## 4.5 ಆಹಾರ ಭದ್ರತೆಯ ವೈವಿಧ್ಯಮಯ ದೃಷ್ಟಿಕೋನ

ಮಾನವರ ನಾಗರಿಕತೆಯ ಇತಿಹಾಸವೇ ಆಹಾರ ಭದ್ರತೆಯ ಬೆಳವಣಿಗೆಯ ವಿವಿಧ ಆಯಾಮಗಳನ್ನೊಳಗೊಂಡಿದ್ದು, ಅದರ ಸುಸ್ಥಿರತೆಯ ಕಡೆಗೆ ನಿಲುವು ಉಳ್ಳದ್ದಾಗಿರುತ್ತದೆ. ಮನುಷ್ಯನನ್ನು ಮತ್ತು ಸಾಕು ಪ್ರಾಣಿಗಳನ್ನು ಹೊರತುಪಡಿಸಿದರೆ, ಬಹುಷಃ ಎಲ್ಲ ಜೀವಿಗಳು ಕೇವಲ ಆಹಾರ ಹೊಂಚುವ ಕೆಲಸವನ್ನಷ್ಟೇ ಮಡುತ್ತವೆ. ಅಂದರೆ, ಪ್ರತೀ ಜೀವಿಯ ಅತ್ಯಂತ ಪ್ರಮುಖ ಚಟುವಟಿಕೆ ಎಂದರೆ, ಆಹಾರದ ಹುಡುಕಾಟ. ಜೀವಿಗಳ ಸಾಮಾಜಿಕತೆಯ ವಿಕಾಸಗೊಳ್ಳುವ ಮೂಲಕ ಸಮುದಾಯದ ರಚನೆ, ಆಹಾರದ ಉತ್ಪಾದನೆ, ಸಂಗ್ರಹ, ಹಂಚಿಕೆ, ನೀಡಿಕೆ ಇತ್ಯಾದಿಗಳು ಸಾಧ್ಯವಾಗಿವೆ. ಇಡೀ ಭೂಮಿಯ ಇತಿಹಾಸದಲ್ಲಿ ಜೈವಿಕ ಕಾಲಘಟ್ಟ ಇತ್ತೀಚಿಗಿನದು. ಅದರ ಪೂರ್ವದ ಅಜೈವಿಕ ಇತಿಹಾಸವು ರಾಸಾಯನಿಕ ಚಟುವಟಿಕೆಗಳನ್ನೊಳಗೊಂಡು ಜೈವಿಕತೆಗೆ ಪೂರಕವಾದ ಪರಿಸರ ನಿರ್ಮಿಸುವಲ್ಲಿ ಸಹಾಯಕವಾಗಿದೆ. ನಂತರದ ಕಾಲದ ಜೀವಿ ವಿಕಾಸದ ವಿವಿಧ ಸ್ತರಗಳು ಆಯಾ ಸಂದರ್ಭೋಚಿತವಾದ ಆಹಾರ ನೆಲೆಗಳನ್ನು ಒದಗಿಸಿದೆ. ನಿಸರ್ಗವು ಅನೇಕ ಏರುಪೇರುಗಳನ್ನು ಕಂಡು ಸಂಕೀರ್ಣತೆ-ಸರಳತೆಗಳ ದ್ವಂದ್ವಗಳಲ್ಲಿ ನೆಲೆಯನ್ನರಸುತ್ತಾ ಬೆಳೆದಿದೆ. ಈ ಬೆಳವಣಿಗೆಯನ್ನು ಅಥವಾ ಚಲನಶೀಲತೆಯನ್ನು ನಮ್ಮ ಗ್ರಹಿಕೆಗಳ ಮೂಲಕ ಸುಸ್ಥಿರತೆಯ ಹುಡುಕಾಟವೆಂದು ಅಂದುಕೊಂಡಿದ್ದೇವೆ. ಆದರೆ, ಸುಸ್ಥಿರತೆಯ ವಿಚಾರದಲ್ಲಿ ನಿಸರ್ಗದ ನಿಲುವು ಏನು ಎನ್ನುವುದು ಬಹು ಸಂಕೀರ್ಣವಾದ ವಿಚಾರ. ಅದರ ಪ್ರಮೇಯವೇನಿದ್ದರೂ ಕಾಲದ ಆಯಾಮದಲ್ಲಿ ವಸ್ತು ಬದಲಾವಣೆಯ ತರ್ಕವಷ್ಟೆ.

ಹೀಗೆ ಆಯಾ ಸ್ತರಗಳಲ್ಲಿ ಆಹಾರ ಭದ್ರತೆಯನ್ನು ವಿಶ್ಲೇಷಿಸುವಾಗ ಅದೇ ಕಾಲಘಟ್ಟದ ವಿಚಾರಗಳು ಮುಖಾಮುಖಿಯಾಗುತ್ತವೆ. ಆದರೆ, ಕಾಲದ ಆಯಾಮದೊಂದಿಗೆ ಭಿನ್ನವಾದ ಆಶಯ ಉಳ್ಳದ್ದವಾಗಿರುತ್ತವೆ. ಈ ವೈವಿಧ್ಯಮಯ ಕಾಲದ, ಪರಿಸರದ ಸನ್ನಿವೇಶಗಳ ಹಿನ್ನೆಲೆಯಿಂದ ವಿವಿಧ ದೃಷ್ಟಿಕೋನಗಳನ್ನು ಗಮನಿಸಲು ಸಾಧ್ಯವಾಗಿದೆ. ಇವು ಈ ವಿಚಾರಗಳಲ್ಲಿ ಒಂದು ಬಗೆಯ ಸಂಹಿತೆಯನ್ನು ನಿರೂಪಿಸುವ ಸಾಧ್ಯತೆಯನ್ನು ಅಥವಾ ಸಂಹಿತೆಯ ಬೆಳವಣಿಗೆಯ ಆಶಯ

ಇಲ್ಲಿಯದು. ಹಾಗೆಂದೇ ಆಹಾರ ಭದ್ರತೆಯನ್ನು ಮೂಲವಾಗಿ ನಿಸರ್ಗ ದೃಷ್ಟಿಯಿಂದ, ಸಮುದಾಯಗಳು ಹುಟ್ಟಿದಂತೆ ಪರಂಪರೆ ದೃಷ್ಟಿಯಿಂದ, ಆಧುನಿಕತೆಯೇ ಅಭಿವೃದ್ಧಿ ಎನ್ನುವಲ್ಲಿ ಲೋಕದೃಷ್ಟಿಯಿಂದ ಅರಿಯಲು ಪ್ರಯತ್ನಿಸಿದೆ.

### 4.5.1 ಆಹಾರ ಭದ್ರತೆಯ ನಿಸರ್ಗ ದೃಷ್ಟಿ

ನಿಸರ್ಗಕ್ಕೆ ಆಹಾರ ಭದ್ರತೆ ಎನ್ನುವುದು, ಅದರ ಆಗಾಧ ಸಂಕೀರ್ಣ ಚಟುವಟಿಕೆಗಳಲ್ಲಿ ಒಂದು. ಬಹುಷಃ ನಿಸರ್ಗದ ಅತ್ಯಂತ ಪ್ರಮುಖ ಕ್ರಿಯೆಯಾದ ವಸ್ತುವಿನ ಸ್ಥಿತಿ ಬದಲಾವಣೆಯ (Transformation of matter) ನಿರಂತರತೆಯಲ್ಲಿ ಕಾಣಬರುವಂತಹದು. ಆಹಾರ ಭದ್ರತೆಯೂ ಒಂದು ಸರಪಳಿಯಂತೆ-ಒಂದೊಂದು ಕೊಂಡಿಯೂ ಬೇರೆ, ಬೇರೆ ಜೀವಿಯ ಭದ್ರತೆಯ ಜವಾಬ್ದಾರಿಯನ್ನು ಹೊಂದಿರುವುದು. ಇವನ್ನೆಲ್ಲಾ ಕ್ರೋಢಿಕರಿಸಿ ವಿವರಿಸುವಲ್ಲಿ ಜೈವಿಕ ಮತ್ತು ಅಜೈವಿಕ ವಸ್ತುಗಳ ನಡುವೆಯ ಸಮೀಕರಣವು ಮುಖ್ಯವಾಗುತ್ತದೆ.

ಆಹಾರ ಭದ್ರತೆಯನ್ನು ಇಡೀ ನಿಸರ್ಗದ ಚಟುವಟಿಕೆಯಾಗಿ ನೋಡದೆ, ಆಯಾ ಜೀವಿ ಪ್ರಭೇದದ ಹಿನ್ನೆಲೆಯಿಂದ ಸಾಮಾನ್ಯವಾಗಿ ನೋಡಲಾಗುವುದು. ಹಾಗಾಗಿ ಆಹಾರ ಭದ್ರತೆಯ ಒಟ್ಟಾರೆ, ನಿಸರ್ಗದೃಷ್ಟಿಯ ಅನೇಕ ಸಂಕೀರ್ಣ ಚಟುವಟಿಕೆಗಳ ಜಾಲವನ್ನು ಒಳಗೊಂಡ ಕ್ರಿಯೆ. ಆಹಾರ ಭದ್ರತೆಯು ಜೈವಿಕ ಹಿನ್ನೆಲೆಯದ್ದಾದ್ದರಿಂದ ಅದು ಜೈವಿಕ ದ್ರವ್ಯರಾಶಿಯನ್ನು ಹಾಗೂ ಅದರ ವೈವಿಧ್ಯಮಯ ಮಾರ್ಪಾಡುಗಳನ್ನು ಒಳಗೊಂಡಿರುತ್ತದೆ. ಈ ಜೀವರಾಶಿಯ ಅತ್ಯಂತ ಮುಖ್ಯವಾದ ಅವಶ್ಯಕತೆಗಳನ್ನು ಒದಗಿಸುವಲ್ಲಿ ಅಜೈವಿಕ ದ್ರವ್ಯರಾಶಿಯು ಪ್ರಮುಖ ಪಾತ್ರವಹಿಸುವುದು. ಪ್ರಾಥಮಿಕ ಉತ್ಪಾದಕರು(Primery producers) ಅಥವಾ ಮೂಲ ಉತ್ಪಾದಕರು ಇಲ್ಲಿ ಮುಖ್ಯ ಪಾತ್ರವಹಿಸುತ್ತವೆ. ಉದಾಹರಣೆಗೆ ಸಸ್ಯಗಳು ನೆಲದಿಂದ ನೇರವಾಗಿ ಖನಿಜ ಲವಣಗಳನ್ನು ಹೀರಿ ಜೈವಿಕ ವಸ್ತುಗಳನ್ನು ಉತ್ಪಾದಿಸುವಲ್ಲಿ ನಿರತವಾಗಿರುತ್ತವೆ. ಇದು ಸಸ್ಯಾಹಾರಿಗಳಿಗೆ ಮೂಲ ದ್ರವ್ಯವನ್ನು ಒದಗಿಸುತ್ತವೆ. ಸಸ್ಯಾಹಾರಿಗಳು ಮಂಸಾಹಾರಿಗಳಿಗೆ ನಂತರ ಅವು ನಂತರದ ಜಾಲಕ್ಕೆ ನಿರಂತರವಾಗಿ ಆಹಾರ ಒದಗಿಸುವ ಜವಾಬ್ದಾರಿಯನ್ನು ನಿರ್ವಹಿಸುತ್ತವೆ. ಇಡೀ ಆಹಾರ ಭದ್ರತೆಯ ನಿಸರ್ಗ ದೃಷ್ಟಿಯು ಎಲ್ಲ ಜೀವಚರಗಳ ಆಹಾರ ವ್ಯವಸ್ಥೆಯ ಸಮಾನ ಗ್ರಹಿಕೆಯ ಹಿನ್ನೆಲೆಯಿಂದ ಚಾಲನೆಯಲ್ಲಿರುತ್ತದೆ. ಹಾಗಾಗಿ ಅವು ಒಂದನ್ನೊಂದು ಸದಾ ಅವಲಂಬಿತವಾಗಿಯೇ ನಿರತವಾಗಿರುತ್ತವೆ.

ಸಾಮಾನ್ಯವಾಗಿ ಭೂ-ಮಂಡಲದ ಜೀವಜಗತ್ತಿನ ಆಹಾರ ಚಕ್ರವು ಒಂದನ್ನೊಂದು ತಿನ್ನುವ ಮೂಲಕವೇ ನಡೆಯುತ್ತಿರುತ್ತವೆ. ಕೆಲವು ಜೀವಿಗಳು ತಮ್ಮ ಆಹಾರವನ್ನು ತಾವೇ ತಯಾರಿಸುವ ಮೂಲಕ ಸ್ವತಂತ್ರ್ಯವಾಗಿದ್ದು, ತಯಾರಿಕೆಗೆ ಅಗತ್ಯವಾದ ವಸ್ತುಗಳನ್ನು ಅಜೈವಿಕ ಮೂಲಗಳಿಂದ ಪಡೆಯುತ್ತಿರುತ್ತವೆ. ಇವುಗಳ ಜತೆಗೆ ವಸ್ತುಗಳ ಪೂರೈಕೆಯು ಸಾವಯವ ವಸ್ತುಗಳ ಶಿಥಲೀಕರಣ ಕ್ರಿಯೆಯ ಮೂಲಕವೂ ಸಾಧ್ಯವಾಗುತ್ತದೆ. ಯಾವುದೇ ಜೀವಿಯು ತನ್ನ ಜೀವನ ಅಂತ್ಯದಲ್ಲಿ ಹಾಗೂ ತನ್ನ ಚಟುವಟಿಕೆಗಳಿಂದ ವಿಸರ್ಜಿಸಿದ ವಸ್ತುಗಳ ಮೂಲಕ ಸಾವಯವ ವಸ್ತುಗಳಿಗೆ

ಕಾರಣವಾಗುತ್ತದೆ. ಹೀಗೆ ಇಡೀ ಆಹಾರದ ವ್ಯವಸ್ಥೆಯ ಜೀವಜಗತ್ತು, ಅಜೈವಿಕ ಪರಿಸರ ಪ್ರಕ್ರಿಯೆಗಳನ್ನು ಒಳಗೊಂಡಿರುತ್ತದೆ. ಈ ನೈಸರ್ಗಿಕ ಆಹಾರ ವ್ಯವಸ್ಥೆಯನ್ನು ಅರಿವಿನಲ್ಲಿ ಈ ಮುಂದಿನ ವಿವಿಧ ಪ್ರಕ್ರಿಯೆಗಳ ಅರ್ಥೈಸುವಿಕೆಯು ಸಹಕಾರಿಯಾಗುತ್ತದೆ.

ನಿಸರ್ಗದಲ್ಲಿ ಜೀವಿ ವಿಕಾಸವು ಅವುಗಳ ನಡುವಿನ ಸಂಘರ್ಷದ ಮಧ್ಯೆಯೇ ಸಹಚರ್ಯವನ್ನು ಉಳಿಸಿಕೊಂಡು ಚಲನಶೀಲವಾಗಿದೆ. ವಿಕಾಸದ ಉದ್ದಕ್ಕೂ ಪ್ರತೀ ಜೀವಿಯು ತನ್ನ ಸ್ಥಿರತೆ ಹಾಗೂ ಮುಂದುವರಿಕೆಗೆ ಆಹಾರ ಮುಂತಾದ ಅವಶ್ಯಕತೆಗಳಿಗೆ ಪರಿಸರದೊಡನೆ ಸದಾ ಕ್ರಿಯಾಶೀಲವಾಗಿರುತ್ತದೆ. ಈ ಪ್ರತಿಕ್ರಿಯೆಯು ಸಂಘರ್ಷ, ಹೊಂದಾಣಿಕೆ, ಸಾರ್ವಭೌಮತ್ವ ಮುಂತಾದವುಗಳ ಮೂಲಕ ಸಮಸ್ಥಿತಿಗೆ ನಡೆಸುವ ಹೋರಾಟವಾಗಿರುತ್ತದೆ. ವೈವಿಧ್ಯಮಯ ಪರಿಸರದಲ್ಲೂ–ಉದಾಹರಣೆಗೆ ಮರುಭೂಮಿಯಾಗಲಿ, ದಟ್ಟ ಹರಿದ್ವರ್ಣ ಕಾಡಾಗಲಿ, ಸಾಗರಗಳೇ ಆಗಲಿ ಅಥವಾ ಹಿಮಚ್ಛಾಧಿತ ಪರ್ವತಗಳೇ ಆಗಲಿ–ಆಯಾ ಸನ್ನಿವೇಶಕ್ಕೆ ಅನುಗುಣವಾಗಿ ಜೈವಿಕ ಹೊಂದಾಣಿಕೆ ವಿಕಾಸವಾಗಿರುತ್ತದೆ. ಮಾನವರನ್ನು ಮತ್ತು ಸಾಕುಪ್ರಾಣಿಗಳನ್ನು ಹೊರತುಪಡಿಸಿ ಉಳಿದೆಲ್ಲ ಜೀವಿ ಪ್ರಪಂಚದ ಪ್ರಧಾನ ಚಟುವಟಿಕೆಯು ಆಹಾರವನ್ನು ಅರಸುವುದೇ ಆಗಿದೆ. ಎಲ್ಲ ಜೈವಿಕ ಕಾರ್ಯಗಳು ನಿಸರ್ಗದತ್ತ ಆಹಾರ ಹೊಂಚುವ, ಹಂಚುವ ಚಟುವಟಿಕೆಗಳೇ ಆಗಿವೆ. ಇಡೀ ಭೂ ಮಂಡಲದ ಜೀವಿ ಸಾಮ್ರಾಜ್ಯವು ಆಹಾರದ ಅಗತ್ಯಕ್ಕೆ ಒಂದನ್ನೊಂದು ಅವಲಂಬಿಸಿಯೇ ವಿಕಾಸಗೊಂಡಿದೆ. ಈ ವಿಕಾಸವು ವಿವಿಧ ಸ್ಥರಗಳಲ್ಲಿರುವುದನ್ನು ಕಾಣಬಹುದು.

ಒಂದು ಜೀವಿ ಸಮುದಾಯವು ಅಥವಾ ಜೀವಿಯು ಒಂದು ಪ್ರದೇಶದಲ್ಲಿ ಸಕ್ರಿಯವಾಗಿದ್ದ ಪರಿಸರದಲ್ಲಿ ತನ್ನೆಲ್ಲ ಜೈವಿಕ ಚಟುವಟಿಕೆಗಳನ್ನು ನಿರ್ವಹಿಸಿ ತನ್ನ ಅಂತ್ಯವನ್ನು ಕಾಣುವುದಾದರೆ, ಆ ಸಕ್ರಿಯವಾಗಿದ್ದ ಪರಿಸರದಲ್ಲಿ ತನ್ನೆಲ್ಲ ಅವಶ್ಯಕತೆಗಳನ್ನು ಪಡೆದಿದೆ ಎಂದರ್ಥ. ಜೀವಿಗೆ ಪ್ರಮುಖ ಅಗತ್ಯತೆ ಎಂದರೆ, ಆಹಾರ. ಸಕ್ರಿಯವಾಗಿದ್ದ ಪರಿಸರ ಪ್ರದೇಶವು ಎಲ್ಲ ಅಗತ್ಯಗಳನ್ನು ಒದಗಿಸುವುದೆಂದರೆ, ಅದರ ಆಹಾರ ಭದ್ರತೆ. ಒಂದೇ ಬಗೆಯ ಜೀವಿಗಳು ಸಮುದಾಯವನ್ನು ರೂಪಿಸಿಕೊಂಡು ತಮ್ಮ ಆಹಾರ ಭದ್ರತೆಗೆ ಅಗತ್ಯ ಪರಿಸರವನ್ನು ಕಟ್ಟಿಕೊಳ್ಳುತ್ತವೆ. ಈ ಸಮುದಾಯದ ರಚನೆಯು/ವಿಕಾಸವು ಆಹಾರ ಭದ್ರತೆಯ ಜತೆಗೆ ತಮ್ಮ ನೆಲೆಯ ರಕ್ಷಣೆಯನ್ನೂ ಒದಗಿಸುವಲ್ಲಿ ಸಹಕಾರಿಯಾಗುತ್ತವೆ. ಹೀಗೆ ಸಮುದಾಯ ರಚನೆಯು ಆ ಸಮುದಾಯದ ಸುಸ್ಥಿರತೆಗೆ ಕಾರಣವಾಗುವ ಆಕಾಂಕ್ಷೆಯನ್ನು ಒಳಗೊಂಡಿರುತ್ತದೆ. ಅನೇಕ ಸಮುದಾಯಗಳು ಸೇರಿ ಒಂದು ಸಹಯೋಗ ಕೂಡ ರಚನೆಯಾಗಿರುತ್ತದೆ. ಇವುಗಳೆಲ್ಲವೂ ಪರಸ್ಪರ ಸಂಘರ್ಷ ಹಾಗೂ ಹೊಂದಾಣಿಕೆಯ ಸಮೀಕರಣದೊಂದಿಗೆ ತಮ್ಮ ಇರುವಿಕೆಯನ್ನು ಸಾಧಿಸಬೇಕಾಗುತ್ತದೆ. ನಿಸರ್ಗದ ಆಹಾರ ವ್ಯವಸ್ಥೆಯು ಜೈವಿಕ ಹಾಗೂ ಅಜೈವಿಕ ಸಂಬಂಧಗಳನ್ನೊಳಗೊಂಡ ಒಂದು ಬಲೆ. ಈ ಸಂಬಂಧಗಳು ತಮ್ಮ ಮೂಲದಲ್ಲಿ ಅಜೈವಿಕ ಕಾರಣಗಳನ್ನೂ ಒಳಗೊಂಡಿರುವುದುಂಟು.

ಶಕ್ತಿಯು ಪ್ರತಿಯೊಂದು ಜೀವಿಯು ಜೀವಿಸಲು ಅವಶ್ಯಕವಾಗಿ ಪಡೆಯಲೇಬೇಕಾದ ಅವಶ್ಯಕ ವಸ್ತು. ಉದಾಹರಣೆಗೆ ಸಸ್ಯಗಳು ಶಕ್ತಿಯನ್ನು ಸೂರ್ಯನ ಬೆಳಕಿನಿಂದ ಪಡೆದರೆ ಪ್ರಾಣಿಗಳು ಈ ಸಸ್ಯಗಳನ್ನು ಸೇವಿಸುವುದರ ಮೂಲಕ ಹಾಗೂ ಕೆಲವೊಂದು ಪ್ರಾಣಿಗಳನ್ನು ಸೇವಿಸುವುದರ ಮೂಲಕ ಪಡೆಯುತ್ತವೆ. ಒಂದು ನಿರ್ಧಿಷ್ಟ ಜೈವಿಕ ಸಮುದಾಯದಲ್ಲಿ ಜೀವಿಗಳು ತಮ್ಮ ಪೋಷಣೆಗಾಗಿ ಒಂದರಮೇಲೊಂದು ಅವಲಂಬಿತವಾಗಿರುತ್ತವೆ. ಈ ಅವಲಂಬಿತ ಕೊಂಡಿಯನ್ನು ಆಹಾರ ಸರಪಳಿ ಎನ್ನಲಾಗುತ್ತದೆ. ಆಹಾರ ಸರಪಳಿಯು ಪ್ರಥಮವಾಗಿ ಶಕ್ತಿಯನ್ನು ಒದಗಿಸುವ ಮೂಲಗಳಿಂದ ಆರಂಭಗೊಳ್ಳುತ್ತವೆ. ಉದಾಹರಣೆಗೆ ಸಸ್ಯಗಳು ಸೂರ್ಯನ ಬೆಳಕಿನ ಕಿರಣಗಳ ಮೂಲಕ ಶಕ್ತಿಯನ್ನು ಪಡೆದು ದ್ವಿತಿಸಂಶ್ಲೇಷಣೆ ಕ್ರಿಯೆಯ ಮೂಲಕ ತಮ್ಮ ಆಹಾರವನ್ನು ತಾವೇ ತಯಾರಿಸಿಕೊಳ್ಳುತ್ತವೆ.

**ಆಹಾರ ಸರಪಳಿಯನ್ನು ಈ ಕೆಳಗಿನಂತೆ ವಿಂಗಡಿಸಿ ವಿವರಿಸಬಹುದು.**

- **ಉತ್ಪಾದಕರು:** ಜೀವ ಜಗತ್ತಿನಲ್ಲಿರುವ ಎಲ್ಲ ಹಸಿರು ಸಸ್ಯಗಳು, ಗಿಡಮರಗಳು ಉತ್ಪಾದಕರಾಗಿದ್ದು ಇವನ್ನು ಆಹಾರ ಸರಪಳಿಯ ಅಡಿಪಾಯವೆನ್ನಬಹುದು. ಇವುಗಳು ಸೂರ್ಯನ ಕಿರಣಗಳನ್ನು ಉಪಯೋಗಿಸಿಕೊಂಡು ತಮ್ಮ ಆಹಾರವನ್ನು ತಾವೇ ತಯಾರಿಸಿಕೊಳ್ಳುತ್ತವೆ. ಇನ್ನುಳಿದಂತೆ ಇತರ ಜೀವಿಗಳು ಆಮ್ಲಜನಕ ಮತ್ತು ಆಹಾರಕ್ಕಾಗಿ ಸಸ್ಯಗಳ ಮೇಲೆ ಅವಲಂಬಿತವಾಗಿರುತ್ತವೆ.

- **ಬಳಕೆದಾರರು:** ಯಾವುದೇ ಜೀವಿಯು ತಾನು ಬದುಕುವುದಕ್ಕಾಗಿ ಸಸ್ಯಜನ್ಯ ಅಥವಾ ಪ್ರಾಣಿಜನ್ಯ ಅಥವಾ ಇತರೆ ಯಾವುದೇ ಮೂಲದಿಂದ ಉತ್ಪತ್ತಿಯಾದ ಆಹಾರವನ್ನು ಸೇವಿಸಿ ಬದುಕುವ ಜೀವಿಗಳು ಬಳಕೆದಾರರ ಗುಂಪಿಗೆ ಸೇರುತ್ತವೆ.

- **ಸಸ್ಯಾಹಾರಿಗಳು:** ಆಹಾರಕ್ಕಾಗಿ ಸಂಪೂರ್ಣವಾಗಿ ಸಸ್ಯಗಳ ಮೇಲೆ ಅವಲಂಬಿತವಾದ ಜೀವಿಗಳನ್ನು ಸಸ್ಯಾಹಾರಿಗಳು ಎನ್ನಲಾಗುತ್ತದೆ ಮತ್ತು ಇವರನ್ನು ಪ್ರಾಥಮಿಕ ಹಂತದ ಬಳಕೆದರರು ಎಂದೂ ಕರೆಯಲಾಗುತ್ತದೆ.

- **ಮಾಂಸಾಹಾರಿಗಳು:** ಆಹಾರಕ್ಕಾಗಿ ಸಂಪೂರ್ಣವಾಗಿ ಪ್ರಾಣಿಗಳ ಮೇಲೆ ಅವಲಿಂಬಿತವಾದ ಜೀವಿಗಳನ್ನು ಮಾಂಸಾಹಾರಿಗಳೆಂದು ಮತ್ತು ಎರಡನೇ ಹಂತದ ಬಳಕೆದಾರರೆಂದು ಕರೆಯಲಾಗುತ್ತದೆ.

- **ಶಿಥಲೀಕಾರಕಗಳು:** ಶಿಲೀಂದ್ರ ಮತ್ತು ದುಂಡಾಣುಗಳು ಸತ್ತ ಜೀವಿಗಳನ್ನು ಆಹಾರವನ್ನಾಗಿ ಸ್ವೀಕರಿಸುತ್ತವೆ. ಇವುಗಳು ಸತ್ತ ಜೀವಿಗಳನ್ನು ವಿಭಜಿಸುವುದರಿಂದ ಉತ್ಪತ್ತಿಯಾಗುವ ಇಂಗಾಲ, ಸಾರಜನಕ ಮುಂತಾದ ಧಾತುಗಳನ್ನು ನೀರು, ಮಣ್ಣು ಮತ್ತು ಗಾಳಿಗೆ ಸೇರಿಸುವುದರಿಂದ ಇಂತಹ ಶಿಥಲೀಕಾರಕಗಳು ಆಹಾರ ಉತ್ಪಾದನೆಯ ಚಕ್ರದಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

ಆಹಾರವು ಒಂದು ನಿಸರ್ಗದ ಉತ್ಪನ್ನ ಅದು ಸಸ್ಯ ಮೂಲವಾಗಿರಬಹುದು ಅಥವಾ ಪ್ರಾಣಿ ಮೂಲವಾಗಿರಬಹುದು. ಈ ಸಸ್ಯ ಮತ್ತು ಪ್ರಾಣಿಗಳು ಸಹ ಆಹಾರದ ಅವಶ್ಯಕತೆಯನ್ನು ಹೊಂದಿರುತ್ತವೆ. ಸಸ್ಯಗಳು ತಮ್ಮ ಆಹಾರಕ್ಕಾಗಿ ಖನಿಜ ಲವಣಗಳನ್ನು, ನೀರನ್ನು ಅವಲಂಬಿಸಿರುತ್ತದೆ. ಸಸ್ಯಗಳು ಆಹಾರವನ್ನು ಪೋಷಕಾಂಶಗಳಾಗಿ ಭೂಮಿಯಿಂದ ಪಡೆಯುತ್ತವೆ. ಹಾಗಾಗಿ ಬಹುಪಾಲು ಸಸ್ಯಗಳು ಮತ್ತೊಂದು ಜೀವಿಯನ್ನು ಅವಲಂಬಿಸದೇ ತಾವೇ ಆಹಾರ ಉತ್ಪಾದಿಸುವ ಪ್ರಾಥಮಿಕ ಉತ್ಪಾದಕರಾಗಿರುತ್ತವೆ. ಈ ಸಸ್ಯಗಳನ್ನೇ ಆಹಾರವಾಗಿಸಿ ಬದುಕನ್ನು ಸಾಗಿಸುವ ಅನೇಕ ಸಸ್ಯಾಹಾರಿ ಪ್ರಾಣಿಸಂಕುಲಗಳಿವೆ. ಹಲವು ಪ್ರಾಣಿಗಳು ಸಸ್ಯಗಳ ಜತೆಯಲ್ಲಿ ಇತರೇ ಪ್ರಾಣಿಗಳನ್ನೂ ಅವಲಂಬಿಸಿರಬಹುದು. ಹಾಗೆಯೇ ಕೆಲವು ಸಸ್ಯಗಳೂ ಸಹ ಸತ್ತು ಕೊಳೆಯುತ್ತಿರುವ ಇತರೇ ಜೀವಿಗಳ ಮೇಲೆ ಬೆಳೆಯುವುದೂ ಸಾಧ್ಯವಿದೆ. ಕೊಳೆತ ಜೀವಿಗಳನ್ನು ಆಹಾರವಾಗಿಸಿ ಬದುಕನ್ನು ಸವೆಸುವ ಅಲ್ಪಾಯುಷ್ಯಿನ ಸಸ್ಯಗಳು ಹಲವು. ಇವನ್ನೆಲ್ಲ ಒಟ್ಟಾರೆ ನೋಡಿದರೆ, ಈ ಅಂಶ ಅರ್ಥವಾಗುತ್ತದೆ. ಸಸ್ಯಗಳು ಮಣ್ಣು ಮತ್ತು ಪರಿಸರದಿಂದ ಪೋಷಕಾಂಶಗಳನ್ನು ಪಡೆದು ಇತರೇ ಜೀವಿಗೆ ಆಹಾರವಾಗಬಲ್ಲ ಸೆಲ್ಯುಲೋಸ್, ಗ್ಲೂಕೋಸ್, ಪ್ರೊಟೀನ್, ಕೊಬ್ಬು ಮುಂತಾದ ಪದಾರ್ಥಗಳ ಉತ್ಪನ್ನಗಳನ್ನು ತಯಾರಿಸುತ್ತವೆ. ಈ ಉತ್ಪನ್ನಗಳು ಮನುಷ್ಯನನ್ನೂ ಒಳಗೊಂಡಂತೆ ಸಸ್ಯಾಹಾರಿ ಪ್ರಾಣಿಗಳಿಗೆ ಆಹಾರವಾಗುತ್ತವೆ.

ಈ ಆಹಾರ ಪದಾರ್ಥಗಳು ಪ್ರಾಣಿದೇಹದಲ್ಲಿ ಮತ್ತಷ್ಟು ಸಂಕೀರ್ಣವಾದ ಪದಾರ್ಥಗಳಾಗಿ ಸಂಗ್ರಹವಾಗುತ್ತವೆ. ಈ ಜೀವಿಗಳ ದೇಹಾಂತ್ಯದ ನಂತರ ಈ ಸಂಕೀರ್ಣ ವಸ್ತುಗಳೇ ಹಲವು ಸೂಕ್ಷ್ಮ ಜೀವಿಗಳ ಚಟುವಟಿಕೆಗಳಿಂದ ವಿಭಜನೆಗೊಂಡು ಸರಳ ವಸ್ತುಗಳಾಗಿ ಮತ್ತೆ ನೆಲವನ್ನು ಸೇರುತ್ತವೆ. ನೆಲದಿಂದ ಸಸ್ಯಗಳ ಮೂಲಕ ಪ್ರಾಣಿದೇಹಗಳಲ್ಲೊಂದಾಗಿ ಮತ್ತೆ ನೆಲವನ್ನು ಸೇರುವ ಮೂಲಕ ಆಹಾರದ ನೈಸರ್ಗಿಕ ಪ್ರಕ್ರಿಯೆಯು ವಿವಿಧ ಜೀವಿಗಳ ಆಹಾರ ಭದ್ರತೆಯನ್ನು ನಿಭಾಯಿಸುತ್ತದೆ. ನಿಸರ್ಗದ ದೃಷ್ಟಿಯಲ್ಲಿ ಆಹಾರ ಭದ್ರತೆಯು ಮೂಲ ಜೈವಿಕ ಅವಶ್ಯಕತೆಗಳು ಮತ್ತು ಹಲವು ವಸ್ತುಗಳ ನಿರ್ವಹಣೆಯಿಂದ ಆರಂಭಗೊಂಡು, ವಸ್ತು ವರ್ಗಾವಣೆ ಮೂಲಕ ಸಂಕೀರ್ಣವಾಗಿ ಮತ್ತೆ ಒಡೆದು ಸರಳ ರೂಪದಿಂದ ಮೂಲ ಸ್ಥಾನದಲ್ಲಿ ನೆಲೆಗೊಳ್ಳುವ ಪ್ರಕ್ರಿಯೆ.

### 4.5.2 ಆಹಾರ ಭದ್ರತೆಯ ಪಾರಂಪರಿಕ ದೃಷ್ಟಿ

ಆಹಾರ ಹಂಚಿಕೆಯ ಪರಂಪರೆಯನ್ನು ಭಾರತೀಯತೆಯೊಳಗೆ ನೋಡುವುದಾದರೆ, ನಗರವಾಸಿ ಮನಸ್ಸಿನ ತರಬೇತಿಯಿಂದ ಅಲ್ಲ. ಬದಲಾಗಿ, ಬಹುಸಂಖ್ಯಾತ ಮನಸ್ಸುಗಳ ಜೀವನ ಕ್ರಮದ ಒಳಗೆ. ಗ್ರಾಮೀಣ ಸಮಾಜದಲ್ಲಿ ಯಾರೊಬ್ಬ ಅತಿಥಿಗೂ ಉಣಬಡಿಸುವುದೆಂದರೆ, ದೊಡ್ಡ ವಿಚಾರವಲ್ಲ. ನಗರ ಸಂಸ್ಕೃತಿಯಲ್ಲಿ ಹೇಳದೆ ಬರುವ ಅತಿಥಿಗಳ ನಿಭಾಯಿಸುವುದು ದೊಡ್ಡ ವಿಷಯವೇ. ಹೀಗೆ ಹೇಳುವುದಕ್ಕೆ ಕಾರಣಗಳಿವೆ. ಅಂದರೆ, ಹಂಚುವ ಮನಸ್ಸು ಸಹಜವಾದ ಕ್ರಿಯೆ. ಆದರೆ, ಬದುಕಿನ ಒತ್ತಡದ ಜೀವನ ಕ್ರಮ ಈ ಮೂಲ ಆಶಯಕ್ಕೆ ತಂದೊಡ್ಡಿದ ತಡೆ. ಆದರೆ, ಅನೇಕ ನೈಸರ್ಗಿಕ ವಿಕೋಪಗಳ ಸಂದರ್ಭದಲ್ಲಿ ನಾಗರೀಕತೆಯ ಬೆನ್ನು ಹತ್ತಿದ ಮನಸ್ಸುಗಳು ಸಹ ಸಹಾಯ ಹಸ್ತ ಚಾಚಿ ಹಂಚಲು ಮುಂದಾಗುವುದನ್ನು ನೋಡುತ್ತೇವೆ. ಕಳೆದ ಕೆಲವು ದಶಕಗಳಲ್ಲಿ ಇಂತಹ

ಸಂದರ್ಭಗಳ ಸಂಗ್ರಹಗಳನ್ನು ಗಮನಿಸಿದಾಗ ನಿರೀಕ್ಷೆಗೂ ಮೀರಿ ಪರಿಕರಗಳು ಸಂಗ್ರಹವಾಗುವುದನ್ನು ನೋಡಿದ್ದೇವೆ.

ಈ ಪಡೆಯುವ ಮತ್ತು ಹಂಚುವ ಒಟ್ಟಾರೆಯ ಆಶಯದೊಳಗೆ ಒಳ್ಳೆಯತನಗಳೇ ಇದ್ದಿದ್ದರೆ ಅವುಗಳನ್ನು ಸಮಸ್ಯೆಗಳಾಗಿಸಿ ಅಧ್ಯಯನದ ಪ್ರಮೇಯವೂ ಇರುತ್ತಿರಲಿಲ್ಲ. ಈ ವಾಸ್ತವಗಳು ಬಹುರೂಪಿ. ಹಾಗಾಗಿ ಸಮಸ್ಯೆಗಳನ್ನು ನಿರಂತರವಾಗಿಸುವ ಪ್ರಕ್ರಿಯೆಯಲ್ಲಿ ಸದಾ ತನ್ಮಯಿ.

ನಮ್ಮ ದೇಶದ ಐತಿಹಾಸಿಕ ಸತ್ಯಗಳನ್ನು ಗಮನಿಸೋಣ. ಈ ಸತ್ಯಗಳಿಗೆ ಪುರಾವೆಗಳನ್ನು ವಿದೇಶಿ ಪ್ರವಾಸಿಗಳ ಬರಹದಲ್ಲಿ ಕಾಣಬಹುದು. ಅಲ್ಲದೆ, ನಮ್ಮೊಳಗಿನ ಭೌದ್ಧಿಕತೆಯನ್ನರಸುವ ಅನೇಕ ಅಧ್ಯಯನಗಳಲ್ಲೂ ಕಾಣಬಹುದು. ಭಾರತೀಯ ಹೆಸರಾಂತ ರಾಜರುಗಳಾದ ಅಶೋಕ, ಹರ್ಷವರ್ಧನ, ಪುಲಕೇಶಿ, ಅಕ್ಬರ್ ಮುಂತಾದವರು ಬೊಕ್ಕಸವನ್ನು, ಆಹಾರ ಸಂಗ್ರಹವನ್ನು ನಿಯಮಿತವಾಗಿ ಹಂಚುವ ಕಾರ್ಯಕ್ರಮಗಳನ್ನು ಜಾರಿಯಾಗಿಟ್ಟುಕೊಂಡಿದ್ದನ್ನು ದಾಖಲೆಗಳು ತಿಳಿಸುತ್ತವೆ. ಅನೇಕ ಸಣ್ಣಪುಟ್ಟ ಪಾಳೆಗಾರರು ಸಹ ಅವಶ್ಯಕ ಸಂದರ್ಭದಲ್ಲಿ "ಕೊಡುವ" ಸಂದರ್ಭಗಳನ್ನು ಸಾಕಷ್ಟು ತಿಳಿಸುವ ದಾಖಲೆಗಳಿವೆ. ಇದೇ ರಾಜಕಾರಣದ ತಾತ್ವಿಕ ಕ್ರಮವಾಗಿಯೂ ಹೆಗ್ಗಳಿಕೆ ಪಡೆದಿದೆ. ಆದರೆ, ಪ್ರಸಕ್ತ ರಾಜಕೀಯ ಸಂದರ್ಭವು ಭಿನ್ನವಾದ ಅನುಭವಕ್ಕೆ ತಂದುದರಿಂದ ಇಂತಹ ಮರುಚಿಂತನೆಗಳಿಗೆ ಅವಕಾಶಕೊಡುತ್ತಾ ವಿಕಸಿಸುತ್ತಿವೆ.

ಹಸಿವು ಸಾಮಾನ್ಯವಾದ್ದು, ನಿರಂತರವಾದದ್ದು ಹಾಗೂ ಅವಶ್ಯಕವಾಗಿ ನಿವಾರಿಸಲೇಬೇಕಾದದ್ದು. ಹಾಗಾಗಿ ಹಸಿವಿನ ನಿವಾರಣೋಪಾಯದ ಮಾರ್ಗಸೂಚನೆಗಳು ಆಹಾರ ಭದ್ರತೆಯ ಒಳಗೆ ಬೆಳಕು ಕಂಡಿವೆ. ಈ ಹಿನ್ನಲೆಯಲ್ಲಿ ಅನೇಕ ವಿಧಾನಗಳು ಮಾನವರ ಬದುಕಿನ ಲೋಕದೃಷ್ಟಿಯಲ್ಲಿ ಅರಳಿವೆ. ಇವು ಸಾಮೂಹಿಕ ಭೋಜನ ಸನ್ನಿವೇಶಗಳಾಗಿ ಹಲವು ಔತಣಕೂಟಗಳ ಮೂಲಕ ನಡೆಯುತ್ತಿದ್ದರೆ ಆಶ್ಚರ್ಯವಿಲ್ಲ. ಅಗತ್ಯ ಸಂದರ್ಭಗಳಲ್ಲಿ ಊಟದ ಸೇವೆಯನ್ನು ಎಲ್ಲಾ ಧಾರಾಳ ಮನಸ್ಸುಗಳು ಒಪ್ಪಿವೆ. ಈ ದಿಶೆಯಲ್ಲಿ ಉಚಿತ ಊಟದ ವ್ಯವಸ್ಥೆಗಳು ಅಗತ್ಯ ಸಂದರ್ಭಗಳಿಗೆ ತಕ್ಕಂತೆ ನಡೆಸಿಕೊಡುವ ಅನೇಕ ಸಂಸ್ಥೆ ಮತ್ತು ವ್ಯವಸ್ಥೆಗಳನ್ನು ಕಾಣುತ್ತೇವೆ. ಹಲವಾರು ಸಮಾಜಮುಖಿ ಮಠಗಳು, ದೇವಾಲಯಗಳು, ಸಂಘಸಂಸ್ಥೆಗಳು, ಉದ್ದಿಮೆಗಳು ಹಾಗೂ ಕೆಲವು ವ್ಯಕ್ತಿಗಳು ಈ ಬಗೆಯ ಲೋಕೋಪಯೋಗಿ ಕಾರ್ಯದಲ್ಲಿ ನಿರತವಾಗಿವೆ. ಈ ವೈವಿಧ್ಯಮಯ ಸೇವಾ ಉದಾಹರಣೆಗಳನ್ನು ಬಹುಷಃ ಎಲ್ಲ ಪ್ರದೇಶಗಳಲ್ಲೂ ಕಾಣಬಹುದು ಈ ನಿಟ್ಟಿನಲ್ಲಿ ನಮ್ಮ ರಾಜ್ಯದಲ್ಲಿ ನಡೆದುಕೊಂಡು ಬಂದಿರುವ ಅನೇಕ ನಿದರ್ಶನಗಳು ಇಂತಿವೆ. ಶಿಕ್ಷಣ, ದಾಸೋಹ, ಸಾಮೂಹಿಕ ಪಂಕ್ತಿ ಭೋಜನಗಳು ಮುಂತಾದವುಗಳು.

**ಶಿಕ್ಷಣಕ್ಕೋಸ್ಕರ ಆರಂಭಗೊಂಡ ಆಹಾರ ವ್ಯವಸ್ಥೆಗಳು :** 'ಅನ್ನ ದಾನ ಮಹಾದಾನ' ಎಂಬ ಮಾತಿನ ಅರ್ಥದಂತೆ ನಮ್ಮಲ್ಲಿ ಅಂತಹ ಭಾವನೆವುಳ್ಳ ಅನೇಕ ಹಿರಿಯರು ತಮಗೆ ಸಾಧ್ಯವಾಗುವ ರೀತಿಯಲ್ಲಿ ಅನ್ನದಾನ ಮಾಡುವ ಮೂಲಕ ಸಂತೃಪ್ತಿಯನ್ನು ಪಡೆದಿದ್ದಾರೆ. ಇಂತಹ ಭಾವನೆ ಹೊಂದಿರುವ ಅನೇಕರು ಉನ್ನತ ಶಿಕ್ಷಣದ ಆಸೆ ಹೊತ್ತು ಗ್ರಾಮೀಣ ಭಾಗದಿಂದ ಆಗಮಿಸಿದ ಬಡ ವಿದ್ಯಾರ್ಥಿಗಳಿಗೆ

ಅನ್ನವನ್ನು ನೀಡಿ ಸಾಕಿ ಸಲುಹಿದ ಪದ್ಧತಿಯನ್ನು ನಾವು ಮರೆಯಲಾಗುವುದಿಲ್ಲ. ವಾರದ ಒಂದೊಂದು ದಿನ ಒಂದೊಂದು ಮನೆಯಲ್ಲಿ ಊಟದ ಆಸರೆ ಪಡೆದು ವ್ಯಾಸಂಗ ಮುಗಿಸಿ ಉನ್ನತ ಹುದ್ದೆಯಲ್ಲಿರುವ ಅನೇಕರು ನಮ್ಮ ಕಣ್ಣೆದುರಿಗಿದ್ದಾರೆ. ಕಾಲಕ್ರಮೇಣ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ವಸತಿಯೊಂದಿಗೆ ಉಚಿತ ಊಟದ ವ್ಯವಸ್ಥೆ ಇರುವ ಹಾಸ್ಟೆಲ್‌ಗಳು ಕರ್ಯಾರಂಭಗೊಂಡು ಆ ಮೂಲಕ ಹೆಚ್ಚಿನ ಜನರಿಗೆ ಓದುವ ಅವಕಾಶ ಒದಗಿಸತೊಡಗಿದವು. ಈಚಿನ ವರ್ಷಗಳಲ್ಲಿ ಎಲ್ಲ ಕಡೆ ಶಾಲೆ ಕಾಲೇಜುಗಳು ಆರಂಭವಾಗಿರುವುದರಿಂದ ಬಡ ಹುಡುಗರು ನಗರಗಳಲ್ಲಿ ಶಿಕ್ಷಣ ಮುಂದುವರಿಸಲು ಕಷ್ಟಪಡುವ ಪರಿಸ್ಥಿತಿಯಿಲ್ಲ. ಜತೆಗೆ ಇಂದು ರಿಯಾಯಿತಿ ದರದಲ್ಲಿ, ಉಚಿತವಾಗಿ, ಒಂದೇ ಕೋಮಿನವರಿಗಾಗಿ ಮುಂತಾದ ಅನೇಕ ವಿದ್ಯಾರ್ಥಿನಿಲಯಗಳ ಸೌಲಭ್ಯಗಳು ವಿದ್ಯಾರ್ಥಿಗಳಿಗೆ ಆಹಾರ ಭದ್ರತೆ ಒದಗಿಸಲು ಸಹಕಾರಿಯಾಗಿವೆ.

ನಮ್ಮ ರಾಜ್ಯದ ಮೈಸೂರು 19ನೇ ಶತಮಾನದಿಂದಲೂ ಶೈಕ್ಷಣಿಕ ಕೇಂದ್ರ. ವಿದ್ಯೆ ಕಲಿಯಲು ಬಂದವರಿಗೆ ಇಲ್ಲಿ ಯಾವುದರ ಕೊರತೆಯೂ ಆಗಿಲ್ಲ. ಇಪ್ಪತ್ತನೆ ಶತಮಾನದ ಆರಂಭದ ವರ್ಷಗಳಲ್ಲಿ ಅಷ್ಟಾಗಿ ವಿದ್ಯಾರ್ಥಿನಿಲಯಗಳಿರಲಿಲ್ಲ. ಆದರೆ ಆ ಕಾಲದಲ್ಲಿ ವಾರಾನ್ನದ ವ್ಯವಸ್ಥೆ ಇತ್ತು. ಕಾಲ ಕಳೆದಂತೆ ವಾರಾನ್ನದ ಪದ್ಧತಿ ಕಡಿಮೆಯಾಗುತ್ತಾ ಬಂದು ವಿದ್ಯಾರ್ಥಿನಿಲಯಗಳು ಆರಂಭಗೊಂಡವು. ಇದರ ಜತೆಗೆ ಅನೇಕ ಶಿಕ್ಷಕರು ತಮ್ಮ ಮನೆಯಲ್ಲಿಯೇ ಹಲವಾರು ವಿದ್ಯಾರ್ಥಿಗಳಿಗೆ ಊಟದ ವ್ಯವಸ್ಥೆ ಕಲ್ಪಿಸುತ್ತಿದ್ದರು. ಇಂದಿಗೂ ಮೈಸೂರಿನ 30ಕ್ಕೂ ಹೆಚ್ಚು ಹೋಟೆಲ್‌ಗಳು 200ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಪ್ರತಿ ದಿನ ಉಚಿತ ಊಟ ಹಾಕುತ್ತ ಸಂತೃಪ್ತಿ ಪಡೆದಿದ್ದಾರೆ. ಇದಕ್ಕೆ ಉದಾಹರಣೆ ಮೈಸೂರಿನ ಹೋಟೆಲ್‌ಗಳಾದ ದಾಸ ಪ್ರಕಾಶ್, ರಾಘವೇಂದ್ರ ಭವನ, ಹೋಟೆಲ್ ಸಂತೋಷ, ಮಧುನಿವಾಸ, ಇಂದ್ರ ಕೆಫೆ, ಸುಧಾ, ಲಕ್ಷ್ಮಿ, ಪ್ರೀತಿಸಾಗರ್ ಅಯ್ಯಂಗಾರ್ ಟಿಫಾನೀಸ್ ಮುಂತಾದವುಗಳು.

**ಜನಸಾಮಾನ್ಯರಿಗಾಗಿ ಆರಂಭಗೊಂಡ ಉಚಿತವಾಗಿ ಅಥವಾ ಕಡಿಮೆ ದರದಲ್ಲಿ ಆಹಾರ ಒದಗಿಸುವ ವ್ಯವಸ್ಥೆಗಳು :** ಮನುಷ್ಯನ ಮೂಲಭೂತ ಅವಶ್ಯಕತೆಯಾದ ಆಹಾರ ಬೇಡಿಕೆಯನ್ನು ಸಿದ್ಧರೂಪದಲ್ಲಿ ಒದಗಿಸುವ ಕಾರ್ಯವನ್ನು ಅನೇಕ ಹೋಟೆಲ್‌ಗಳು ಪೂರೈಸುತ್ತಿವೆ. ಇಂತಹ ಉದ್ಯಮ ನಡೆಸುವವರಲ್ಲಿಯೂ ಸಹ ನಾವು ಸೇವಾ ಮನೋಭಾವ ಹೊಂದಿದ ಜನರನ್ನು ನಮ್ಮ ರಾಜ್ಯದ ಉದ್ದಗಲಕ್ಕೂ ಕಾಣುತ್ತಿದ್ದೇವೆ. ಇದಕ್ಕೆ ಉತ್ತಮ ಉದಾಹರಣೆ ನಮ್ಮ ರಾಜ್ಯದ ಬಿಜಾಪುರದಲ್ಲಿ 36 ವರ್ಷಗಳಿಂದ ಜೈನ ಸಮಾಜವು 'ಅನ್ನ ದಾಸೋಹ' ನಡೆಸಿಕೊಂಡು ಬಂದಿದೆ. ಇಂತಹದೊಂದು ಅನನ್ಯ ಅನ್ನ ದಾಸೋಹ ಕಾರ್ಯವು 1972ರಲ್ಲಿ ಆರಂಭಗೊಂಡು ಅತೀ ಕಡಿಮೆ ದರದಲ್ಲಿ ಯಾವ ಜಾತಿ ಭೇದ ಭಾವವಿಲ್ಲದೆ ಊಟಕ್ಕೆ ಬಂದ ಜನರಿಗೆ ಹೊಟ್ಟೆ ತುಂಬ ಊಟ ನೀಡುವ ಕಾಯಕದಲ್ಲಿ ತೊಡಗಿದೆ. ಇಲ್ಲಿಯ ಸ್ಥಳೀಯ ಆಹಾರ ಪದಾರ್ಥಗಳ ಪ್ರಮುಖ ಭಾಗವಾದ ಜೋಳದ ರೊಟ್ಟಿ, ಪಲ್ಯ, ಅನ್ನ ಮಜ್ಜಿಗೆ ಜತೆಗೆ ಸಿಹಿಯನ್ನು ನಿರ್ಮಲ ಮನಸ್ಸಿನಿಂದ ಬಂದವರಿಗೆ ಉಣಬಡಿಸುತ್ತಾರೆ.

ಅಂತಯೇ ಗುಲ್ಬರ್ಗ ನಗರದಲ್ಲಿರುವ "ಅನ್ನಪೂರ್ಣ ಕೇಂದ್ರ"ವು ಕಳೆದ ಆರು ವರ್ಷಗಳಿಂದ ರೂಪಾಯಿಗೊಂದು ಊಟ ಕೊಡುವ ಕೆಲಸ ಮಾಡುತ್ತಿದೆ. ಈ ಕಾರ್ಯವನ್ನು ಹಿಂದಿ ಪ್ರಚಾರ ಸಭಾ ಸದಸ್ಯರು ಹಾಗೂ ಮಾರ್ವಾಡಿ ವರ್ತಕ ಶಂಕರ್ ಲಾಲ್ ಗಿಲ್ಡಾ ಇವರ ಆಶ್ರಯದಲ್ಲಿ ಆಸ್ಪತ್ರೆಗೆ ಬರುವವರಿಗೆ ಸೇವೆಯನ್ನು ನೀಡುವ ಉದ್ದೇಶದಿಂದ 2003ರಲ್ಲಿ 'ಅನ್ನಪೂರ್ಣ ಕೇಂದ್ರ' ಕಾರ್ಯಾರಂಭಗೊಂಡಿತು. ಈ ಕೇಂದ್ರವು ಇಂದಿಗೂ ಹಸಿದು ಬರುವ ಜನರಿಗೆ ಅನ್ನ ನೀಡುವ ಕಾಯಕದಲ್ಲಿ ತೊಡಗಿದೆ.

ಬಹಳ ವ್ಯಾಪಾರಿ ಮನೋಭಾವ ಇರುವ ಮಂಗಳೂರಲ್ಲಿ ಸಹ ಅದರಲ್ಲೂ ಹೋಟೆಲ್ ಅಗ್ಗ ಎಂದರೆ ಆಶ್ಚರ್ಯ ಎನಿಸಬಹುದು. ಕಾರಣ ಆಹಾರವನ್ನು ಮಾರುವ ಸಂಸ್ಕೃತಿಯ ಉಗಮಕ್ಕೆ ಆ ಮೂಲಕ ಹೋಟೆಲ್ ಅನ್ನು ಒಂದು ಉದ್ಯಮವಾಗಿಸಿದ ನೆಲ ಇದು. ಇಂತಹ ಊರಿನಲ್ಲಿ ಸಹ ಸ್ಥಳೀಯ ತಿಂಡಿತಿನಿಸುಗಳು ಬಡವರನ್ನು ಕಾರ್ಮಿಕರನ್ನು ಗಮನದಲ್ಲಿಟ್ಟು ಹೋಟೆಲ್‌ಗಳು ಕಾಣಬರುತ್ತವೆ. ಮಂಗಳೂರಿನ ಕದಿರಿ ದೇವಾಲಯದ ಹತ್ತಿರದ "ಜಯಲಕ್ಷ್ಮಿ ವಿಲಾಸ" ಹೋಟೆಲ್ ಸುಮಾರು 40 ವರ್ಷದಿಂದ ಇಂತಹ ಕಾರ್ಯದಲ್ಲಿ ನಿರತವಾಗಿದೆ. ಮಂಗಳೂರಿನಲ್ಲಿ ಸಾಮಾನ್ಯ ಊಟದ ದರ ರೂ.30–40 ಇರುವಾಗ ರೂ.8–10ಕ್ಕೆ ಇಲ್ಲಿ ತಿಂಡಿ–ಊಟ ದೊರೆಯುತ್ತಿದೆ. ಇದೇ ರೀತಿ ನಗರದ ಇತರೇ ಕೆಲವು ಹೋಟೆಲ್‌ಗಳು ಸಹ ಬಡ ಜನರನ್ನು ದೃಷ್ಟಿಯಲ್ಲಿಟ್ಟುಕೊಂಡು ಕಡಿಮೆ ದರದಲ್ಲಿ ಊಟೋಪಚಾರ ವ್ಯವಸ್ಥೆಯನ್ನು ಕಲ್ಪಿಸಿವೆ.

ಇಂತಹ ಅನೇಕ ಸಂಸ್ಥೆಗಳು, ವ್ಯಕ್ತಿಗಳು, ಉದ್ಯಮಗಳು ತಮ್ಮ ಶಕ್ತ್ಯಾನುಸಾರ ತಮ್ಮ ಗಳಿಕೆಯ ಒಂದು ಭಾಗವನ್ನು ಆಹಾರ ಭದ್ರತೆಗೆ ಮೀಸಲಿರಿಸಿರುವುದು ಈ ಪರಂಪರೆಯ ಮುಖ್ಯ ಲೋಕದೃಷ್ಟಿ. ಅಂದಹಾಗೆ ಆಹಾರ ಭದ್ರತೆಯು ಎಲ್ಲರನ್ನೂ ಒಳಗೊಳ್ಳಬೇಕೆನ್ನುವ ಸಾರ್ವತ್ರಿಕ ವಿಚಾರವನ್ನು ಬೆಂಬಲಿಸುವ ಈ ಲೋಕದೃಷ್ಟಿಯು ಇಂತಹ ಪ್ರೇರಕರಿಂದ ಸಾಮರ್ಥ್ಯವನ್ನು ಪಡೆದಿದೆ. ಈ ಹಲವು ಉದಾಹರಣೆಗಳು ಒಂದು ವ್ಯವಸ್ಥೆ ಆಹಾರ ಭದ್ರತೆಯನ್ನ ತನ್ನೆಲ್ಲ ಸದಸ್ಯರಿಗೆ ವಿಸ್ತರಿಸುವ ತನ್ನೆಲ್ಲರನ್ನೂ ಒಳಗೊಳ್ಳುವ ಸದಾಶಯಕ್ಕೆ ಬದ್ಧವಾಗಿರಬೇಕೆನ್ನುವ ಅಥವಾ ಜವಾಬ್ದಾರಿ ಹೊಂದಬೇಕೆನ್ನುವುದನ್ನು ಬಿಂಬಿಸುತ್ತದೆ.

**ವೈಯಕ್ತಿಕ ನೆಲೆಯಲ್ಲಿ ಆಹಾರ ಭದ್ರತೆಯ ಜವಾಬ್ದಾರಿ :** ಮನುಷ್ಯನ ಜೀವನ ಚಕ್ರದಲ್ಲಿ ಹುಟ್ಟು ಮತ್ತು ಸಾವು ಇವೆರಡರ ನಡುವಿನ ಸಮಯವೇ ಬದುಕು. ಹುಟ್ಟಿನಿಂದ ಆರಂಭಗೊಂಡ ಸಮಾಜದೊಂದಿಗಿನ ಅವನ ಸಂಬಂಧವನ್ನು ಬೇರೆ ಬೇರೆ ರೀತಿಯ ಸಂಪ್ರದಾಯದ ಮೂಲಕ ರೂಢಿಗಳಾಗಿ ಜಾರಿಯಲ್ಲಿವೆ. ನಾಮಕರಣದಿಂದ ಆರಂಭಗೊಂಡು ಹುಟ್ಟು ಹಬ್ಬದ ಆಚರಣೆಗಳ ಮೂಲಕ ವಿವಿಧ ವೈಯಕ್ತಿಕ ಆಚರಣೆಗಳಲ್ಲಿ ಆಹಾರದ ಹಂಚುವಿಕೆಯು ವಿಕಾಸಗೊಂಡಿದೆ. ಈ ರೀತಿಯಾಗಿ ಅನೇಕ ಸಂಪ್ರದಾಯಗಳು ವಿಕಾಸಗೊಂಡಿರುವುದು ಆಹಾರ ಭದ್ರತೆಯ ಸಾಧ್ಯತೆಗೆ ನೆರವಾಗಿದೆ.

**ಸಾಮೂಹಿಕ ಭೋಜನ ವ್ಯವಸ್ಥೆಗಳು :** ನಮ್ಮ ಸಮಾಜದಲ್ಲಿ ಅನೇಕ ಸಂದರ್ಭಗಳು ಸಾಮೂಹಿಕ ಭೋಜನ ಅಥವಾ ಔತಣಕೂಟಗಳ ಸಂದರ್ಭಗಳಿಗೆ ಅವಕಾಶವಿತ್ತಿವೆ. ಆರಂಭದಲ್ಲಿ ಯಾವುದೇ ಉದ್ದೇಶಗಳಿಂದ ಇಂತಹ ಸಂದರ್ಭಗಳು ವಿಕಾಸಗೊಂಡಿರಬಹುದು. ಉದಾಹರಣೆಗೆ, ಜಾತ್ರೆ, ಹಬ್ಬ, ಸಮುದಾಯದ ಆಚರಣೆಗಳು, ಕೌಟುಂಬಿಕ ಸಂತೋಷ ಸಂದರ್ಭಗಳು, ವೈಯಕ್ತಿಕ ಅಭಿಲಾಷೆಗಳು ಹೀಗೆ ಹಲವು ಕಾರಣಗಳಿದ್ದಿರಬಹುದು. ಆದರೆ ಇವುಗಳ ಒಟ್ಟಾರೆ ಫಲಿತಾಂಶ ಮಾತ್ರ ಸಮುದಾಯದ ಸದಸ್ಯರ ಒಂದು ಹೊತ್ತಿನ ಹಸಿವಿನ ನಿವಾರಣೆಯ ಕಾರ್ಯಸೂಚಿ ಇರುವುದಂತೂ ಸತ್ಯವಾದದ್ದು. ಹಲವಾರು ಸಂದರ್ಭದಲ್ಲಿ ಸಾಂಪ್ರದಾಯಿಕ ಆಚರಣೆಗಳಾಗಿ ಭೋಜನಾ ವ್ಯವಸ್ಥೆಗಳು ರೂಪಗೊಂಡಿರುವುದುಂಟು. ಇದರಲ್ಲಿ ಒತ್ತಾಯದ ಅಥವಾ ಅನಿವಾರ್ಯದ ಆಕಾಂಕ್ಷೆ ಇದ್ದರೂ ಸಹ ಆಚರಿಸುವವರ ಮನಸ್ಸಿನಲ್ಲಿ ಒಂದು ಜವಾಬ್ದಾರಿಯ ಸಂದರ್ಭವನ್ನು ನೀಗಿಕೊಂಡ ನೆಮ್ಮದಿಯಂತೂ ಇದ್ದೇ ಇರುತ್ತದೆ.

ಇಂತಹ ಆಚರಣೆಗಳಾಗಿ ಮಾರ್ಪಟ್ಟ ಸನ್ನಿವೇಶಗಳಿಗೆ ಭಾವನಾತ್ಮಕ ಕಾರಣಗಳನ್ನು ಸಮೀಕರಿಸುವುದು ಇದೆ. ಇದರ ಒಟ್ಟಾರೆ ಫಲ ಮಾತ್ರ ಆಹಾರ ಭದ್ರತೆಯ ಜವಾಬ್ದಾರಿಯನ್ನು ನಿಭಾಯಿಸುವ ಸಂಕೇತವಾಗಿದೆ. ವೈಯಕ್ತಿಕ ಸಂದರ್ಭದಲ್ಲಿ ಇಂತಹ ಸಂಕೇತಗಳು ಆಚರಣೆಗೆ ಬರಲು ಸಮಾಜ ಪರಂಪರಾಗತವಾಗಿ ರೂಪಿಸಿದ ಅನಿವಾರ್ಯಗಳ ಹಿಂದೆ ವ್ಯಕ್ತಿಯ ಸಾಮಾಜಿಕ ಜವಾಬ್ದಾರಿಯನ್ನು ರೂಢಿಸಿದೆ.

ಒಂದು ಸಮಾಜದ ಅಥವಾ ಸಮುದಾಯದ ಭಾಗವಾಗಿ ಬದುಕುವ ಸದಸ್ಯರಿಗೆ ಸಮಾಜಕ್ಕೆ ಪ್ರತಿಯಾಗಿ ಸೇವೆ ಮಾಡುವ ಅವಕಾಶವನ್ನು ಒದಗಿಸುವುದೇ ಆಗಿದೆ. ಒಂದು ಸಮುದಾಯದ ಸದಸ್ಯರಾಗಿ ಯಾವೋರ್ವ ವ್ಯಕ್ತಿಯೂ ಸಹ ತನ್ನ ಜೀವಿತ ಸಂದರ್ಭದಲ್ಲಿ ತನ್ನ ಸುತ್ತಲ ಸಮಾಜ/ಪರಿಸರದಿಂದ ಪಡೆಯುತ್ತ ಬೆಳೆಯುತ್ತಾನೆ. ತಾನು ಪಡೆದದ್ದಕ್ಕೆ ಪ್ರತಿಯಾಗಿ ಸಮಾಜಕ್ಕೆ ಏನಾದರೂ ಸೇವೆ ಮಾಡುವ ಅವಕಾಶವನ್ನು ಸೃಜಿಸುವುದರ ಸಲುವಾಗಿ ಆಚರಣೆಗಳು ಜಾರಿಗೆ ಬಂದಿರಬಹುದು. ಹಾಗೆಂದೇ ಅನೇಕ ನೆಪಗಳಿಂದ ಸಮಾಜ ಸೇವೆಯ ಅವಕಾಶಗಳನ್ನು ಹುಟ್ಟಿಸಿಕೊಳ್ಳುತ್ತೇವೆ. ಬಹುಷಃ ಎಲ್ಲ ಸಮುದಾಯಗಳು ವರ್ಷಕ್ಕೊಂದು ಜಾತ್ರೆಯೋ, ಊರಹಬ್ಬ ಆಚರಣೆಯೋ ಮುಂತಾಗಿ ರೂಢಿಯಲ್ಲಿಟ್ಟುಕೊಂಡಿರುತ್ತವೆ. ಆಯಾ ಸಮುದಾಯದ ಒಗ್ಗಟ್ಟನ್ನು ರೂಪಿಸುವ ನಿರ್ವಹಿಸುವ ಸಲುವಾಗಿ ಇಂತಹ ಆಚರಣೆಗಳು ಅವಶ್ಯವಾಗಿ ಅಗತ್ಯವಾಗಿವೆ. ಇವುಗಳ ಕೊಡುಗೆಗಳು ಸಮಾಜ ಜೀವನಕ್ಕಷ್ಟೇ ಅಲ್ಲದೆ ಬದುಕಿನ ಮೂಲಭೂತ ಅವಶ್ಯಕತೆಯ ಭದ್ರತೆಯನ್ನು ನಿರೂಪಿಸುವ ಸಾಧನಗಳಾಗಿವೆ. ಆ ಮೂಲಕ ಒಂದು ಗೊತ್ತಾದ ಕಾಲದ ಅವಶ್ಯಕ ಆಹಾರವನ್ನು ಎಲ್ಲರೂ ಸ್ವೀಕರಿಸುವ ಅವಕಾಶವನ್ನು ಕೊಡುತ್ತವೆ. ಮಹೇಶ್ವರಿ ಹಬ್ಬ, ಗ್ರಾಮದೇವತೆ ಜಾತ್ರೆಗಳು, ಊರಹಬ್ಬ, ಮೈಲಾರಲಿಂಗನ ಜಾತ್ರೆ ಮುಂತಾದವುಗಳು ಇದಕ್ಕೆ ಕೆಲವು ಉದಾಹರಣೆಗಳು. ಈ ಎಲ್ಲಾ ಸಂದರ್ಭಗಳಲ್ಲೂ ಸಾಮೂಹಿಕ ಭೋಜನ ವ್ಯವಸ್ಥೆಗಳನ್ನು ಕಾಣಬಹುದು.

**ಪ್ರಸಾದ :** ಯಾವುದೇ ಜೀವಿಗೆ ಆಹಾರವಾಗಬಲ್ಲ ಆಕರ್ಷಕವಾಗಬಲ್ಲ ವಸ್ತುವಿನ ನಿರ್ಮಾಣದ ಸಂದರ್ಭವೇ ಪ್ರಸಾದ. ಸಾಮಾನ್ಯ ಸನ್ನಿವೇಶಗಳಲ್ಲಿ ಪ್ರಸಾದಕ್ಕೆ ಒಂದು ವಿಶೇಷ ಅರ್ಥ ಕಲ್ಪಿಸಿ ಸೇವಿಸುವುದುಂಟು. ಸೇವಿಸುವ ಎಲ್ಲದರಲ್ಲೂ ಪ್ರಸಾದದ ಶ್ರೇಷ್ಠತೆ ಕಾಣುವುದು ನಾವು ನಮ್ಮ ಆಹಾರಕ್ಕೆ ಕೊಡಬಹುದಾದ ಗೌರವ.

ಯಾವುದೇ ಆಹಾರದ ಸೃಷ್ಟಿಗೆ ನಿಸರ್ಗವು ಸಾಕಷ್ಟು ಶಕ್ತಿಯನ್ನು ವ್ಯಯ ಮಾಡಿರುತ್ತದೆ. ಈ ಮಾತು ಸಿದ್ಧಪಡಿಸಿದ ಆಹಾರಕ್ಕೂ ಅನ್ವಯ. ಒಂದು ಆಹಾರ ಉತ್ಪಾದನೆಯ ಹಿಂದೆ ಜೀವಿಗಳ ಲಯಬದ್ಧವಾದ ಜೀವನಕ್ರಮವಿದೆ, ಶ್ರಮವಿದೆ, ಸಾಕಷ್ಟು ಶಕ್ತಿ ಖರ್ಚಾಗಿದೆ, ಕಾಲದ ಆಯಾಮವೂ ಕೂಡ ಇದೆ. ಹೀಗಿರುವಾಗ ತಿನ್ನುವ ತಿನ್ನಬಹುದಾದ ಆಹಾರಕ್ಕೆ ಸಾಕಷ್ಟು ಬೆಲೆ ಇದೆ. ಹಾಗೆಂದೇ ಅದು ತಿನ್ನುವವರ ಜೀವನ ಕ್ರಮವನ್ನೂ ರೂಪಿಸುತ್ತದೆ. ಈ ಬಗೆಯ ಶ್ರೇಷ್ಠ ಹಿನ್ನೆಲೆಯಿಂದ ಪ್ರಸಾದದ ಪರಿಕಲ್ಪನೆ ಹುಟ್ಟಿದೆ. ಅದಕ್ಕೊಂದು ಶ್ರೇಷ್ಠತೆಯ ಧಾರ್ಮಿಕತೆಯ ಇತ್ಯಾದಿ ಕಾರಣಗಳಿದ್ದರೂ ಸಹ ಅದರ ಹಿಂದೆ ಆಹಾರಕ್ಕೆ ಆಹಾರ ಭದ್ರತೆಯ ಶ್ರಮಕ್ಕೆ ಕೊಡಬೇಕಾದ ಗೌರವ ಮತ್ತು ಜವಾಬ್ದಾರಿಗಳ ಸಂಕೇತಗಳಿವೆ.

ಯಾವುದೇ ಸಹಜವಾದ ದೇವಾಲಯಗಳ ಭೇಟಿಗಳು ಪ್ರಸಾದದ ಸ್ವೀಕಾರವಿಲ್ಲದೇ ಕೊನೆಗೊಳ್ಳುವುದಿಲ್ಲ. ಬಹುಷಃ ಎಲ್ಲ ದೇವಾಲಯಗಳು ಆರ್ಥಿಕ ಹಿನ್ನೆಲೆ ಅನುಸಾರವಾಗಿ ಪ್ರಮಾಣದಲ್ಲಿ ವೈವಿಧ್ಯತೆಯುಳ್ಳ ಪ್ರಸಾದ ಕೊಡುವುದನ್ನು ಕಾಣುತ್ತೇವೆ. ಈಗೀಗ ಅನೇಕ ದೇವಾಲಯಗಳಲ್ಲಿ ಆಯಾ ಹೊತ್ತಿನ ಆಹಾರದ ಅಗತ್ಯಕ್ಕನುಗುಣವಾಗಿ ಪ್ರಸಾದ ಕೊಡುವ ಪದ್ಧತಿಗಳು ವಿಕಸನಗೊಂಡಿವೆ. ಮುಂಜಾನೆಯ ಉಪಹಾರದ ಸಂದರ್ಭದಲ್ಲಿ ತಿಂಡಿ, ಮಧ್ಯಾಹ್ನದ ಊಟ, ಸಂಜೆ ತಿಂಡಿ, ರಾತ್ರಿ ಊಟ ಹೀಗೆ ಸ್ವಲ್ಪ ಪ್ರಮಾಣದಲ್ಲಾದರೂ ಹಸಿವು ನೀಗಿಸುವ ಸಾಧ್ಯತೆಯಿಂದ ಮೊದಲ್ಗೊಂಡು ಪೂರ್ಣ ಹೊಟ್ಟೆ ತುಂಬುವಷ್ಟು ಪ್ರಸಾದ ವಿತರಿಸುವ ರೀತಿಗಳನ್ನು ಕಾಣಬಹುದು. ಇವೆಲ್ಲಕ್ಕೂ ಮುಖ್ಯವಾಗಿ ಹಲವಾರು ಕಡೆ ತುಂಬ ಆದರದಿಂದ ಗೌರವದಿಂದ ಪ್ರಸಾದ ಕೊಡುವುದುಂಟು. ಈ ಎಲ್ಲ ಪರಂಪರೆಯು ಒಟ್ಟಾರೆಯಾಗಿ ಅರ್ಥೈಸುವುದು ಏನೆಂದರೆ ಆಹಾರ ಭದ್ರತೆಗೆ ಪ್ರಸಾದವು ಧಾರ್ಮಿಕ ಕಾರಣದ ಮೂಲಕ ಕೊಡುವ ಸಾಮಾಜಿಕ ಕಳಕಳಿ.

### 4.5.3 ಆಹಾರ ಭದ್ರತೆಯ ಲೋಕದೃಷ್ಟಿ

ಆಹಾರ ಭದ್ರತೆಯ ಲೋಕದೃಷ್ಟಿಯು ಮಾನವರ ಬದುಕಿನ ಅರಿವಿನಿಂದ, ವೈವಿಧ್ಯಮಯ ಅನುಭವಗಳಿಂದ ವಿಕಾಸಗೊಂಡದ್ದು. ಮುಖ್ಯವಾಗಿ ಎಲ್ಲರೂ ಜೀವನಾವಶ್ಯಕ ಆಹಾರಕ್ಕೆ ಹಕ್ಕುದಾರರು ಎಂಬ ಪರಿಕಲ್ಪನೆಯಿಂದ ಇದು ಉಗಮವಾಗಿದೆ. ಯಾರೂ ಹಸಿವಿನಿಂದ ಸಾವನ್ನಪ್ಪಬಾರದು ಎಂಬುದೂ ಇದರ ಭಾಗವೇ ಆಗಿದೆ. ಲೋಕದೃಷ್ಟಿಯು ತನ್ನ ಸುತ್ತಲ ಪರಿಸರ ನಿಸರ್ಗ ಅಲ್ಲದೆ, ತನ್ನ ಸಾಂಸ್ಕೃತಿಕ ಪರಂಪರೆಗಳಿಂದಲೂ ದಿನೇ ದಿನೇ ಬೆಳೆಯುತ್ತಾ ಬದಲಾಗುತ್ತಾ ಸಾಗುತ್ತಿದೆ. ಆಹಾರ ಭದ್ರತೆಯು ಒಂದು ಕಾಲದಲ್ಲಿ ಆಹಾರ ಪಡೆಯುವುದಕ್ಕೆ ಅಥವಾ ಅದರ ಸಾಧ್ಯತೆಗೆ

ಸೀಮಿತಗೊಂಡಿದ್ದು, ಈಗ ಆಹಾರ ಸಾರ್ವಭೌಮತ್ವದ ಕಡೆಗೂ ತನ್ನ ಅರಿವನ್ನು ವಿಸ್ತರಿಸಿದೆ. ಅಂದರೆ ಆಹಾರಕ್ಕೆ ಮಾನವರಿಗೆ ಪಡೆಯುವ ಹಕ್ಕಾಗಿ ಅದನ್ನು ವಿವೇಚಿಸಿದೆ.

ಆಹಾರ ಭದ್ರತೆಯ ಲೋಕದೃಷ್ಟಿಯು ಮಾನವರ ಆಹಾರದ ಕರಿತಾದ ಸಂಕೀರ್ಣತೆಗಳಿಂದ ಅನೇಕ ಆಯಾಮಗಳನ್ನು ಒಳಗೊಳ್ಳುತ್ತಾ ವಿಶಾಲವಾಗುತ್ತಾ ಬೆಳೆಯುತ್ತಿದೆ. ಆದರೆ, ವಸ್ತುಶಃ ಹೇಗಾದರೂ ಹೊಟ್ಟೆ ತುಂಬಿಸುವ ಜವಾಬ್ದಾರಿಯ ಒಳಗೇ ಕಾರ್ಯನಿರ್ವಹಿತ್ತಾ ಇರುತ್ತದೆ. ಲೋಕದೃಷ್ಟಿಯಲ್ಲಿ ಆಹಾರ ಭದ್ರತೆಗಾಗಿ ಜೀವನ ಭದ್ರತೆ, ವೃತ್ತಿ ಭದ್ರತೆ ಇತ್ಯಾದಿಗಳ ಮೂಲಕವೂ ಹುಡುಕಾಟ ನಡದೇ ಇರುವುದು. ಹೊಟ್ಟೆ ಪಾಡಿನ ಹುಡುಕಾಟವು ಸಹಜ ಜೀವಿ ಪ್ರವೃತ್ತಿಯಾಗಿದ್ದು ಲೋಕದೃಷ್ಟಿಯಲ್ಲಿ ಒಂದು ಕಡ್ಡಾಯ ಪ್ರವೃತ್ತಿಯಂತೆ ಬೆಳೆದಿದೆ. ಅಂದರೆ ಅತ್ಯಂತ ಕನಿಷ್ಟ ಅವಶ್ಯಕತೆಯಾದ ಆ ದಿನದ ಹಸಿವನ್ನು ಹಿಂಗಿಸುವ ಜವಾಬ್ದಾರಿಯಲ್ಲಿ ಲೋಕದೃಷ್ಟಿಯು ಉಗಮಗೊಂಡು ಸಾಧ್ಯವಾದಷ್ಟು ಕಾಲದ ಹಿತದ ಆಶಯವನ್ನು ಹೊಂದಿದೆ. ಇದರಿಂದಾಗಿಯೇ ಬದುಕಿನ ಮುಂದಿನ ದಿನಗಳ ಆಹಾರದ ಗಳಿಕೆಯ ವಿಶ್ವಾಸವನ್ನು ಆಪೇಕ್ಷಿಸುತ್ತದೆ. ಇವುಗಳ ನಿರೀಕ್ಷೆಯಲ್ಲಿಯೇ ಲೋಕದೃಷ್ಟಿಯ ಆಹಾರದ ದೊರಕುವಿಕೆ ವಿಸ್ತೃತ ಆಸೆಯನ್ನು ಹೊಂದಿದೆ.

ಕಾಯಕ, ವೃತ್ತಿ, ದುಡಿಮೆ ಇವುಗಳೆಲ್ಲವೂ ಆಹಾರ ಭದ್ರತೆಯ ಲೋಕದೃಷ್ಟಿಯ ಉತ್ಪನ್ನಗಳಾಗಿವೆ. ಆ ಕಾರಣದಿಂದ ಹುಟ್ಟಿಕೊಂಡ ಬದುಕಿನ ಸಾರ್ಥಕಗಳು. ಆಹಾರದ ಫಲಪ್ರದ ಹುಡುಕಾಟಕ್ಕೆ ನೆರವಿನ ಸಾಧ್ಯತೆಯನ್ನು ಒದಗಿಸುವ ಮೂಲಗಳು. ವೃತ್ತಿ ವಿಕಾಸಗಳೂ ಮಾನವರ ಬದುಕಿನ ವಿವಿಧ ಅವಶ್ಯಕತೆಗಳ ಪೂರೈಸುವ ವ್ಯವಸ್ಥೆಗಳು. ಈ ವೃತ್ತಿಗಳೂ ಒಂದನ್ನೊಂದು ಆಶ್ರಯಿಸುತ್ತಾ ಅಥವಾ ಪೋಷಿಸುತ್ತಾ ಇಡೀ ಮನುಕುಲದ ಬದುಕನ್ನು ನಿಭಾಯಿಸುತ್ತವೆ. ಹನ್ನೆರಡನೇ ಶತಮಾನದ ಕಾಯಕ ದಾಸೋಹ ಚಿಂತನೆಗಳು ದೈನಂದಿನ ಆಹಾರ ಪೂರೈಕೆಯೇ–ಯಾವುದಾದರೂ ಕಾಯಕವನ್ನು ಆಶ್ರಯಿಸುವ ಸಂಗತಿಯನ್ನು ಪ್ರಚುರ ಪಡಿಸಿವೆ. ಒಂದು ಕಾಯಕದ/ವೃತ್ತಿಯ ಮೂಲಕವೇ ಹಸಿವೆಗೆ ಒಂದು ಸಾಧ್ಯತೆಯನ್ನು ಕೊಟ್ಟಿದೆ.

ಆಹಾರ ಭದ್ರತೆಯ ಲೋಕದೃಷ್ಟಿಯು ಹೆಚ್ಚು ಚಲನಶೀಲವಾಗಿದ್ದು, ಕೆಲವು ಆಡಳಿತಾತ್ಮಕ/ರಾಜಕೀಯ ಚೌಕಟ್ಟುಗಳನ್ನು ಒಳಗೊಂಡಿದೆ. ಅಂದರೆ, ಲೋಕದೃಷ್ಟಿಯ ಅರಿವು ಹೆಚ್ಚು ಸ್ಥಿರಗೊಂಡಂತೆಲ್ಲಾ ಆಹಾರದ ಹಂಚಿಕೆ, ನೀಡಿಕೆ, ಇತ್ಯಾದಿಗಳ ಮೇಲೆ ಪ್ರಭಾವ ಬೀರತೊಡಗಿದೆ. ಇದರ ಫಲವಾಗಿಯೇ ಇಂದು ಮುಂದುವರೆದ ರಾಷ್ಟ್ರಗಳಲ್ಲಿ ಅವಶ್ಯಕತೆಗಳಲ್ಲಿ ಮುಖ್ಯವಾದ ಆಹಾರವನ್ನು ಪಡೆಯುವ ಕನಿಷ್ಠ ಸಾಮರ್ಥ್ಯವನ್ನು ಪ್ರತೀ ಪ್ರಜೆಯೂ ಹೊಂದಿರುವಂತೆ ನಿರೀಕ್ಷಿಸಲಾಗುವುದು. ಅದಕ್ಕೆ ಅಗತ್ಯ ಕ್ರಮಗಳನ್ನು ಕೈಗೊಳ್ಳುವರು. ಮುಂದುವರೆಯುತ್ತಿರುವಂತಹ ದೇಶಗಳಾದ ಭಾರತದಲ್ಲೂ ಸಹ ಆಹಾರ ಹಂಚಿಕೆಗೆ ಸಮಗ್ರ ಕ್ರಮಗಳನ್ನು ಕೈಗೊಳ್ಳುವಲ್ಲಿ ನಿರತವಾಗಿದ್ದನ್ನು ಕಾಣಬಹುದು. ಹಸಿವಿನ ಜಾಗತಿಕ ನಿವಾರಣೆಯ ಕ್ರಮಗಳನ್ನು ಕೈಗೊಳ್ಳುವಲ್ಲಿಯೂ ಆಹಾರ ಭದ್ರತೆಯ ಲೋಕದೃಷ್ಟಿಯು ಪರಿಣಾಮಕಾರಿಯಾಗಿ ಪ್ರಭಾವಿಸಬಲ್ಲದು.

ಆಹಾರ ಭದ್ರತೆಯ ಲೋಕದೃಷ್ಟಿಯು ವ್ಯಕ್ತಿ ಕೇಂದ್ರಿತವಾದುದು. ನಿಸರ್ಗದೃಷ್ಟಿಯು ಜೀವಿಕೇಂದ್ರಿತವಾದರೆ, ಪಾರಂಪರಿಕ ದೃಷ್ಟಿಯು ಸಮುದಾಯ ಕೇಂದ್ರಿತವಾದುದು. ಆದಾಗ್ಯೂ ಲೋಕದೃಷ್ಟಿಯ ವಿಕಾಸವು ಇತರೆ ಎರಡೂ ದೃಷ್ಟಿಕೋನಗಳಿಂದ ಮಾನವರ ಸುಸ್ಥಿರತೆಯನ್ನು ಗಮನಿಸಿಯೇ ಉಂಟಾಗಿದೆ. ಇದರ ಜತೆಗೆ ಮಾನವರ ಆಧುನಿಕತೆಯೆಡೆಗಿನ ಒಲವನ್ನು ಸೇರಿಸಿಕೊಂಡು ವಿಕಾಸಗೊಳ್ಳುತ್ತಿದೆ. ಹಾಗಾಗಿ ಅದು ಚಲನಶೀಲವಾಗಿದ್ದು, ಬದಲಾವಣೆಗಳನ್ನು ತನ್ನೊಳಗೇ ಸೇರಿಸಿಕೊಂಡು ಮುನ್ನಡೆಯುತ್ತಿರುತ್ತದೆ.

ಆಹಾರ ಭದ್ರತೆಯ ಈ ವೈವಿಧ್ಯಮಯ ದೃಷ್ಟಿಕೋನವು ಮಾನವ ಸಂಬಂಧಿ ಆಚರಣೆಗಳಲ್ಲಿ ಉಳಿದಿವೆ ಎಂದ ಮೇಲೆ ಇವೇ ಸಂಸ್ಕೃತಿಯ ಬೇರುಗಳಿಂದಲೂ ನೆರವನ್ನು ಪಡೆದೇ ಇವೆ. ಹಾಗಾಗಿ ಇವುಗಳ ಸ್ವರೂಪಗಳನ್ನು ಬುಡಕಟ್ಟು ಸಂಪ್ರದಾಯಗಳಲ್ಲಿ ವಿವಿಧ ಬಗೆಯ ಆಸಕ್ತಿಗಳಲ್ಲಿ ಕಾನುತ್ತೇವೆ. ಇವು ಅವರ ನಿಸರ್ಗಾರಾಧನೆಯ ತತ್ವದಲ್ಲೇ, ಅಥವಾ ಅವರ ಆಹಾರ ಸಂಗ್ರಹಣೆಯಲ್ಲಿನ, ಕೊಯ್ಲಿನಲ್ಲಿನ ಉಳಿಕೆಯ ಹಿನ್ನೆಲೆಯಲ್ಲಿಯೋ ಅಥವಾ ಹಂಚುವಿಕೆಯಲ್ಲಿ ಅವರ ಸರ್ವ ಜೀವಿ ಸಂಕುಲದ ಭಾಗಗಳನ್ನು ನೋಡುವ ಕ್ರಮದಲ್ಲೋ ಪರಿಭಾವಿಸಬಹುದಾಗಿದೆ. ಒಟ್ಟಾರೆ ಬುಡಕಟ್ಟು ಸಮುದಾಯಗಳನ್ನು ನಾವು ಬುಡಕಟ್ಟುಗಳ ನೈಜ ಹಿನ್ನೆಲೆಯಲ್ಲಿಲ್ಲದ ಆಲೋಚನಾ ಕ್ರಮದಿಂದ ವಿವೇಚುಸುವುದರಿಂದ ಅವುಗಳ ಸಾಧ್ಯತೆಗಳನ್ನು ನಮ್ಮ ಅನುಭವಕ್ಕೆ ಸಮೀಕರಿಸುತ್ತೇವೆ ಅಷ್ಟೆ.

### 4.6 ಆಹಾರ ಭದ್ರತೆಯ ಸಮಕಾಲೀನತೆ –ವಿಕಾಸ ಹಾಗೂ ವಸ್ತುಸ್ಥಿತಿ

ಸಹಸ್ರಮಾನದ ಗುರಿಯ ಪ್ರಕಾರ 2015ರ ವೇಳೆಗೆ ಹಸಿವಿನಿಂದ ಬಳುಲುತ್ತಿರುವವರ ಸಂಖ್ಯೆಯನ್ನು ಈಗ ಇರುವ ಮಟ್ಟದಿಂದ ಅರ್ಧಕ್ಕೆ ಇಳಿಸಬೇಕು. ವಿಶ್ವದಲ್ಲಿ 96.3 ಕೋಟಿ ಜನ ಆಹಾರದ ಆಭಾವವನ್ನು ಎದುರಿಸುತ್ತಿದ್ದಾರೆ. ಈ ಪೈಕಿ ಪ್ರತಿ ನಾಲ್ವರಲ್ಲಿ ಒಬ್ಬ ಭಾರತೀಯ! ಅಂದರೆ ದೇಶದಲ್ಲಿ ಶೇಕಡ 21 ಮಂದಿ ಅಪೌಷ್ಟಿಕತೆಯಿಂದ ಬಳುತ್ತಿದ್ದಾರೆ ಎನ್ನುತ್ತದೆ ವಿಶ್ವ ಸಂಸ್ಥೆಯ ವರದಿ. ಇದಕ್ಕೆ ಪರಿಹಾರೋಪಾಯವಾಗಿ ಪ್ರಮುಖವಾಗಿ ಎರಡು ವಿಧದ ಕಾರ್ಯತಂತ್ರ ಅನುಸರಿಸಬೇಕು ಅಂದರೆ ಆಹಾರ ಉತ್ಪಾದನೆ/ಪೂರೈಕೆಯನ್ನು ಹೆಚ್ಚಿಸುವುದು. ಜೊತೆಗೆ ಹಸಿವಿನಿಂದ ಬಳಲುತ್ತಿರುವವರಿಗೆ ಆಹಾರ ಕೈಗೆಟುಕುವಂತೆ ನೋಡಿಕೊಳ್ಳಬೇಕು. ಭಾರತ ಈ ನಿಟ್ಟಿನಲ್ಲಿ ಅನೇಕ ಯೋಜನೆಗಳನ್ನು ಹಮ್ಮಿಕೊಳ್ಳುತ್ತಾ ಬಂದಿದೆ. ಉತ್ಪಾದನೆಯನ್ನು ಹೆಚ್ಚಿಸುವುದಕ್ಕಾಗಿ ಕೃಷಿ ಸಂಶೋಧನೆಗಳಿಗೆ ಒತ್ತು ನೀಡಿರುವುದರ ಫಲವಾಗಿ ಅಧಿಕ ಇಳುವರಿ ನೀಡುವ ತಳಿಗಳ ಆಭಿವೃದ್ಧಿ, ಸುಧಾರಿತ ಬೇಸಾಯ ಕ್ರಮ, ನೀರಾವರಿ ಯೋಜನೆ, ಸಮಗ್ರ ಪೋಷಕಾಂಶಗಳ ನಿರ್ವಹಣೆ, ರಾಸಾಯನಿಕ ಗೊಬ್ಬರಗಳ ಬಳಕೆ ಮುಂತಾದವುಗಳು ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ರೂಪಿಸಿದ ಕಾರ್ಯ ಯೋಜನೆಗಳಾಗಿವೆ. ಉತ್ಪಾದನೆಯ ಪ್ರಾದೇಶಿಕ ಅಸಮತೋಲನ ನಿವಾರಣೆಗಾಗಿ ಸಾರ್ವಜನಿಕ ಆಹಾರ ಸಂಗ್ರಹಣೆ, ಸಂಸ್ಕರಣೆ ಮತ್ತು ಹಂಚಿಕೆಗೆ ಯೋಜನೆಗಳು ಜಾರಿಗೆ ಬಂದವು. ಕೃಷಿಕರಿಗೆ ಹೊಸ ಹೊಸ ತಂತ್ರಜ್ಞಾನಗಳ ಪರಿಚಯಕ್ಕಾಗಿ ವಿಸ್ತರಣಾ ಕಾರ್ಯಕ್ರಮಗಳ ಅನುಷ್ಠಾನ ಕೃಷಿ ಇಲಾಖೆಗಳ ಮೂಲಕ ತರಬೇತಿ ಮತ್ತು ಸೌಲಭ್ಯಗಳು ಅಲ್ಲದೆ ಉತ್ಪಾದಿಸಿದ ಪದಾರ್ಥಗಳ ಕೊಂಡುಕೊಳ್ಳುವ ಸಾಮರ್ಥ್ಯ ಹೆಚ್ಚಿಸಲು ಉದ್ಯೋಗಾವಕಾಶ ನೀಡುವ ಯೋಜನೆಗಳು ಹೀಗೆ

ಆಹಾರ ಅಭದ್ರತೆ ತೊಡೆದು ಹಾಕಲು ಹತ್ತಾರು ಯೋಜನೆಗಳನ್ನು ರೂಪಿಸಿದ್ದರೂ ಈ ಯೋಜನೆಗಳು ಸಂಪೂರ್ಣವಾಗಿ ಯಶಸ್ವಿಯಾಗದೆ ಆಹಾರ ಅಭದ್ರತೆಯನ್ನು ಸಂಪೂರ್ಣ ತೊಡೆದು ಹಾಕುವಲ್ಲಿ ಮತ್ತಷ್ಟು ಕ್ರಿಯಾಶೀಲವಾಗಬೇಕಿದೆ. ಈ ನಿಟ್ಟಿನಲ್ಲಿ ಇದುವರೆಗೂ ನೆಡೆದು ಬಂದ ಪಂಷವಾರ್ಷಿಕ ಯೋಜನೆಗಳಲ್ಲಿ ಆಹಾರ ಭದ್ರತೆಯ ಯೋಜನೆಗಳ ಆಕರಗಳ ಮಾಹಿತಿಯನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ.

**ಆಹಾರ ಭದ್ರತೆಗಾಗಿ ಇರುವ ಸರಕಾರದ ಯೋಜನೆಗಳ ವಿಕಾಸ ಹಾಗೂ ವಸ್ತುಸ್ಥಿತಿ :** ಅರಿವಿನ ವ್ಯಾಪ್ತಿಗೆ ಬಂದಂತಹ ಸಮಾಜದಲ್ಲಿ ಹಸಿವು ಮತ್ತು ಬಡತನ ಇವೆರಡು ಬಹಳ ಅತೀ ದೊಡ್ಡ ಸಮಸ್ಯೆಗಳು. ನಮ್ಮ ದೇಶ ಸ್ವತಂತ್ರವಾದ ಕಾಲಕ್ಕೆ ಇವೇ ಮುಂಚೂಣಿಯಲ್ಲಿದ್ದಂತಹ ಅನಿವಾರ್ಯತೆಗಳಾಗಿದ್ದವು. ಆಗ ದೇಶ ಅನುಭವಿಸಿದ ಬರಗಾಲದ ಪರಿಣಾಮವಾಗಿ ಉಂಟಾದ ಹಸಿವಿನ ನಿರಂತರತೆ ಜತೆಗೆ ಕೊಳ್ಳುವ ಸಾಮರ್ಥ್ಯ ಇಲ್ಲದಂತಹ ಬಡತನ ಜನತೆಯನ್ನು ಕಾಡುತ್ತಿತ್ತು. ಅಂದಿನಿಂದ ಪ್ರಸ್ತುತ ಸಂದರ್ಭದವರೆಗೂ ಹಸಿವು ಮತ್ತು ಬಡತನದ ವಿರುದ್ಧ ಹೋರಾಟದ ಬಳಕೆಗೆ ಯೋಗ್ಯವಾದ ಅಸ್ತ್ರದ ಹುಡುಕಾಟ ನಿರಂತರವಾಗಿ ನಡೆದೇ ಇದೆ. ದೇಶದ ಜನತೆಯ ಹಸಿವಿನ ನಿವಾರಣೆಗೆ ಸ್ವಾತಂತ್ರ್ಯ ಬಂದಾಗಿನಿಂದಲೂ ವಿವಿಧ ಕಾರ್ಯಕ್ರಮಗಳ ಮೂಲಕ ಆಹಾರ ಭದ್ರತೆಯ ಯೋಜನೆಗಳನ್ನು ರೂಪಿಸುತ್ತಾ ಬಂದಿದೆ. ಈ ಯೋಜನೆಗಳ ಅಥವಾ ಈ ಹುಡುಕಾಟದ ಸಮಗ್ರ ಅಧ್ಯಯನದ ಮೂಲಕ ಪ್ರಸಕ್ತ ಸಮಯದ ವಸ್ತುನಿಷ್ಠ ಅವಶ್ಯಕದ ಬಗ್ಗೆ ಬೆಳಕು ಕಾಣುವುದು ಇಲ್ಲಿನ ಉದ್ದೇಶ.

ಬರಗಾಲದಿಂದ ನೋವುಂಡ ನೆಲಕ್ಕೆ ನೀರೆರೆಯುವ ಕೆಲಸ ಮೊದಲ ಕಾರ್ಯಕ್ರಮವಾಗಿ ಆಲೋಚನೆಯಲ್ಲಿ ಬಂದಿತು. ಅದರ ಪರಿಣಾಮವಾಗಿಯೇ ಹಸಿರು ಕ್ರಾಂತಿಯ ಯೋಜನೆಯಲ್ಲಿ ನೀರಾವರಿ ಪದ್ದತಿಗಳಿಗೆ ಆಕರಗಳಿಗೆ ಆದ್ಯತೆ ಕೊಡಲಾಯಿತು. ಹಾಗೆಯೇ ಬರಗಾಲ ಕಲಿಸಿದ ಪಾಠದಿಂದಾಗಿ ಆಹಾರ ಸಂರಕ್ಷಣೆ ಹಾಗೂ ಉಳಿಕೆಯ ಕಡೆಗೂ ಗಮನ ಹರಿಸುವುದು ಅವಶ್ಯಕವಾಗಿದ್ದಿತು. ಅಂದಂತೆ, ನಿಶ್ಚಿತ ನೀರುಣಿಸುವ ಸಂದರ್ಭ ಮತ್ತು ಆಹಾರ ದಾಸ್ತಾನುಗಳ ಕಡೆ ಗಮನಗಳು ರೂಪಗೊಂಡವು. ಇದರ ಫಲವಾಗಿಯೇ ನೀರಾವರಿ ಯೋಜನೆಗಳು, ದಾಸ್ತಾನು ನಿಗಮಗಳು, ಸಾರ್ವಜನಿಕ ವಿತರಣಾ ವ್ಯವಸ್ಥೆಗಳು ಕಾರ್ಯಯೋಜನೆಯ ವ್ಯಾಪ್ತಿಗೆ ಬಂದವು.

ಯಾವುದೇ ರಾಷ್ಟ್ರದ ಸ್ವತಂತ್ರ ಕಲ್ಪನೆ ಎಂಬುದು ಅದರ ಸರ್ವಾಂಗೀಣ ಅವಶ್ಯಕತೆಗಳನ್ನು ಸ್ವಾವಲಂಭಿಯಾಗಿ ನಿರೂಪಿಸುವುದೇ ಆಗಿದೆ. ಇದು ಭಾರತಕ್ಕೂ ಹೊಸತಲ್ಲ. ಸ್ವತಂತ್ರ ಬಂದ ಸಮಯದಿಂದಲೂ ಮುಂದಿನ ಸುಧಿನಗಳಿಗೆ ಯೋಜನೆಗಳನ್ನು ರೂಪಿಸುವ ಪರಿಪಾಠ ಸಹಜವಾದದ್ದೆ. ಹೀಗೆ ಆರಂಭವಾದ ಪಂಚವಾರ್ಷಿಕ ಯೋಜನೆಗಳೆಲ್ಲವೂ ಆಹಾರ ಮತ್ತು ಆಹಾರ ಸಂಬಂಧಿತ ವಿಚಾರಗಳನ್ನು ಪ್ರಮುಖವಾಗಿ ಒಳಗೊಂಡಿದ್ದವು. ಉತ್ಪಾದನೆಗಳ ಹೆಚ್ಚಿಸುವ ಅನಿವಾರ್ಯಗಳು ಬೆಳೆಯುತ್ತಿರುವ ಜನಸಂಖ್ಯೆಯ ಜತೆಗೆ ಒಂದು ರೀತಿಯಲ್ಲಿ ಪೈಪೋಟಿಗಿಳಿದಂತಾದವು. ಮಾಲ್ತೂಸ್ ಕಾಲದಿಂದಲೂ ಎಲ್ಲ ಅಭಿವೃದ್ಧಿ ಚಿಂತಕರು ಜನಸಂಖ್ಯೆ

ಮತ್ತು ಸಂಪನ್ಮೂಲಗಳ ನಡುವಿನ ಸಂಘರ್ಷಗಳ ಅರಿವಿನಿಂದಲೇ ತಮ್ಮ ಆಲೋಚನೆಗಳನ್ನು ಕಾರ್ಯಯೋಜನೆಗಳನ್ನು ರೂಪಿಸಿದ್ದಾರೆ. ಇಂತಹ ಸಂದರ್ಭಗಳು ಕೂಡ ಭಾರತೀಯರನ್ನು ದಶಕಗಳ ಕಾಲ ನಿರಂತರವಾಗಿ ಕಾಡುತ್ತಲೇ ಇವೆ. ಎಷ್ಟೆಲ್ಲಾ ಸಮಗ್ರ ಚಿಂತನೆಗಳ ನಡುವೆಯೂ ನಮ್ಮ ಸ್ಥಳೀಯ ಅನುಭವಗಳ ಕೊರತೆ ಮತ್ತು ಅಸಹಜತೆಗಳಿಂದ ಒಂದು ಪರಿಪೂರ್ಣ ಪರಿಹಾರವನ್ನು ತಲುಪಲು ಸಾಧ್ಯವಾಗಿಲ್ಲ. ಈ ಪರಿಪೂರ್ಣ ಪರಿಹಾರ ಸಹ ಪರಿಪೂರ್ಣತೆಯನ್ನು ತಲುಪುವಷ್ಟರಲ್ಲಿ ಹೊಸ ಸಮಸ್ಯೆಗಳನ್ನು ಎದುರಿಸುವಂತಹ ಸಂದರ್ಭಗಳು ಕಾಣಬರುತ್ತವೆ. ಹಾಗಾಗಿ ಈ ಆಹಾರ ಭದ್ರತೆ ಕಡೆಗೆ ಯೋಚಿಸತೊಡಗಿದ ಮುಂದೆಯೂ ವಿವಿಧ ಪೋಷಕಾಂಶಗಳ ಮತ್ತು ಅವುಗಳ ವಿವಿಧ ಸಂಯುಕ್ತಗಳ ನಿರ್ಧಾರ ಕುರಿತಂತ ಗುರಿಗಳೇ ಅತೀ ಚಲನಾಶೀಲವಾಗಿರುತ್ತವೆ. ಆದ್ದರಿಂದ ಒಂದನ್ನು ತಲುಪುವಷ್ಟರಲ್ಲಿ ಹೊಸ ಸಮಸ್ಯೆ ಎದುರಿಸುವಂತಹ ಸಂದರ್ಭವೇ ಹೆಚ್ಚು.

**ಸ್ವಾತಂತ್ರ್ಯ ನಂತರದಿಂದ ಇಂದಿನವರೆಗೆ ಆಹಾರ ಮತ್ತು ಪೌಷ್ಟಿಕತೆ ಕುರಿತಾಗಿ ಅನುಷ್ಠಾನಗೊಂಡ ಕಾರ್ಯಕ್ರಮಗಳನ್ನು ಈ ಕೆಳಗಿನಂತೆ ವಿಂಗಡಿಸಲಾಗಿದೆ.**

- ಆಹಾರ ಉತ್ಪಾದನೆಯನ್ನೇ ಹೆಚ್ಚು ಮಾಡುವಂತಹ ಯೋಜನೆಗಳು
- ಉತ್ಪಾದನೆಯ ಗುಣಮಟ್ಟ ಹೆಚ್ಚಿಸುವಂತಹ ಯೋಜನೆಗಳು
- ಉತ್ಪಾದನೆಯ ಹಂಚಿಕೆ ಮತ್ತು ಅವಶ್ಯಕತೆಯುಳ್ಳವರಿಗೆ ತಲುಪಿಸುವ ಯೋಜನೆಗಳು
- ಉತ್ಪಾದನೆಗಳ ಸಂರಕ್ಷಣೆಗಾಗಿರುವ ಯೋಜನೆಗಳು
- ಎಲ್ಲ ಉತ್ಪಾದನೆಗಳನ್ನು ಇಡೀ ಜನತೆಯ ಸಮಗ್ರ ವಿಕಾಸಕ್ಕೆ ಅಳವಡಿಸುವುದು

**ಆಹಾರ ಉತ್ಪಾದನೆ ಹಾಗೂ ಆಹಾರದ ಗುಣಮಟ್ಟವನ್ನು ಹೆಚ್ಚಿಸುವ ಯೋಜನೆಗಳು :** ದೇಶದ ಅಭಿವೃದ್ಧಿಯಲ್ಲಿ ಪ್ರಗತಿ ಯೋಜನೆಗಳು ಆರಂಭವಾದಾಗಿನಿಂದಲೂ ಆಹಾರ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಗುರಿ ಇಟ್ಟಿದೆ. ಹೆಚ್ಚುತ್ತಿರುವ ಜನಸಂಖ್ಯೆಗೆ ಹೆಚ್ಚಿನ ಉತ್ಪಾದನೆಯಿಂದ ಅವರ ಹಸಿವು ನೀಗುವ ಕಾರ್ಯಕ್ರಮಗಳನ್ನು ಸರ್ಕಾರವು ಹಮ್ಮಿಕೊಂಡಿದೆ. ಸ್ವತಂತ್ರ ಭಾರತದ ಮೊದಲ ದಿನಗಳಲ್ಲಿ ಉತ್ಪಾದನಾ ಗುರಿ ಹೆಚ್ಚಳದಲ್ಲಿ ಹೆಚ್ಚುವರಿ ಭೂಮಿಯನ್ನು ಕೃಷಿಗೆ ಅಳವಡಿಸುವುದನ್ನು ಒಪ್ಪಿಕೊಳ್ಳಲಾಯಿತು. ಇದು ಕೃಷಿ ಭೂಮಿಯ ಒತ್ತುವರಿ ಹೆಸರಿನಲ್ಲಿ ನಿರಂತರವಾಗಿ ನಡೆಯುತ್ತಲೇ ಬಂದಿತು. ಒಂದು ಹಂತದಲ್ಲಿ ಬಗರ್-ಹುಕುಂ ಸಾಗುವಳಿಯು ಇದರ ಫಲವೆಂಬಂತೆ ನಡೆದುಬಂತು. ಇವೆಲ್ಲವೂ ಯಾವುದೇ ಯೋಜನೆ ಹೆಸರಿಲ್ಲದೆಯೂ ಉತ್ಪಾದನೆ ಹೆಚ್ಚಲು ಕಾರಣಗಳಾಗಿವೆ. ಇನ್ನೂ ಆರಂಭಿಕ ದಿನಗಳಲ್ಲಿ ರಾಜರುಗಳ ಆಡಳಿತಾವಧಿಯ ಇತಿಹಾಸದಲ್ಲಿ "ಕಾಡನ್ನು ಕಡಿದು ನಾಡನ್ನಾಗಿಸೋಣ" ಎನ್ನುವಂತಹ ದಾಖಲೆಗಳನ್ನೂ ಕಾಣುತ್ತೇವೆ. ಪರಿಸರ ಪ್ರಜ್ಞೆ ಎಂಬುದು ರೂಪುಗೊಳ್ಳದಿದ್ದ ದಿನಗಳಲ್ಲಿ ಇದು ಕೂಡ ಅಭಿವೃದ್ಧಿಯ ಕಾರ್ಯಕ್ರಮವಾಗಿದ್ದಲ್ಲಿ ಆಶ್ಚರ್ಯವಿಲ್ಲ. ವೈಜ್ಞಾನಿಕವಾಗಿ ಪ್ರಕೃತಿಯನ್ನು ಅರ್ಥೈಸುತ್ತಾ ಹೋದಂತೆ ಕೃಷಿಯ ಉತ್ಪಾದನೆಗೆ ಅಧಿಕ ಇಳುವರಿಗೆ ಚಾಲನೆಗಳು ಸಿಗುತ್ತಾ ಬಂದಿವೆ. ಹೆಚ್ಚು ಇಳುವರಿ, ಹೆಚ್ಚು ಉತ್ಪಾದನೆ ಎನ್ನುವ

ಕಾರ್ಯಕ್ರಮಗಳಲ್ಲಿ ಹೆಚ್ಚು ಕೃಷಿ ಅವಶ್ಯಕತೆಗಳಕಡೆಗೆ ಗಮನ ಕೊಟ್ಟಿದೆ. ಇದರ ಫಲವಾಗಿಯೇ ರಸಗೊಬ್ಬರಗಳೆ ಮುಂತಾದ ರಾಸಾಯನಿಕ ಪರಿಕರಗಳ ಬಳಕೆಯು ಕೃಷಿಯಲ್ಲಿ ಅನಿವಾರ್ಯ ಎನಿಸುವಷ್ಟು ನಡೆದು ಬಂದಿವೆ. ಈ ಹಿನ್ನೆಲೆಯಲ್ಲಿ ಕೃಷಿ ಅಗತ್ಯಗಳ ಕೈಗಾರಿಕೀಕರಣಕ್ಕೆ ಒತ್ತುಕೊಡುವಂತಹ ಸೌಲತ್ತುಗಳ ನಿರ್ಮಾಣದಲ್ಲಿ ಸರ್ಕಾರವು ರೀತಿ ರಿವಾಜುಗಳನ್ನು ರೂಪಿಸಿತು. ಇದರ ಫಲವಾಗಿ ರಸಾಯನಿಕ ಉತ್ಪನ್ನಗಳ ಸ್ಥಾವರಗಳು ಕಾರ್ಯೋನ್ಮುಖವಾದವು.

ಈ ಹಿನ್ನೆಲೆಯಲ್ಲಿನ ಸಾಧ್ಯತೆಗಳನ್ನು ಅನುವುಗೊಳಿಸಲು ಒಂದನ್ನೊಂದು ಬೆಂಬಲಿಸುವಂತಹ ಹಲವಾರು ಯೋಜನೆಗಳು ಆರಂಭಗೊಂಡವು ಇವೆಲ್ಲವುಗಳ ಸಾಮಾನ್ಯ ನಿಲುವು ಕೃಷಿ ಉತ್ಪನ್ನವನ್ನು ಹೆಚ್ಚಿಸುವುದೇ ಆಗಿತ್ತು. ಇವುಗಳಲ್ಲಿ ಪ್ರಮುಖವಾದವುಗಳನ್ನು ಈ ಕೆಳಗೆ ಚರ್ಚಿಸಲಾಗಿದೆ.

**ನೀರಾವರಿ ಯೋಜನೆಗಳು :** ಹೆಚ್ಚಿನ ಇಳುವರಿ–ಆಸಕ್ತಿಗೆ ಕೃಷಿ ಪರಿಸರದಲ್ಲಿ ಹೆಚ್ಚಿನ ಆಧ್ಯತೆಯಿಂದ ಬೃಹತ್ ಯೋಜನೆಗಳ ರೂಪದಲ್ಲಿ ಜಾರಿಗೆ ಬಂದವುಗಳಲ್ಲಿ ನೀರಾರಿ ಯೋಜನೆಗಳು ಪ್ರಮುಖವಾದವು. ನಮ್ಮ ದೇಶದಲ್ಲಿ ಉತ್ತರ ಭಾರತದಲ್ಲಿ ಮೊದಲು ಬೃಹತ್ ನೀರಾವರಿ ಯೋಜನೆಗಳು ಆರಂಭಗೊಂಡವು. ಭಾಕ್ರಾ–ಸಟ್ಲೇಜ್ ನದಿಗೆ ಅಡ್ಡಲಾಗಿ ಕಟ್ಟಿರುವ ಭಾಕ್ರಾ ಆಣೆಕಟ್ಟನ್ನು ಉದ್ಘಾಟಿಸುವಾಗ ಅಂದಿನ ಪ್ರಧಾನ ಮಂತ್ರಿಗಳಾದ ಜವಾಹರ ಲಾಲ್ ನೆಹರುರವರು ನೀರಾವರಿ ಯೋಜನೆಗಳನ್ನು "ರಾಷ್ಟ್ರದ ದೇವಾಲಯಗಳು" ಎಂದು ಕರೆದಿದ್ದರು. ನಂತರದ ಬೆಳವಣಿಗೆಯಲ್ಲಿ ನೂರಾರು ಈ ಬಗೆಯ ಬೃಹತ್ ನೀರಾವರಿ ಯೋಜನೆಗಳು ಕಾರ್ಯಾರಂಭಗೊಂಡವು.

ಕರ್ನಾಟಕ ರಾಜ್ಯದಲ್ಲಿ ನೀರಾವರಿಯನ್ನೇ ಗಮನದಲ್ಲಿಟ್ಟುಕೊಂಡು ಚಾಲನೆಗೊಂಡವುಗಳಲ್ಲಿ ತುಂಗಾ, ಭದ್ರಾ, ತುಂಗಭದ್ರಾ, ಕೃಷ್ಣಾ, ಕಾವೇರಿ, ಮಲಪ್ರಭಾ, ಘಟಪ್ರಭಾ ಮೊದಲಾದ ಜಲಾಶಯಗಳು ನಿರ್ಮಾಣಗೊಂಡವು. ಎಲ್ಲ ಜಲಾಶಯಗಳ ಮೂಲ ಆಸಕ್ತಿಯು ಬಹುಬೆಳೆ ಪದ್ಧತಿಗಳನ್ನು ಪ್ರಚೋಧಿಸುವ ಯೋಜನೆಗಳಾಗಿದ್ದುದು ವಿಶೇಷ. ಇವುಗಳ ಫಲವಾಗಿ ಅಚ್ಚುಕಟ್ಟು ಅಭಿವೃದ್ಧಿ ಪ್ರಾಧಿಕಾರಗಳು ಜಾರಿಗೆ ಬಂದವು. ಇವುಗಳು ಅಚ್ಚುಕಟ್ಟು ಅಭಿವೃದ್ಧಿ ಯೋಜನೆಗಳನ್ನು ಸಾಧುಗೊಳಿಸುವ ಮೂಲಕ ಹೆಚ್ಚಿನ ಉತ್ಪಾದನೆಗೆ ಸಹಾಯವಾದವು.

**ಕೃಷಿ ವಿಜ್ಞಾನದ ಅನ್ವಯ ಯೋಜನೆಗಳು :** ಕೃಷಿಯಲ್ಲಿ ವೈಜ್ಞಾನಿಕತೆಯ ಬಳಕೆ ಆರಂಭಗೊಂಡ ಮೇಲೆ ಕೃಷಿ ವಿಜ್ಞಾನದಲ್ಲಿ ಶಿಕ್ಷಣ, ಸಂಶೋಧನೆ ಮತ್ತು ಜ್ಞಾನ ಪ್ರಸರದಂತಹ ಹಲವಾರು ಕಾರ್ಯಕ್ರಮಗಳು ಆರಂಭಗೊಂಡವು. ಇದರ ಫಲವಾಗಿ ದೇಶದಾದ್ಯಂತ ಕೃಷಿ ಸಂಶೋಧನಾ ಸಂಸ್ಥೆಗಳು, ಕೃಷಿ ವಿಶ್ವ ವಿದ್ಯಾನಿಲಯಗಳು ಆರಂಭಗೊಂಡವು. ಪ್ರಸ್ತುತ ರಾಜ್ಯದಲ್ಲಿ ಮೂರು ಕೃಷಿ ವಿಶ್ವವಿದ್ಯಾನಿಲಯಗಳು, ಒಂದು ಪಶು ವೈದ್ಯಕೀಯ ವಿಶ್ವವಿದ್ಯಾನಿಲಯ ಹಾಗೂ ಒಂದು ತೋಟಗಾರಿಕೆ ವಿಶ್ವವಿದ್ಯಾನಿಲಯ ಕಾರ್ಯನಿರ್ವಹಿಸುತ್ತಿವೆ. ವಿಶ್ವವಿದ್ಯಾನಿಲಯಗಳು ಕೃಷಿ ಶಿಕ್ಷಣವನ್ನು ಒದಗಿಸುವ ಮೂಲಕ, ಸ್ಥಳೀಯ ಅವಶ್ಯಕತೆಗಳ ಸಂಶೋಧನೆ ನಿರ್ವಹಿಸುವ ಮೂಲಕ ಕಾರ್ಯಪ್ರವೃತ್ತವಾಗಿವೆ. ರಾಜ್ಯದ ಕೃಷಿ, ತೋಟಗಾರಿಕೆ, ಪಶುಸಂಗೋಪನೆ ಇಲಾಖೆಗಳು ರೈತರಿಗೆ ತಾಂತ್ರಿಕ ನೆರವು ನೀಡುವ ಹಲವಾರು ಯೋಜನೆಗಳನ್ನು ರೂಪಿಸಿಕೊಂಡು ನಿರ್ವಹಿಸುತ್ತಿವೆ.

ಬೆಳೆ ಆಧಾರಿತ ಅಖಿಲ ಭಾರತ ಸಂಶೋಧನಾ ವ್ಯವಸ್ಥೆಗಳು ಕಾರ್ಯ ನಿರ್ವಹಿಸುತ್ತಿವೆ. ಅನೇಕ ಪ್ರಮುಖ ಬೆಳೆಗಳಿಗೆ ಒಂದೊಂದು ಯೋಜನೆಗಳಂತೆ ಆಯಾ ಬೆಳೆಯ ಪ್ರತೀ ವಿಷಯದಲ್ಲೂ ಹೆಚ್ಚಿನ ಗಮನಕೊಡುವಲ್ಲಿ ಕಾರ್ಯ ಪ್ರವೃತ್ತವಾಗಿವೆ. ಅಖಿಲ ಭಾರತ ಸುಸಂಘಟಿತ ಬೆಳೆ ಯೋಜನೆ ಎಂದು ಕಾರ್ಯಪ್ರವೃತ್ತವಾಗಿರುವ ಇವುಗಳ ಸಂಶೋಧನಾ ಜಾಲವು ದೇಶವ್ಯಾಪಿಯಾಗಿದ್ದು ಆಯಾ ಬೆಳೆಯ ಉತ್ಪಾದಕತೆ ಹೆಚ್ಚಿಸುವಲ್ಲಿ ಮಹತ್ತರ ಕಾರ್ಯನಿರ್ವಹಿಸಿವೆ.

**ಭೂಸುಧಾರಣಾ ಕಾರ್ಯಕ್ರಮಗಳು** : ಭೂಮಿಯ ಬಳಕೆ ಕುರಿತಂತೆ ಆದಿಯಿಂದಲೂ ಅನೇಕ ದ್ವಂದ್ವಗಳು, ಸುಧಾರಣೆಗಳು, ಸಮನ್ವಯಗಳು ನಡೆಯುತ್ತಲೇ ಬಂದಿವೆ. 'ಊಳುವವನೆ ಒಡೆಯ', 'ಬಗರ್-ಹುಕುಂ', 'ಸಾಗುವಳಿಯ ಸಕ್ರಮ', 'ಭೂ-ಕಂದಾಯದಲ್ಲಿ ಸುಧಾರಣೆ ಕಾರ್ಯಕ್ರಮಗಳು ಇತ್ಯಾದಿ ಪ್ರಕ್ರಿಯೆಗಳು ಸ್ವಾತಂತ್ರ್ಯ ನಂತರದಿಂದ ಇಂದಿಗೂ ಜೀವಂತವಾಗಿರುವಂತಹ ಸಂಗತಿಗಳು. ಭೂಮಿಯ ಹಕ್ಕು ಹಾಗೂ ಬಳಕೆಯ ಕುರಿತ ಹಾಗೆ ಉತ್ಪಾದನೆಯತ್ತ ಪ್ರಮುಖ ಗುರಿಯಾಗಿಸಿ ಆಯಾ ಕಾಲದ ಮಹತ್ತರವಾದ ಪರಿಹಾರಗಳನ್ನು ಕಂಡುಕೊಳ್ಳಲಾಗಿದೆ.

ಆಹಾರ ಭದ್ರತೆಯಲ್ಲಿ ಉತ್ಪಾದನೆ ಹೆಚ್ಚುವಲ್ಲಿ ಗಮನ ಕೊಟ್ಟ ಹಾಗೆ ಉತ್ತಮ ಗುಣಮಟ್ಟದ ಆಹಾರಕ್ಕೂ ಜತೆಯಲ್ಲಿ ಉತ್ಪಾದಿಸಿದ ಆಹಾರದ ಸುಸ್ಥಿರ ಸಂಗ್ರಹಣೆಗೂ ಸಾಕಷ್ಟು ಗಮನ ಕೊಡಲಾಗಿದೆ. ಉತ್ತಮ ಗುಣಮಟ್ಟವನ್ನು ಹೆಚ್ಚಿದ ಉತ್ಪಾದನೆಯೊಂದಿಗೆ ಜತೆಗೇ ಕೊಡುವುದೆಂದರೆ, ಆಹಾರ ಭದ್ರತೆಗೆ ಒಂದು ವಿಶೇಷ ಮಹತ್ವವನ್ನು ಕೊಟ್ಟ ಹಾಗೆ. ಏಕೆಂದರೆ, ಸಂತೃಪ್ತ ಆಹಾರವು ಆರೋಗ್ಯಯುತ ಪೋಷಣೆಯನ್ನು ನಿರ್ವಹಿಸುವುದೆಂದರೆ ಭದ್ರತೆಗೆ ಆರೋಗ್ಯದ ಆಯಾಮವನ್ನು ಬೆರಸಿದಂತೆ. ಈ ದಿಕ್ಕಿನಲ್ಲಿ ಹಲವಾರು ಆಹಾರ ಪದಾರ್ಥಗಳ ಗುಣಮಟ್ಟವನ್ನು ಅರಿಯಲು ಮತ್ತು ಸುಧಾರಿಸಲು ಹಲವಾರು ಯೋಜನೆಗಳನ್ನು ರೂಪಿಸಲಾಗಿದೆ. ಆಹಾರ ಮತ್ತು ಆರೋಗ್ಯವನ್ನು ಸಮೀಕರಿಸುವ ನಿಟ್ಟಿನಲ್ಲಿ ಈ ಯೋಜನೆಗಳು ನಿಯುಕ್ತಗೊಂಡಿವೆ. ಉತ್ತಮ ಗುಣಮಟ್ಟದ ತಳಿಯ ಅಭಿವೃದ್ಧಿಗೆ ಹೊಸ ಹೊಸ ತಳಿ ಅಭಿವೃದ್ಧಿ ಪಡಿಸುವಲ್ಲಿ ವೈವಿಧ್ಯಮಯ ಜೀವಜಗತ್ತನ್ನು ಪರಿಶೋಧಿಸಿ ಬಳಸಿಕೊಂಡಿದೆ. ಇದೊಂದು ಜನಪರ ಹಾಗೂ ಮನುಕುಲ ಪ್ರೇಮಿ ಹಗೂ ಜಾಗತಿಕವಾಗಿ ನಡೆದು ಬಂದ ಚಟುವಟಿಕೆ. ಇದರ ಅನುಸರಣೆಯಲ್ಲಿ ಹಲವಾರು ಬೆಳೆಗಳು ಜಗತ್ತಿನಾದ್ಯಂತ ವಿನಿಮಯಗೊಂಡಿವೆ ಹಾಗೂ ಅಭಿವೃದ್ಧಿಯನ್ನು ಕಂಡಿವೆ. ಉದಾಹರಣೆಗೆ ಟೊಮ್ಯಾಟೊ, ಆಲೂಗಡ್ಡೆ, ಗೋಧಿ, ಮೆಕ್ಕೆಜೋಳ ಮುಂತಾದವುಗಳು. ಎಲ್ಲಿಂದಲೋ ಬಂದು ನಮ್ಮ ಹೊಟ್ಟೆಯನ್ನು ಸೇರಿರುವುದು ಈಗ ಹಳೆಯ ಮಾತು.

ಗುಣಮಟ್ಟದ ಸುಧಾರಣೆಯಲ್ಲಿ ಇತ್ತೀಚಿಗೆ ಹೊಸದೊಂದು ಜೈವಿಕ ಆಯಾಮವು ಸೇರಿಕೊಂಡಿದೆ. ಜೀವಿಗಳನ್ನೇ ನೇರವಾಗಿ ಉತ್ಪಾದಿಸುವ ತಂತ್ರಜ್ಞಾನದಲ್ಲಿ ಬಳಸುವ ಜೈವಿಕ ತಂತ್ರಜ್ಞಾನ ಹಲವು ಮಜಲುಗಳಲ್ಲಿ ಅಭಿವೃದ್ಧಿಗೊಳ್ಳುತ್ತಿರುವ ಈ ಪ್ರಕಾರದಲ್ಲಿ ಜೀವಿಗಳ ಅನುವಂಶಿಕ ಗುಣಗಳ ವರ್ಗಾವಣೆಯಿಂದ ಉತ್ತಮ ಪಡಿಸುವ ವಿಧಾನ ಪ್ರಯೋಗಾಲಯದಲ್ಲಿ ಸಾಕಷ್ಟು ಫಲಗಳನ್ನು ಕಂಡಿರುವ ಈ ತಂತ್ರಜ್ಞಾನವು ಇನ್ನೇನು ಹೊರ ಪ್ರಪಂಚಕ್ಕೂ ಕಾಲಿಡಲಿದೆ. ಕರ್ನಾಟಕದ

ಜನತೆಗೆ ಈಗಾಗಲೇ ಬಿ.ಟಿ. ಹತ್ತಿ ಜನಪ್ರಿಯವೇ. ಹಾಗೆಯೇ ಬಿ.ಟಿ. ಬದನೆಯೂ ಸಾಕಷ್ಟು ಚರ್ಚೆಗೆ ಕಾರಣವಾಗಿದೆ. ಇವನ್ನು ಹೊರತುಪಡಿಸಿಯೂ ಅನೇಕ ಸಾಂಪ್ರದಾಯಿಕ ವಿಧಾನದಲ್ಲಿ ಹಲವಾರು ಬೆಳೆಗಳ ಹೈಬ್ರೀಡ್ ತಳಿಗಳು ನಮ್ಮೆಲ್ಲರ ಹೊಟ್ಟೆಯನ್ನು ಸೇರಿರುವುದು ಈಗ ಹಳೆಯ ಮಾತು.

ಜೈವಿಕ ಗುಣಗಳ ಸುಧಾರಣೆಯಲ್ಲಿ ಮಹತ್ವಾಕಾಂಕ್ಷಿಯಾದ ಜೀವತಂತ್ರಜ್ಞಾನವು ಆಹಾರ ಮತ್ತು ಆರೋಗ್ಯ ಎರಡರಲ್ಲೂ ಸುಧಾರಣೆ ಹಾಗೂ ಹೆಚ್ಚಿನ ಲಾಭಕ್ಕೆ ಆಸ್ಥೆಯುಳ್ಳದ್ದಾಗಿದೆ. ಆಹಾರ ಗುಣಮಟ್ಟ ಸುದಾರಣೆಯು ಪ್ರಮುಖ ಅರಿವು ಮಹತ್ವದ ಪಾತ್ರ ವಹಿಸಿದೆ. ಹೀಗೆ ಗುಣವನ್ನು ಆಧರಿಸಿ ಅಭಿವೃದ್ಧಿ ಪಡಿಸುವ ಕಾರ್ಯಗಳಲ್ಲಿ ಹಲವಾರು ಪ್ರಯತ್ನಗಳು ಸಾಕ್ಷಿಯಾಗಿವೆ.

**ಕರ್ನಾಟಕದಕೃಷಿಯ ಸ್ಥಿತಿ–ಗತಿ** : ಕರ್ನಾಟಕ ರಾಜ್ಯದ ಭೂಹರಹು ತುಂಬಾ ವೈವಿಧ್ಯಮಯವಾದದ್ದು. ಅಷ್ಟೇ ಮನೋಹರವಾದದ್ದೂ ಸಹ. ಇದನ್ನು ಪಶ್ಚಿಮಘಟ್ಟಗಳು ಅದ್ಭುತವನ್ನಾಗಿಸುವುದರ ಜತೆಗೆ ಜಗತ್ತಿನ 18 ಜೈವಿಕ ಸ್ಥಾನಗಳಲ್ಲಿ ಒಂದನ್ನಾಗಿಸಿವೆ. ಪಶ್ಚಿಮ ಘಟ್ಟಗಳು ಇಲ್ಲಿನ ಜೀವ ಸೆಲೆ ಏಕೆಂದರೆ ಇಡೀ ರಾಜ್ಯದ ಜಲಾನಯನದ ಪ್ರಮುಖ ಭಾಗ. ಅನೇಕ ನದಿಗಳ ಉಗಮ ಸ್ಥಳ. ರಾಜ್ಯದ ಜಲ ಪ್ರಯಾಣ ಆರಂಭವಾಗುವುದೇ ಇಲ್ಲಿಂದ. ಮುಂದೆ ಪಶ್ಚಿಮಕ್ಕೆ ಹರಿವ ನದಿಗಳು ಜಲಪಾತಗಳ ಒಳಗೊಂಡು ವಿದ್ಯುತ್ ಉತ್ಪಾದನೆಯಲ್ಲಿ ನೆರವಾಗಿದ್ದರೆ, ಪೂರ್ವಕ್ಕೆ ಹರಿವ ನದಿಗಳು ಎಲ್ಲಾ ಬೆಳೆಗಳ ಉತ್ಪಾದನೆಯ ಕಣ್ಣಾಗಿವೆ. ಅನೇಕ ಜಲಾಶಯಗಳ ಮೂಲಕ ನೀರೆರೆದು ಕೃಷಿಯನ್ನು ಜೀವಂತವಾಗಿಸಿವೆ. ಕರ್ನಾಟಕ ರಾಜ್ಯವು 1,91,791 ಚ.ಕಿಮೀ. ಅಥವಾ 1,90,49,836 ಹೆಕ್ಟೇರ್ ಪ್ರದೇಶಗಳಷ್ಟು ವಿಸ್ತಾರವಾದ ಪ್ರದೇಶದಲ್ಲಿ 70 ದಶಲಕ್ಷಕ್ಕೂ ಮಿಕ್ಕಿ ಭೂ ಹಿಡುವಳಿದಾರರನ್ನು ಹೊಂದಿದೆ. ಈ ಭೂ ಹಿಡುವಳಿದಾರರ ಭೂಮಿ ಸುಮಾರು 123 ದಶಲಕ್ಷ ಹೆಕ್ಟೇರ್ ವಿಸ್ತೀರ್ಣದಷ್ಟು ಪ್ರದೇಶವು ಕೃಷಿಯಲ್ಲಿ ನಿರತವಾಗಿದೆ. ಇವರಲ್ಲಿ ಅನೇಕರು ಸಣ್ಣ ಹಿಡುವಳಿದಾರರು. ಈ ಬಗೆಯ ಕೃಷಿಯನ್ನೂ ಮತ್ತು ಕೃಷಿಕರನ್ನೂ ವಿವಿಧ ಅಗತ್ಯಗಳಿಂದ ವಿವಿಧ ಕೈಗಾರಿಕೆಗಳು ನಿರ್ವಹಿಸಬೇಕಿದೆ. ಪ್ರತೀ ವರ್ಷದ ರಸಗೊಬ್ಬರಗಳ ಅಗತ್ಯವೇ 10– 15 ಲಕ್ಷ ಟನ್ನುಗಳು. ಅಲ್ಲದೆ ಸಾವಿರಾರು ಮೆಟ್ರಿಕ್ ಟನ್ನುಗಳಷ್ಟು ಕೀಟನಾಶಕ ಬಳಕೆಯೂ ಆಗಲಿದೆ.

ಕರ್ನಾಟಕದ ಕೃಷಿಯನ್ನು ನೆಲೆಗೊಳಿಸಿ ವೈವಿಧ್ಯಮಯವಾಗಿಸಿರುವಲ್ಲಿ ನಿಸರ್ಗದ ನೀರಿನ ಕೊಡುಗೆಯೂ ಸಾಕಷ್ಟಿದೆ. ರಾಜ್ಯದ ವಾರ್ಷಿಕ ಸರಾಸರಿ ಮಳೆ 1100 ಮಿ.ಮೀಗೂ ಆಧಿಕ. ಆದರೆ ಇದರ ಬಹುಪಾಲು ಅಂದರೆ ಸುಮಾರು ಪ್ರತಿಶತ 75–90 ಭಾಗ ಕೇವಲ 3–4 ತಿಂಗಳಲ್ಲೇ ಬೀಳುವುದರಿಂದ ನೀರನ್ನು ವರ್ಷವಿಡೀ ದೊರಕಿಸುವ ಪಾರಂಪರಿಕ ಹಾಗೂ ನವೀನ ಮಾದರಿ ಕ್ರಮಗಳು ವಿಕಾಸಗೊಂಡು ಬಳಕೆಯಲ್ಲಿವೆ. ಶತಮಾನಗಳಷ್ಟು ಹಿಂದೆಯೇ ದಕ್ಷಿಣ ಭಾರತದಲ್ಲಿ ಕೆರೆಯ ತಂತ್ರಜ್ಞಾನ ವಿಕಾಸಗೊಂಡು ಇಂದಿನ ಜಲಾಶಯಗಳ 'ಮಿನಿಯೇಚರ್'ಗಳು ವಿಕಾಸಗೊಂಡಿವೆ. ಅಣೆಕಟ್ಟುಗಳ ಆದಿಮ ರೂಪಗಳಾದ ಮಣ್ಣಿನ ಒಡ್ಡುಗಳಿಂದ ನಿರ್ಮಿತವಾದ ಈ ಕೆರೆಗಳು ಇಂದಿನ ಇಂಜನೀಯರಿಂಗ್ ವಿಶ್ವಾಸಕ್ಕೆ ಯಾವರೀತಿಯಲ್ಲೂ ಕಡಿಮೆಯೇನಲ್ಲ. ಇಂತಹ ಸಂಪತ್ತನ್ನು ಬಳಸಿ ಹಸಿರಿನ ಉತ್ಪನ್ನವನ್ನು ನಿರಂತರವಾಗಿಸಿರುವಲ್ಲಿ ರಾಜ್ಯದ ವೈವಿಧ್ಯಮಯ ಮಣ್ಣುಗಳು

ಸಹಕಾರಿಯಾಗಿವೆ. ಕೃಷಿಗೆ ಮೂಲಾಧಾರವಾದ ಮಣ್ಣು ಸಹಜ ವಿಂಗಡಣೆಗೆ ಕೆಂಪು ಕಪ್ಪು ಎಂದಿದ್ದರೂ ಅನೇಕ ಬಗೆಯ ವೈವಿಧ್ಯ ಮಣ್ಣುಗಳು ರಾಜ್ಯದ ಭೂಮಿಯನ್ನಾವರಿಸಿವೆ. ಅದರ ವೈವಿಧ್ಯವೇ ಬೆಳೆ ಪರಂಪರೆಯಲ್ಲಿ ಕಾಣಬರುತ್ತಿದೆ. ದಕ್ಷಿಣದವರು ರಾಗಿಮೂಲದ ಪರವಾದ ಆಹಾರ ಸಂಸ್ಕೃತಿಯವರಾದರೆ, ಉತ್ತರದವರು ಜೋಳದ ರೊಟ್ಟಿಯ ಜನ, ಬೆಟ್ಟ-ಮಲೆನಾಡು ಕರಾವಳಿಯವರು ಅನ್ನವನ್ನೇ ನಂಬಿದವರು. ಹೀಗೆ ಅವರವರ ರುಚಿಯನ್ನು ಕಾಪಾಡಿಕೊಂಡು ಬರುವಲ್ಲಿ ಮಣ್ಣಿನ ವೈವಿದ್ಯವು ಮಹತ್ವಪೂರ್ಣ ಚಮತ್ಕಾರವನ್ನು ತೋರಿದೆ. ಇಡೀ ರಾಜ್ಯದ ಸರಾಸರಿ ವಾರ್ಷಿಕ ಮಳೆಯು 1000 ಮಿ.ಮೀ. ಗೂ ಅಧಿಕ ಎಂದರೆ ಭತ್ತವನ್ನು ಹೊರತುಪಡಿಸಿ ಉಳಿದೆಲ್ಲಾ ಆಹಾರ ಬೆಳೆಗಳನ್ನು ಮಳೆಯನ್ನು ನಂಬಿಯೇ ಬೆಳೆಯಬಹುದು. ಅಷ್ಟೇ ಅಲ್ಲದೇ ಹೆಚ್ಚು ಮಳೆ ಬೀಳುವ ಮಲೆನಾಡಿನಲ್ಲಿ ಭತ್ತವನ್ನೂ ಮಳೆಯನ್ನೇ ನೆಚ್ಚಿ ಬೆಳೆಯಬಹುದು. ನದಿಗೆ ಕಟ್ಟಿದ ಅಣೆಕಟ್ಟುಗಳಿಂದಾಗಿ ಉಂಟಾದ ಜಲಾಶಯಗಳಿಂದ ಅಚ್ಚುಕಟ್ಟು ಪ್ರದೇಶಗಳಲ್ಲಿಯೂ ಭತ್ತ, ಕಬ್ಬು ಸಾಕಷ್ಟು ಬೆಳೆಯಲಾಗುತ್ತಿದೆ.

ಇಲ್ಲಿನ ಪರಂಪರೆಯು ಆಹಾರವನ್ನಾದರಿಸಿ ರಾಗಿ, ಜೋಳ ಮತ್ತು ಭತ್ತವನ್ನು ಮೂಲ ಬೆಳೆಯನ್ನಾಗಿ ವಿಕಾಸಗೊಳಿಸಿಕೊಂಡವು. ಅದರ ನಂತರ ಅವನ್ನು ಆಹಾರದ ಪ್ರಮುಖ ಭಾಗವನ್ನಾಗಿಸಿ ಅದಕ್ಕೆ ಅನುರೂಪವಾದ ಬೆಳೆಗಳನ್ನು ಸಹಚರರನ್ನಾಗಿಸಿಕೊಂಡ ಕ್ರಮಗಳು ವಿಕಾಸಗೊಂಡಿವೆ. ಅಷ್ಟೇ ಅಲ್ಲದೆ, ತೋಟಗಾರಿಕೆಯನ್ನೂ ಮೊದಲು ಸ್ವತಂತ್ರಗೋಳಿಸಿದ ಕೀರ್ತಿಯೂ ಕರ್ನಾಟಕರಾಜ್ಯದ್ದೇ. ಹೈನುಗಾರಿಕಯಲ್ಲೂ ವಿಶೇಷ ಪರಿಣಿತಿಯನ್ನು ಸಾಧಿಸಿದ್ದೂ ಕರ್ನಾಟಕವೇ. ಇನ್ನು ರಾಜ್ಜವು ಮೈಸೂರು ರೇಷ್ಮೆಗೆ ಮೊದಲಿಂದಲೂ ಹೆಸರುವಾಸಿ. ಕೃಷಿಯನ್ನು ಸುಸ್ಥಿರಗೊಳಿಸುವ ನಿಟ್ಟಿನಲ್ಲಿ ನಿರಂತರ ಸಂಶೋಧನೆ, ಶಿಕ್ಷಣ, ತರಬೇತಿಯ ಅವಕಾಶಗಳನ್ನು ಸೃಷ್ಟಿಸಿದ್ದು ರಾಜ್ಯದ ಹಿರಿಮೆ. ಕಳೆದ ಶತಮಾನದ ಪ್ರಾರಂಭದಿಂದಲೇ ಇಂತಹ ವೈಜ್ಞಾನಿಕ ಸೃಜನಶೀಲ ಪ್ರಕ್ರಿಯೆಯು ಆರಂಭವಾಗಿತ್ತು. ಹಾಗಾಗಿ ಇದಕ್ಕಂತೂ ಶತಮಾನದ ಇತಿಹಾಸವೇ ಇದೆ. ಈಗ ಐಟಿ – ಬಿಟಿ ಗಾಳಿಯಲ್ಲೂ ರಾಜ್ಯದ್ದೂ ಮೊದಲ ಸ್ಥಾನವೇ. ಜೀವತಂತ್ರಜ್ಞಾನವನ್ನು ಜೀವಂತವಾಗಿಸುವ ನಿಟ್ಟಿನಲ್ಲಿ ರಾಜ್ಯವು ಮುಂಚೂಣಿಯಲ್ಲಿದ್ದು ಅನೇಕ ಪ್ರಾರಂಭಿಕ ಯೋಜನೆಗಳನ್ನು ಆಯೋಜಿಸಿದೆ. ಇವು ಕೃಷಿಯನ್ನು ಮುಂದಿನ ದಿನಗಳಲ್ಲಿ ಅಭಿವೃದ್ಧಿಯ ಹೊಸಮುಖವನ್ನು ಬಿಂಬಿಸುವ ಆಶಯವನ್ನು ಹೊಂದಲಾಗಿದೆ. ಈ ನಿಟ್ಟಿನಲ್ಲಿ ಮುಂದೆ ಕೈಗಾರಿಕೆಯ ಹಿತದಿಂದ ಬೆಳೆಗಳ ಸಾಮರ್ಥ್ಯವನ್ನು ನಿರೂಪಿಸುವ ಮತ್ತು ಹಲವು ಪ್ರಮುಖ ಕೈಗಾರಿಕೆಗಳಿಗೆ ಮೂಲ ಸಾಮಗ್ರಿಯನ್ನು ಒದಗಿಸುವ ಹಲವು ಬೆಳೆ ವಿವರವನ್ನು ಕೋಷ್ಟಕ 4.19ನಲ್ಲಿ ಕೊಡಲಾಗಿದೆ.

**ಕೋಷ್ಟಕ 4.19 ರಾಜ್ಯದ ಪ್ರಮುಖ ಬೆಳೆಗಳ ಉತ್ಪಾದನಾ ಸ್ಥಾನ**

(ಕೆ.ಜಿ/ಹೆಕ್ಟೇರ್) ಕಬ್ಬು= ಟನ್ನುಗಳು/ಹೆಕ್ಟೇರ್

| ಕ್ರ.ಸಂ | ಬೆಳೆಗಳು | ಭಾರತ | ಕರ್ನಾಟಕ | ರಾಜ್ಯದ ಸ್ಥಾನ |
|---|---|---|---|---|
| 1 | ಭತ್ತ | **1913** | **2520** | 5 |
| 2 | ಜೋಳ | 772 | 917 | 3 |
| 3 | ಗೋಧಿ | 2743 | 917 | 14 |
| 4 | ಸಜ್ಜೆ | 719 | 729 | 7 |
| 5 | ಮುಸುಕಿನ ಜೋಳ | 1841 | 3157 | 1 |
| 6 | ತೊಗರಿ | 616 | 441 | 8 |
| 7 | ಕಡಲೆ | 720 | 648 | 7 |
| 8 | ನೆಲಗಡಲೆ | 1127 | 685 | 9 |
| 9 | ಸೋಯಾಅವರೆ | 940 | 831 | 5 |
| 10 | ಸೂರ್ಯಕಾಂತಿ | 577 | 449 | 7 |
| 11 | ಹತ್ತಿ | 186 | 171 | 5 |
| 12 | ಕಬ್ಬು | **67** | **81** | 4 |
| 13 | ತಂಬಾಕು | 1565 | 809 | 6 |

*ಆಧಾರ: ವಾರ್ಷಿಕ ವರದಿ 2005-2006 ಕೃಷಿ ಮತ್ತುತೋಟಗಾರಿಕೆ ಇಲಾಖೆ ಕರ್ನಾಟಕ ಸರ್ಕಾರ*

**ಉತ್ಪಾದನೆಯ ಹಂಚಿಕೆ ಮತ್ತು ಅವಶ್ಯಕತೆಯುಳ್ಳವರಿಗೆ ತಲುಪಿಸುವ ಯೋಜನೆಗಳು :** "ಊಟ ಬಲ್ಲವನಿಗೆ ರೋಗವಿಲ್ಲ" ಎಂಬ ನಾಣ್ಣುಡಿ ನಮ್ಮಲ್ಲಿ ಪ್ರಚಲಿತವಿದೆ. ಊಟ ಬಲ್ಲವರು ಎನ್ನುವುದು ಆಹಾರ ಕುರಿತ ಅರಿವಿನ ಬಗ್ಗೆ ತಿಳಿಪಡಿಸುವ ವಿಷಯವಾಗಿದೆ. ಈ ಅರಿವು ರೋಗರಹಿತ ಜೀವನವನ್ನು ಅಥವಾ ಆರೋಗ್ಯಕರ ಜೀವನವನ್ನು ನೀಡುವಂತಾಗಬೇಕು ಎಂಬುದು ಇದರ ಆಶಯ. ಪರಂಪರಾಗತವಾಗಿ ಬಂದ ಇಂತಹ ವಿಚಾರಗಳು ಸ್ವಾಭಾವಿಕವಾಗಿ ವಾಸ್ತವ ನೆಲೆಯಲ್ಲೂ ಚಿಂತನೆಗಳನ್ನು ನೀಡುವಾಗ ಪ್ರಭಾವ ಬೀರುತ್ತವೆ. ಇಂತಹದ್ದೇ ನೆಲೆಗಟ್ಟಿನಿಂದ ಆಹಾರ – ಆರೋಗ್ಯದ ಸಮೀಕರಿಸುವ ವಿಚಾರಗಳು ವಿಕಾಸಗೊಂಡಿವೆ. ಒಳ್ಳೆಯ ಆಹಾರ, ಅತ್ಯುತ್ತಮ ಆಹಾರ, ಆರೋಗ್ಯ ನೀಡಬಲ್ಲಂತಹ ಆಹಾರ ಹೀಗೆ ವಿವಿಧ ವಿಶೇಷಣಗಳಿಂದ ಆಹಾರವನ್ನು ಗುರುತಿಸುವುದರ ಹಿನ್ನೆಲೆಯು ಉತ್ತಮ ಆರೋಗ್ಯದೆಡೆಗೆ ಅಥವಾ ಸುಖವಾದ ಜೀವನವನ್ನು ಆಪೇಕ್ಷಿಸುವುದೇ ಆಗಿದೆ. ವಿವಿಧ ವಿಶೇಷ ಸಂದರ್ಭಗಳಲ್ಲಿ ವಿಶೇಷ ಆಹಾರ ಉಪಯೋಗಿಸುವ ಮೊದಲಾದ ಪರಂಪರೆಯು

ನಮಗೆ ಹೊಸದಲ್ಲ. ಹೆಣ್ಣು ಗರ್ಭಿಣಿಯಾದಾಗ, ಬಾಣಂತಿಯಾದಾಗ ಅಲ್ಲದೆ ಮಕ್ಕಳ ಬೆಳವಣಿಗೆ ಸಂದರ್ಭದಲ್ಲಿ ಹಾಗೂ ಯಾರೇ ಆದರೂ ಕೆಲವು ಗೊತ್ತಾದ ಕಾಯಿಲೆಗಳಿಂದ ಚೇತರಿಸುವಾಗ ವಿಶೇಷ ಆಹಾರಗಳನ್ನು ಒದಗಿಸುವುದು ರೂಢಿಯಲ್ಲಿದೆ. ಒಟ್ಟಾರೆ ಆಹಾರದ ಜವಾಬ್ದಾರಿಯು ಉತ್ತಮ ಆರೋಗ್ಯಕರ ಜೀವನವನ್ನು ಕೊಡುವುದೇ ಆಗಿದೆ. ಈ ಹಿನ್ನೆಲೆಯಲ್ಲಿ ಒಂದು ರಾಷ್ಟ್ರದ ಎಲ್ಲ ಪ್ರಜೆಗಳ ಆರೋಗ್ಯಕರ ಜೀವನ ನಿರ್ಮಾಣವು ಆ ರಾಷ್ಟ್ರವು ಒದಗಿಸುವ ಆಹಾರದ ಯೋಜನೆಗಳು ಮತ್ತು ಅಂತಹ ಪರಿಸರಗಳು ವಿಕಾಸಗೊಂಡಿವೆ.

ಒಂದು ಸಮುದಾಯದ ಆಹಾರದ ಪೌಷ್ಟಿಕತೆಯು ವಿವಿಧ ಬಗೆಯ ಅಂಶಗಳಿಂದ ಪ್ರಭಾವಿತವಾಗಿರುತ್ತದೆ. ಉತ್ಪಾದನೆ, ಹಂಚಿಕೆ, ಲಭ್ಯತೆ, ಕೊಳ್ಳುವ ಸಾಮರ್ಥ್ಯ, ಆಹಾರದ ಅರಿವು ಮುಂತಾದವುಗಳ ಮೇಲೆ ಅವಲಂಬಿತವಾಗಿರುತ್ತದೆ. ಆಹಾರ ಕುರಿತ ಕಾರ್ಯಕ್ರಮ ರೂಪಿಸುವಾಗ ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ರೂಪಿಸಲಾಗಿರುತ್ತದೆ. ಈ ರೀತಿ ವಿಕಾಸಗೊಂಡ ಕಾರ್ಯಕ್ರಮಗಳು ಈ ಕೆಳಗಿನಂತಿವೆ.

❖ ಪೌಷ್ಟಿಕತೆ ಸೋಂಕುರೋಗಗಳು ಹಾಗೂ ಗರ್ಭಿಣಿಯರ ಆರೋಗ್ಯವನ್ನು ಸುಧಾರಿಸುವ ಕಾರ್ಯಕ್ರಮಗಳು

❖ ಅಪೌಷ್ಟಿಕತೆಯಿಂದುಂಟಾಗುವ ಆರೋಗ್ಯ ಕುರಿತಾದ ಸಮಸ್ಯೆಗಳನ್ನು ಪ್ರಾರಂಭಿಕ ಹಂತದಲ್ಲಿಯೇ ಗುರುತಿಸುವುದು ಹಾಗೂ ಅಗತ್ಯ ಕಾರ್ಯಕ್ರಮ ಜಾರಿಗೊಳಿಸುವುದು

❖ ಸೂಕ್ಷ್ಮಪೋಷಕಾಂಶಗಳ ಕೊರತೆಯನ್ನು ಪತ್ತೆ ಹಚ್ಚುವುದು ಮತ್ತು ಪರಿಹಾರ ಸೂಚಿಸುವುದು

❖ ವಿಶೇಷ ಅವಶ್ಯಕತೆಯುಳ್ಳ ಜನರಿಗೆ ಪೂರಕ ಪೌಷ್ಟಿಕ ಆಹಾರ ಕಾರ್ಯಕ್ರಮಗಳನ್ನು ಜಾರಿಗೊಳಿಸುವುದು

ಈ ಮೇಲಿನ ಅಂಶಗಳನ್ನು ನಿಭಾಯಿಸುವ ಕೆಲವು ಆಹಾರ ಮತ್ತು ಕಾರ್ಯಯೋಜನೆಗಳನ್ನು ವಿವಿಧ ಕಾಲಘಟ್ಟಗಳಲ್ಲಿ ಆರಂಭಿಸಲಾಗಿದೆ. ವಿವಿಧ ಪಂಚವಾರ್ಷಿಕ ಯೋಜನೆಗಳಲ್ಲಿ ಆರಂಭಿಸಲಾದ ಅಂತಹ ಕಾರ್ಯಕ್ರಮಗಳ ವಿವರವನ್ನು ಕೋಷ್ಟಕ 4.20ರಲ್ಲಿ ದಾಖಲಿಸಿದೆ. ಕೋಷ್ಟಕ 4.21 ರಲ್ಲಿ ಆಹಾರ ಮತ್ತು ಪೌಷ್ಟಿಕತೆ ಕುರಿತಂತೆ ಸ್ವಾತಂತ್ರ್ಯೋತ್ತರ ಕಾರ್ಯಯೋಜನೆಗಳ ಕುರಿತು ದಾಖಲಿಸಿದೆ.

**ಕೋಷ್ಟಕ 4.20 ಸ್ವಾತಂತ್ರ್ಯ ನಂತರದ ದಶಕಗಳಲ್ಲಿ ಪೌಷ್ಟಿಕತೆಯ ಕಾರ್ಯಯೋಜನೆಗಳು**

| ಯೋಜನಾ ಅವಧಿ | ಪೌಷ್ಟಿಕತೆಯ ಸ್ಥಿತಿಗತಿ | ಕಾರ್ಯಯೋಜನೆಗಳು |
|---|---|---|
| 1950ರ ದಶಕ | ಆಹಾರದ ಅಭಾವ | ಆಹಾರ ಉತ್ಪಾದನೆಯ ಹಂತ:<br>❖ ಆಹಾರ ಉತ್ಪಾದನೆ ಹೆಚ್ಚಿಸಲು ಕೃಷಿಯಲ್ಲಿ ಆಧುನಿಕ ತಾಂತ್ರಿಕತೆಗಳ ಅಳವಡಿಕೆ<br>❖ ಆಹಾರದ ಪೌಷ್ಟಿಕ ಮೌಲ್ಯವನ್ನು ಹೆಚ್ಚಿಸಲು ಸೂಕ್ಷ್ಮಪೋಷಕಾಂಶಗಳಿಂದ ಬಲಪಡಿಸುವುವಂತಹ ಸೂಕ್ತ ಕಾರ್ಯಕ್ರಮಗಳ ಜಾರಿ |
| 1960ರ ದಶಕ | ದೇಶದ ಬಡ ಜನರನ್ನು ಪ್ರಬಲವಾಗಿ ಕಾಡಿದ ನ್ಯೂನ್ಯಪೋಷಣೆ | ಸಮುದಾಯ ಅಭಿವೃದ್ಧಿ ಹಂತ:<br>❖ ಅನ್ವಯಿಕ ಪೌಷ್ಟಿಕ ಕಾರ್ಯಕ್ರಮ<br>❖ ಆಹಾರ ಮತ್ತು ಪೌಷ್ಟಿಕತೆಯ ಸಂಚಾರಿ ವಿಸ್ತರಣಾ ಸೇವೆಗಳು ಮತು<br>❖ ಅಯೋಡಿನ್‌ಯುಕ್ತ ಉಪ್ಪು ತಯಾರಿಕೆ |
| 1970ರ ಪೂರ್ವದಲ್ಲಿ | ಅಪೌಷ್ಟಿಕತೆಯಿಂದುಟಾಗುವ ತೀವ್ರ ನ್ಯೂನ್ಯಪೋಷಣೆ, ರಕ್ತಹೀನತೆ, 'ಎ' ಜೀವಸತ್ವದ ಕೊರತೆ ಹಾಗೂ ಅಯೋಡಿನ್ ಕೊರತೆಗಳು ಸಾರ್ವತ್ರಿಕ ಆರೋಗ್ಯ ತೊಂದರೆಗಳಾಗಿ ಗುರುತಿಸಿಕೊಂಡ ಕಾಲ | ಪೌಷ್ಟಿಕ ಮಟ್ಟವನ್ನು ಸುಧಾರಿಸಲು ನೇರವಾಗಿ ಸಹಾಯವಾಗುವ ಕಾರ್ಯಕ್ರಮಗಳ ಜಾರಿಗೆ ತರುವ ಹಂತ:<br>ವಿಶೇಷ ಪೌಷ್ಟಿಕ ಕಾರ್ಯಕ್ರಮ<br>❖ ರಕ್ತಹೀನತೆ ಹಾಗೂ 'ಎ' ಜೀವಸತ್ವ ನಿವಾರಣಾ ಕಾರ್ಯಕ್ರಮಗಳು |
| 1970ರ ಮಧ್ಯಭಾಗ | ಶಿಶುಗಳು ಮತ್ತು ಮಕ್ಕಳ ಅನಾರೋಗ್ಯ ಹಾಗೂ ಮರಣಕ್ಕೆ ನ್ಯೂನ್ಯಪೋಷಣೆ ಪ್ರಮುಖ ಕಾರಣವೆಂದು ಪರಿಗಣಿಸಲಾದ ಕಾಲ | ಪೌಷ್ಟಿಕ ಮಟ್ಟವನ್ನು ಸುಧಾರಿಸಲು ಪರೋಕ್ಷವಾಗಿ ಸಹಾಯವಾಗುವಂತಹ ವಿವಿಧ ಕಾರ್ಯಕ್ರಮಗಳ ಜಾರಿಯ ಹಂತ:<br>❖ ಸಮಗ್ರ ಶಿಶು ಅಭಿವೃದ್ಧಿ ಯೋಜನೆ<br>❖ ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ<br>❖ ಜೀವಜಲ (ಒ.ಆರ್.ಎಸ್)<br>❖ ಬಡತನ ಉಪಶಮನ/ತಗ್ಗಿಸುವುದು, ಸಾರ್ವತ್ರಿಕ ಆಹಾರ ವಿತರಣೆ, ಆರೋಗ್ಯ ಮತು ಕುಟುಂಬ ಕಲ್ಯಾಣದ ಕಾರ್ಯಕ್ರಮಗಳು ಹಾಗೂ ವಯಸ್ಕರ ಶಿಕ್ಷಣ ಕಾರ್ಯಕ್ರಮಗಳು |
| 1980ರ ದಶಕ | | ರಾಷ್ಟ್ರೀಯ ಪೌಷ್ಟಿಕ ನೀತಿ ಜಾರಿಗೊಳಿಸಲು ಪರಿಶ್ರಮ |
| 1990ರ ದಶಕ | ದೇಶದ ಅಭಿವೃದ್ಧಿ ಅಳೆಯಲು ನ್ಯೂನ್ಯಪೋಷಣೆಯನ್ನು ಮಾನದಂಡವಾಗಿ ಪರಿಗಣಿಸಿದ್ದರಿಂದ ನ್ಯೂನ್ಯಪೋಷಣೆಯು ರಾಷ್ಟ್ರದ ಒಟ್ಟಾರೆ ಅಭಿವೃದ್ಧಿಗೆ ಪ್ರಮುಖ ತೊಡಕಾಗಿ ಪರಿಣಮಿಸಿದ ಕಾಲ | ರಾಷ್ಟ್ರೀಯ ಪೌಷ್ಟಿಕ ನೀತಿಯ ರೂಪುರೇಶಗಳ ಸಿದ್ದತೆ |

**ಆಕರ:** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಭಾರತ ಸರಕಾರ

**ಕೋಷ್ಟಕ– 4.21 ಆಹಾರ ಮತ್ತು ಪೌಷ್ಟಿಕತೆ ಕುರಿತಂತೆ ಸ್ವಾತಂತ್ರೋತ್ರ ಕಾರ್ಯಯೋಜನೆಗಳು**

| ಕ್ರ ಸಂ | ಯೋಜನೆಗಳು | ಜಾರಿಗೆ ಬಂದ ವರ್ಷ | ಯೋಜನೆಯ ಉದ್ದೇಶಗಳು | ಫಲಾನುಭವಿಗಳು |
|---|---|---|---|---|
| 1 | ಅನ್ವಯಿಕ ಪೌಷ್ಟಿಕ ಆಹಾರ ಕಾರ್ಯಕ್ರಮ(Applied Nutrition rogramme) | 1963 | ➢ ಹಣ್ಣು ಮತ್ತು ತರಕಾರಿ ಬೆಳೆ ಬೆಳೆಯಲು ಪ್ರೋತ್ಸಾಹ<br>➢ ಪೌಷ್ಟಿಕ ಶಿಕ್ಷಣ | ಮಕ್ಕಳು, ಗರ್ಭಿಣಿ ಮತ್ತು ಬಾಣಂತಿಯರು |
| 2 | ವಿಶೇಷ ಪೌಷ್ಟಿಕ ಆಹಾರ ಕಾರ್ಯಕ್ರಮ (Special Nutrition Programme) | 1970 | ➢ ಪೂರಕ ಪೌಷ್ಟಿಕ ಆಹಾರ (ಗರ್ಭಿಣಿ ಹಾಗೂ ಬಾಣಂತಿಯರಿಗೆ 500 ಕಿ.ಕೆಲೊರಿ ಹಾಗೂ 25ಗ್ರಾಂ ಪ್ರೊಟೀನೊದಗಿಸುವ ಮತ್ತು ಮಕ್ಕಳಿಗೆ 300ಕಿ.ಕೆಲೊರಿ ಹಾಗೂ 10ಗ್ರಾಂ ಪ್ರೊಟೀನ್ ಒದಗಿಸುವ ಪೌಷ್ಟಿಕ ಆಹಾರ ನೀಡುವುದು) | ಆರ್ಥಿಕವಾಗಿ, ಸಾಮಾಜಿಕಾಗಿ ಹಿಂದುಳಿದ ಗ್ರಾಮೀಣ ಪ್ರದೇಶ, ಬುಡಕಟ್ಟು ಪ್ರದೇಶ, ನಗರದ ಕೊಳಚೆ ಪ್ರದೇಶದಲ್ಲಿ ವಾಸಿಸುವವರು |
| 3 | ಸಮಗ್ರ ಶಿಶು ಅಭಿವೃದ್ಧಿ ಯೋಜನೆ(Integrated Chlid Development Services) | 1975 | ➢ ಪೂರಕ ಪೌಷ್ಟಿಕ ಆಹಾರ<br>➢ ಅನೌಪಚಾರಿಕ ಶಾಲಾ ಪೂರ್ವ ಶಿಕ್ಷಣ<br>➢ ಆಹಾರ ಮತ್ತು ಆರೋಗ್ಯ ಶಿಕ್ಷಣ | ಮಕ್ಕಳು, ಗರ್ಭಿಣಿ, ಬಾಣಂತಿ ಹಾಗೂ ಕಿಶೋರಿಯರು |
| 4 | ತಮಿಳುನಾಡು ಸಮಗ್ರ ಪೌಷ್ಟಿಕ ಯೋಜನೆ(TINP) | 1980 | ➢ ನಾಲ್ಕು ವರ್ಷದೊಳಗಿನ ಮಕ್ಕಳ ನ್ಯೂನ್ಯ ಪೋಷಣೆ ನಿವಾರಣೆ<br>➢ ಶಿಶುಗಳ ಮರಣ ಸಂಖ್ಯೆ ಕಡಿಮೆ ಮಾಡುವುದು<br>➢ ಮಕ್ಕಳಲ್ಲಿ 'ಎ' ಜಿವಸತ್ವದ ಕೊರತೆಯನ್ನು ಕಡಿಮೆಮಾಡುವುದು<br>➢ ಗರ್ಭಿಣಿ ಬಾಣಂತಿಯರಲ್ಲಿ ರಕ್ತಹೀನತೆ ಕಡಿಮೆ ಮಡುವುದು. | ಗ್ರಾಮೀಣ ಪ್ರದೇಶ |
| 5 | ರಾಷ್ಟ್ರೀಯ ಪೌಷ್ಟಿಕ ನೀತಿ (National Nutrition Policy) | 1993 | ಆರೋಗ್ಯಕರ ಸಮುದಾಯದ ನಿರ್ಮಾಣಕ್ಕಾಗಿ ನೇರವಾಗಿ ಮತ್ತು ಪರೋಕ್ಷವಾಗಿ ಪೌಷ್ಟಿಕತೆಗೆ ಸಂಬಂಧಪಟ್ಟ ಸಮಗ್ರ ಕಾರ್ಯತಂತ್ರ ರೂಪಿಸಿ ಅಪೌಷ್ಟಿಕತೆ ಹಾಗೂ ಅನಾರೋಗ್ಯವನ್ನು ತೊಡೆದುಹಾಕುವುದು | ನ್ಯೂನ್ಯ ಪೋಷಣೆಗೊಳಗಾದ ಎಲ್ಲ ಜನ ಸಮುದಾಯ |

**ಪ್ರಸಕ್ತ ಜಾರಿಯಲ್ಲಿರುವ ಯೋಜನೆಗಳು**

**1.ಸಮಗ್ರ ಶಿಶು ಅಭಿವೃದ್ಧಿ ಯೋಜನೆ :** ಭಾರತವು ಮಕ್ಕಳ ಅಭಿವೃದ್ಧಿಯ ಹಿತದೃಷ್ಟಿಯಿಂದ ಮೊದಲನೆಯ ಪಂಚವಾರ್ಷಿಕ ಯೋಜನೆಯಿಂದ ಆರಂಭಗೊಂಡು ಅನೇಕ ಕಾರ್ಯಕ್ರಮಗಳನ್ನು ಜಾರಿಗೆ ತಂದಿದೆ. ಅದರಲ್ಲಿಯೂ ವಿಶೇಷವಾಗಿ ಆರೋಗ್ಯ, ಪೋಷಣೆ ಹಾಗೂ ಶಿಕ್ಷಣ ಕುರಿತಾದ ಕಾರ್ಯಕ್ರಮಗಳಿಗೆ ಹೆಚ್ಚಿನ ಮಹತ್ವವನ್ನು ನೀಡಿದೆ. ಇಷ್ಟೆಲ್ಲಾ ಕಾರ್ಯಕ್ರಮಗಳು ಜಾರಿಗೆ ಬಂದರೂ ಕೂಡ ಮಕ್ಕಳಲ್ಲಿ ವಿವಿಧ ಪೌಷ್ಟಿಕ ಮತ್ತು ಆರೋಗ್ಯ ಸಂಬಂಧಿತ ತೊಂದರೆಗಳನ್ನು ನಿವಾರಿಸಲು ಸಾದ್ಯವಾಗಿಲ್ಲ. ಆರೋಗ್ಯ ಪೌಷ್ಟಿಕತೆ ಆಹಾರ ಮತ್ತು ಶಿಕ್ಷಣ ಒಂದಕ್ಕೊಂದು ಪೂರಕವಾದವುಗಳಾಗಿವೆ. ಆದ್ದರಿಂದ ಈ ಎಲ್ಲ ಸಮಸ್ಯೆಗಳಿಗೆ ಪರಿಹಾರಕ್ಕಾಗಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯನ್ನು ಅನುಷ್ಠಾನಕ್ಕೆ ತರಲಾಯಿತು. ಪ್ರಥಮವಾಗಿ ಈ ಯೋಜನೆಯು 1975 ಅಕ್ಟೋಬರ್ ಎರಡರಂದು ವಿಶ್ವ ಬ್ಯಾಂಕ್ ನೆರವಿನೊಂದಿಗೆ ಪ್ರಾರಂಭವಾಯಿತು. ಆರಂಭಿಕ ಹಂತದಲ್ಲಿ ಈ ಯೋಜನೆಯನ್ನು ಬರಗಾಲ ಪೀಡಿತ ಪ್ರದೇಶ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಜನರು ಹೆಚ್ಚಾಗಿ ವಾಸಿಸುವ ದೇಶದ ಒಟ್ಟು 33 ಬ್ಲಾಕ್‌ಗಳಲ್ಲಿ ಆರಂಭಿಸಲಾಯಿತು. ತದನಂತರದ 20 ವರ್ಷಗಳ ಅವಧಿಯಲ್ಲಿ ದೇಶದ ಎಲ್ಲ ಭಾಗಗಳಿಗೂ ವಿಸ್ತರಿಸಲಾಯಿತು.

**ಯೋಜನೆಯ ಉದ್ದೇಶಗಳು :**

- 0–6 ವರ್ಷಗಳ ಅವಧಿಯ ಮಕ್ಕಳ ಪೌಷ್ಟಿಕ ಹಾಗೂ ಆರೋಗ್ಯ ಮಟ್ಟವನ್ನು ವೃದ್ಧಿಸುವುದು.
- ಮಕ್ಕಳ ಸೂಕ್ತ ಮಾನಸಿಕ, ಬೌದ್ಧಿಕ ಹಾಗೂ ಸಾಮಾಜಿಕ ಬೆಳವಣಿಗೆಗೆ ಬುನಾದಿ ಹಾಕುವುದು.
- ಸಾವು, ಕಾಯಿಲೆ, ನ್ಯೂನ್ಯ ಪೋಷಣೆ ಹಾಗೂ ಮಕ್ಕಳು ಶಾಲೆಗಳಿಂದ ಹೊರಗೆ ಉಳಿಯುವುದನ್ನು ಕಡಿಮೆ ಮಾಡುವುದು.
- ಸೂಕ್ತ ಪೋಷಣೆ ಹಾಗೂ ಆರೋಗ್ಯ ಶಿಕ್ಷಣದ ಮೂಲಕ ಮಗುವಿನ ಆರೋಗ್ಯ ಮತ್ತು ಪೋಷಕಾಂಶಗಳ ಅಗತ್ಯತೆಗಳನ್ನು ನೋಡಿಕೊಳ್ಳುವ ಬಗ್ಗೆ ತಾಯಿಯ ತಿಳುವಳಿಕೆಯನ್ನು ಹೆಚ್ಚಿಸುವುದು ಮತ್ತು
- ಮಗುವಿನ ಬೆಳವಣಿಗೆಗಾಗಿ ವಿವಿಧ ಇಲಾಖೆಗಳಲ್ಲಿ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ಸಂಚಾಲನ ಕಾರ್ಯವನ್ನು ನಿರ್ವಹಿಸುವುದು.

**ಯೋಜನೆ ವ್ಯಾಪ್ತಿಗೆ ಒಳಪಡುವ ಫಲಾನುಭವಿಗಳು:** ಗ್ರಾಮೀಣ ಪ್ರದೇಶ, ಬುಡಕಟ್ಟು ಪ್ರದೇಶ, ನಗರದ ಕೊಳಚೆ ಪ್ರದೇಶದಲ್ಲಿ ವಾಸಿಸುತ್ತಿರುವ ಹಾಗೂ ಬುಡಕಟ್ಟು ಜಾತಿ, ಬುಡಕಟ್ಟು ಕುಟುಂಬಗಳು, ಅಲ್ಪಸಂಖ್ಯಾತ ಜನರು ಹೆಚ್ಚಾಗಿ ವಾಸಿಸುತ್ತಿರುವ ಪ್ರದೇಶಗಳ ಸಾಮಾಜಿಕ – ಆರ್ಥಿಕವಾಗಿ ಹಿಂದುಳಿದ ಕುಟುಂಬಗಳು ಈ ಯೋಜನೆಯ ವ್ಯಾಪ್ತಿಗೊಳಪಡುತ್ತಾರೆ.

➢ ಆರು ವರ್ಷದ ಒಳಗಿನ ಮಕ್ಕಳು

➢ ಗರ್ಭಿಣಿ ಸ್ತ್ರೀ ಹಾಗೂ ಬಾಣಂತಿ

➢ ಕಿಶೋರಿಯರು

➢ 15ರಿಂದ 45ವರ್ಷ ವಯೋಮಾನದ ಮಹಿಳೆಯರು.

**ಯೋಜನೆಯ ಸೇವೆಗಳು:**

- ಪೂರಕ ಪೌಷ್ಟಿಕ ಆಹಾರ
- ರೋಗ ನಿರೋಧಕ ಚುಚ್ಚುಮದ್ದು
- ಆರೋಗ್ಯ ಪರಿಶೀಲನೆ
- ಮಾಹಿತಿ ಸೇವೆ
- ಅನೌಪಚಾರಿಕ ಶಾಲಾ ಪೂರ್ವ ಶಿಕ್ಷಣ
- ಆಹಾರ ಮತ್ತು ಆರೋಗ್ಯ ಶಿಕ್ಷಣ

ಕರ್ನಾಟಕದಲ್ಲಿ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯು 1975 ಅಕ್ಟೋಬರ್ ಎರಡರಂದು ಮೈಸೂರು ಜಿಲ್ಲೆಯ ಟಿ.ನರಸೀಪುರ ತಾಲ್ಲೂಕಿನಲ್ಲಿ ಪ್ರಾಯೋಗಿಕವಾಗಿ ಆರಂಭಗೊಂಡಿತು. ಪ್ರಾರಂಬಿಕ ಹಂತದಲ್ಲಿ 100 ಅಂಗನವಾಡಿ ಕೇಂದ್ರಗಳೊಂದಿಗೆ ಆರಂಭಿಸಲಾದ ಯೋಜನೆಯು ಇಂದು ರಾಜ್ಯಾದ್ಯಂತ ಒಟ್ಟು 45,940 ಕೇಂದ್ರಗಳನ್ನು ಹೊಂದಿದೆ. ಕೋಷ್ಟಕ 4.22 ಕರ್ನಾಟಕ ರಾಜ್ಯದಲ್ಲಿನ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಸಂಕ್ಷಿಪ್ತ ಮಾಹಿತಿಯನ್ನು ನೀಡಿದೆ. ಮತ್ತು ಕೋಷ್ಟಕ 4.23 ದಲ್ಲಿ ಕರ್ನಾಟಕ ರಾಜ್ಯದಲ್ಲಿನ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಸಂಕ್ಷಿಪ್ತ ಮಾಹಿತಿ ನೀಡಿದೆ.

**ಕೋಷ್ಟಕ 4.22 ಕರ್ನಾಟಕ ರಾಜ್ಯದಲ್ಲಿನ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಸಂಕ್ಷಿಪ್ತ ಮಾಹಿತಿ**

| ಕ್ರ. ಸಂ | ವಿವರಗಳು | ಸಂಖ್ಯೆ |
|---|---|---|
| 1 | ಸಮಗ್ರ ಶಿಶು ಅಭಿವೃದ್ಧಿ ಯೋಜನೆ ವ್ಯಾಪ್ತಿಯಲ್ಲಿ ಬರುವ ಜಿಲ್ಲೆಗಳು | 27 |
| 2 | ಸಮಗ್ರ ಶಿಶು ಅಭಿವೃದ್ಧಿ ಯೋಜನೆ ವ್ಯಾಪ್ತಿಯಲ್ಲಿ ಬರುವ ತಾಲ್ಲೂಕುಗಳು | 175 |
| 3 | ಕಾರ್ಯ ನಿರ್ವಹಿಸುತ್ತಿರುವ ಸಮಗ್ರ ಶಿಶು ಅಭಿವೃದ್ಧಿ ಯೋಜನೆಗಳ ಸಂಖ್ಯೆ | 185 |

ಮಾಹಿತಿ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಕೋಷ್ಟಕ 4.23 ಕರ್ನಾಟಕ ರಾಜ್ಯದಲ್ಲಿನ ಸಮಗ್ರ ಶಿಶು ಅಭಿವೃದ್ಧಿ ಯೋಜನೆಯ ಪ್ರದೇಶವಾರು ಮಾಹಿತಿ**

| | ಗ್ರಾಮೀಣ ಪ್ರದೇಶ | ನಗರ ಪ್ರದೇಶ | ಬುಡಕಟ್ಟು ಪ್ರದೇಶ | ಒಟ್ಟು |
|---|---|---|---|---|
| ಕಾರ್ಯನಿರ್ವಹಿಸುತ್ತಿರುವ ಸಮಗ್ರ ಶಿಶು ಅಭಿವೃದ್ಧಿ ಯೋಜನೆಗಳು | 166 | 10 | 9 | 185 |
| ಕಾರ್ಯನಿರ್ವಹಿಸುತ್ತಿರುವ ಅಂಗನವಾಡಿ ಕೇಂದ್ರಗಳು | 45940 | 1799 | 3411 | 51150 |

ಮಾಹಿತಿ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ

**ಅಂಗನವಾಡಿಗಳಲ್ಲಿ ವಿತರಿಸುವ ಆಹಾರದ ವಿಧ : ಅಂಗನವಾಡಿಗಳಲ್ಲಿ** ಮಕ್ಕಳ ವಯೋಮಾನಕ್ಕೆ ಅನುಸಾರವಾಗಿ ಬಗೆ ಬಗೆಯ ಆಹಾರವನ್ನು ನೀಡಲಾಗುತ್ತಿದೆ. ಅಲ್ಲದೆ ಗರ್ಭಿಣಿ ಹಾಗೂ ಬಾಣಂತಿಯರಿಗಾಗಿಯೂ ಪೌಷ್ಟಿಕ ಆಹಾರ ಪದಾರ್ಥಗಳನ್ನು ನೀಡಲಾಗುತ್ತಿದೆ.

**0–3 ವರ್ಷ:** ಗೋಧಿ, ಸೋಯಾಬೀನ್, ಹುರಿಗಡಲೆ, ಸಕ್ಕರೆ, ಜೀವಸತ್ವ ಹಾಗೂ ಖನಿಜಾಂಶಗಳ ಮಿಶ್ರಣವನ್ನು ಬೆರಸಿ ತಯಾರಿಸಿದ ಅಮೈಲೇಸ್ ಭರಿತ ಶಕ್ತಿಯುತ ಸಿದ್ಧ ಆಹಾರವನ್ನು ರಾಜ್ಯದ 96 ಯೋಜನೆಗಳಲ್ಲಿಯ ಮಕ್ಕಳಿಗೆ ವಿತರಿಸಲಾಗುತ್ತಿದೆ ಹಾಗೂ ಇನ್ನುಳಿದ ಪ್ರದೇಶಗಳಲ್ಲಿ ಸ್ಥಳೀಯವಾಗಿ ಲಭ್ಯವಿರುವ ಆಹಾರ ಧಾನ್ಯಗಳಿಂದ ತಯಾರಿಸಿದ ಪದಾರ್ಥಗಳನ್ನು ವಿತರಿಸಲಾಗುತ್ತಿದೆ.

**3–6ವರ್ಷ:** ಅಮೈಲೇಸ್ ಭರಿತ ಶಕ್ತಿಯುತ ಆಹಾರ ವಾರಕ್ಕೆ ಎರಡು ದಿನದಂತೆ ಹಾಗೂ ಸ್ಥಳೀಯವಾಗಿ ಲಭ್ಯವಿರುವ ಆಹಾರ ಧಾನ್ಯಗಳಿಂದ ತಯಾರಿಸಿದ ಪದಾರ್ಥಗಳನ್ನು ವಾರಕ್ಕೆ 4 ದಿನ ವಿತರಿಸಲಾಗುತ್ತಿದೆ.

**ಗರ್ಭಿಣಿ ಹಾಗೂ ಬಾಣಂತಿ:** ಅಕ್ಕಿ ಹಾಗೂ ಹೆಸರುಕಾಳುಗಳನ್ನು ವಿತರಿಸಲಾಗುತ್ತಿದೆ. ಕೋಷ್ಟಕ 4.24ರಲ್ಲಿ ಪೂರಕ ಪೌಷ್ಟಿಕ ಆಹಾರದಿಂದ ದೊರಕುವ ಪೋಷಕಾಂಶಗಳ ಪ್ರಮಾಣವನ್ನು ದಾಖಲಿಸಿದೆ.

**ಕೋಷ್ಟಕ 4.24 ವಿತರಿಸುವ ಪೂರಕ ಪೌಷ್ಟಿಕ ಆಹಾರದಿಂದ ದೊರಕುವ ಪೋಷಕಾಂಶಗಳು**

| ಪೋಷಕಾಂಶಗಳು | 6 ತಿಂಗಳಿನಿಂದ 3 ವರ್ಷ (ವರ್ಷಕ್ಕೆ 300ದಿನ) | 3 ರಿಂದ 6ವರ್ಷ(ವರ್ಷಕ್ಕೆ 300ದಿನ) | 3 ಮತ್ತು 4ನೇ ಗ್ರೇಡ್ ಮಕ್ಕಳು. 6ತಿಂಗಳಿನಿಂದ ರಿಂದ 6ವರ್ಷ) ವರ್ಷಕ್ಕೆ 300ದಿನ | ಗರ್ಭಿಣಿ ಹಾಗೂ ಬಾಣಂತಿ |
|---|---|---|---|---|
| ಕ್ಯಾಲೋರಿ | 300 | 300 | 600 | 500 |
| ಪ್ರೊಟೀನ್ | 8–10 | 8–10 | 16–20 | 20–25 |

ಮಾಹಿತಿ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಕರ್ನಾಟಕದಲ್ಲಿನ ಮಕ್ಕಳ ಆರೋಗ್ಯ ಮತ್ತು ಪೌಷ್ಟಿಕ ಸ್ಥಿತಿಗೆ ಸಂಬಂದಿಸಿದ ಮಾಹಿತಿಯನ್ನು ಕೋಷ್ಟಕ 4.25ನಲ್ಲಿ ವಿವರಿಸಿದೆ.

**ಕೋಷ್ಟಕ 4.25 ಕರ್ನಾಟಕದಲ್ಲಿನ ಮಕ್ಕಳ ಆರೋಗ್ಯ ಮತ್ತು ಪೌಷ್ಟಿಕ ಸ್ಥಿತಿಗೆ ಸಂಬಂದಿಸಿದ ಮಾಹಿತಿ**

| ಕ್ರ ಸಂ | ಕರ್ನಾಟಕದಲ್ಲಿ ಮಕ್ಕಳಿಗೆ ಸಂಬಂದಿಸಿದ ಮಾಹಿತಿ | ಪ್ರಮಾಣ |
|---|---|---|
| 1 | ಶಿಶು ಮರಣ ಪ್ರಮಾಣ | 58/1000 (ಜನಿಸಿದ ಪ್ರತಿ 1000ಮಕ್ಕಳಿಗೆ) |
| 2 | ಗ್ರಾಮೀಣ ಪ್ರದೇಶದಲ್ಲಿ ಶಿಶು ಮರಣ ಪ್ರಮಾಣ | 69/1000 |
| 3 | ನಗರ ಪ್ರದೇಶದಲ್ಲಿ ಶಿಶು ಮರಣ ಪ್ರಮಾಣ | 24/1000 |
| 4 | ಐದು ವರ್ಷದ ಒಳಗಿನ ಮಕ್ಕಳ ಮರಣ ಪ್ರಮಾಣ | 69.8/1000 |
| 5 | ನಿಯೋನೇಟ್ | 37.1/1000 |
| 6 | ಜನನ ಪ್ರಮಾಣ | 22.3/1000 ಜನಸಂಖ್ಯೆಗೆ |
| 7 | ಮರಣ ಪ್ರಮಾಣ | 7.7/1000 ಜನಸಂಖ್ಯೆಗೆ |
| | **ಮಕ್ಕಳ ಪೌಷ್ಟಿಕ ಸ್ಥಿತಿ** | |
| 8 | ತೀವ್ರ ನ್ಯೂನ್ಯ ಪೋಷಣೆಯಿಂದ ಬಳಲುತ್ತಿರುವ ಮಕ್ಕಳು | 6.20 % |
| 9 | ಮಾದ್ಯಮಿಕ ಹಂತದ ನ್ಯೂನ್ಯ ಪೋಷಣೆಯಿಂದ ಬಳಲುತ್ತಿರುವ ಮಕ್ಕಳು | 45.40 % |
| 11 | ಕಡಿಮೆ ನ್ಯೂನ್ಯ ಪೋಷಣೆಯಿಂದ ಬಳಲುತ್ತಿರುವ ಮಕ್ಕಳು | 39.0 % |
| 12 | ಆರೋಗ್ಯವಂತ ಮಕ್ಕಳು | 9.40 % |
| 13 | ರಕ್ತಹೀನತೆಯಿಂದ ಬಳಲುವ ಮಕ್ಕಳ ಪ್ರಮಾಣ (6–35 ತಿಂಗಳು) | 70.6 % |

ಮಾಹಿತಿ: ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

**ಸಮಗ್ರ ಶಿಶು ಅಭಿವೃದ್ಧಿ ಯೋಜನೆ ಪ್ರಗತಿ ಪರಿಶೀಲನೆ ವರದಿ :** ಯೋಜನೆ ಆರಂಭಿಸಿ 20ವರ್ಷ ಪೂರೈಸಿದ ಅವಧಿಯಲ್ಲಿ (National Institute of Public Cooparation and Child Development(NIPCCD) and Central technological Committee on Integrated Mother and Child Development(1975-1995) ಕೈಗೊಂಡ ಅಧ್ಯಯನದ ಸಾರ ಈ ಕೆಳಗಿನಂತಿದೆ

- ಸಮಗ್ರ ಶಿಶು ಅಭಿವೃದ್ಧಿ ಯೋಜನೆ ವ್ಯಾಪ್ತಿಗೊಳಪಟ್ಟ ಪ್ರದೇಶದಲ್ಲಿ ಶಿಶುಗಳ ಮರಣಸಂಖ್ಯೆ ವ್ಯಾಪ್ತಿಗೊಳಪಡದ ಪ್ರದೇಶಗಳಿಗಿಂತ ಕಡಿಮೆ ಇರುವುದು

- ಶೇಕಡ 80ಕ್ಕಿಂತ ಅಧಿಕ ಮಕ್ಕಳು ರೋಗನಿರೋಧಕ ಲಸಿಕೆಗಳನ್ನು ಪಡೆದಿರುವುದು

- ಮಹಿಳೆಯರಲ್ಲಿ ಪ್ರಸವಪೂರ್ವ ಹಾಗೂ ಪ್ರಸವನಂತರದ ಆರೈಕೆ ಕುರಿತು ಅರಿವು ಮೂಡಿರುವುದು

- ಶೇಕಡ 90 ಅಂಗನವಾಡಿ ಕೇಂದ್ರಗಳಲ್ಲಿ ಪೂರಕ ಪೌಷ್ಟಿಕ ಆಹಾರ ವಿತರಣೆಯಾಗುತ್ತಿರುವುದು

- ಶೇಕಡ 76ರಷ್ಟು ಮಕ್ಕಳು ಬೆಳವಣಿಗೆ ಪರಿಶೀಲನೆಗೆ ಒಳಪಟ್ಟಿರುವುದು ಹಾಗೂ

- ಸರಾಸರಿ ವರ್ಷದಲ್ಲಿ ಮಕ್ಕಳು 298 ದಿನಗಳು ಪೂರಕ ಪೌಷ್ಟಿಕ ಆಹಾರ ಪಡೆಯುತ್ತಿರುವುದಾಗಿ ವರದಿ ಮಾಡಿರುತ್ತಾರೆ.

**2. ಶಿಕ್ಷಣದೊಂದಿಗೆ ಪೌಷ್ಟಿಕತೆ–ಮಧ್ಯಾಹ್ನದ ಬಿಸಿಯೂಟ ಯೋಜನೆ :** ಮಕ್ಕಳನ್ನು ತೀವ್ರವಾಗಿ ಕಾಡುತ್ತಿರುವ ನ್ಯೂನ್ಯ ಪೋಷಣೆಯು ಮಕ್ಕಳ ಆರೋಗ್ಯ ಮತ್ತು ಬೆಳವಣಿಗೆಯನ್ನು ಕುಂಠಿತಗೊಳಿಸುತ್ತದೆ. ಇದರ ಪರಿಣಾಮವಾಗಿ ಶಾಲಾ ಹಾಜರಾತಿ ಮತ್ತು ಶಾಲೆಯಲ್ಲಿ ಮಕ್ಕಳ ಪ್ರಗತಿ ಮೇಲೆಯೂ ಸಹ ಪ್ರತಿಕೂಲ ಪ್ರಭಾವವನ್ನು ಬೀರಿದೆ. ಮಕ್ಕಳಲ್ಲಿಯ ನ್ಯೂನ್ಯ ಪೋಷಣೆ ನಿವಾರಿಸಲು ಸರಕಾರವು ನಿರಂತರವಾಗಿ ಪ್ರಯತ್ನಪಡುತ್ತಿದೆ. ಇದಕ್ಕಾಗಿ ಕೇಂದ್ರ ಹಾಗೂ ರಾಜ್ಯಸಕಾರವು ಅನೇಕ ಪೌಷ್ಟಿಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿದೆ. ಅವುಗಳಲ್ಲಿ ಶಾಲಾ ಮಕ್ಕಳಿಗೆ ಉಚಿತ ಊಟ ವ್ಯವಸ್ಥೆ ಅಥವಾ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮವು ಮಕ್ಕಳ ನ್ಯೂನ್ಯ ಪೋಷಣೆ ನಿವಾರಿಸುವ ಕಾರ್ಯಕ್ರಮಗಳಲ್ಲಿ ಮಹತ್ವದ್ದಾಗಿದೆ. ವಿಶ್ವದ ವಿವಿಧೆಡೆ ಶಾಲಾ ಮಕ್ಕಳ ಆಹಾರ ಯೋಜನೆ ಕುರಿತ ಮಾಹಿತಿಯನ್ನು ಕೋಷ್ಟಕ 4.26ರಲ್ಲಿ ನೀಡಿದೆ ಹಾಗೂ ಕೋಷ್ಟಕ 4.27 ಭಾರತ ದೇಶದಲ್ಲಿ ವಿವಿಧ ರಾಜ್ಯಗಳಲ್ಲಿ ಮಧ್ಯಾಹ್ನದ ಬಿಸಿಯೂಟ ಯೋಜನೆ ಆರಂಭಿಸಿದ ವಿವರವನ್ನು ದಾಖಲಿಸಿದೆ.

ಕೋಷ್ಟಕ 4.26 ವಿವಿಧ ದೇಶಗಳಲ್ಲಿ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮ

| ಕ್ರ ಸಂ. | ದೇಶ | ಆರಂಭವಾದ ವರ್ಷ | ಆಹಾರದ ವಿಧ | ಪರಾಮರ್ಶನ |
|---|---|---|---|---|
| 1 | ಜರ್ಮನಿ | 1791 | -- | ದೇವದಾಸ್, 1983 |
| 2 | ಫ್ರಾನ್ಸ್ | 1865 | ತರಕಾರಿ ಸೂಪ್, ಮೀನು, ಮಾಂಸ, ಮೊಟ್ಟೆ, ಡೆಸರ್ಟ್, ಚೀಜ್ ಮತ್ತು ಹಾಲು | ದೇವದಾಸ್, 1983 |
| 3 | ಬ್ರಿಟೀಷ್ ದ್ವೀಪಗಳು | 1864 | ಸ್ಥಳೀಯ ಆಹಾರ | ದೇವದಾಸ್, 1983 |
| 4 | ಜಪಾನ್ | 1889 | ಗೋಧಿ ಹಿಟ್ಟು ಮತ್ತು ಹಾಲು | ದೇವದಾಸ್, 1983 |
| 5 | ಇಂಗ್ಲೆಂಡ್ | 1906 | ಪಾರಿಡ್ಜ್, ಬ್ರೆಡ್, ಜಾಮ್ ಮತ್ತು ಹಾಲು | ದೇವದಾಸ್, 1983 |
| 6 | ಭಾರತ | 1925 | ಪ್ರಮುಖ ಧಾನ್ಯಗಳು ಮತ್ತು | ರಾವ್,1978 |
| 7 | ಸ್ವಿಟ್ಜರ್‌ಲ್ಯಾಂಡ್ | 1930 | ಹಾಲು | ರಾವ್, 1978 |
| 8 | ಐರ್‌ಲ್ಯಾಂಡ್ | 1933 | ಮಾಂಸದ ಸ್ಯಾಂಡ್ ವಿಚ್, ಚೀಜ್, ಜಾಮ್ ಮತ್ತು ಹಾಲು | ರಾವ್, 1978 |
| 9 | ಬ್ರೆಜಿಲ್ | 1946 | ಪಾರಿಡ್ಜ್ ಮತ್ತು ಧಾನ್ಯದ ಹಿಟ್ಟು ಬೆರೆಸಿದ ಹಾಲು, ಬ್ರೆಡ್ ಮತ್ತು ಜಾಮ್ | ಸಾಂಪ್‌ಸನ್ ಮತ್ತು ಕಾರ್ಲೊಸ್, 1991 |
| 10 | ಯು.ಎಸ್.ಎ. | 1946 | ಮಾಂಸ, ವಿವಿಧ ತರಕಾರಿಗಳು ಮತ್ತು ಹಣ್ಣುಗಳು, ಬ್ರೆಡ್ ಮತ್ತು ಹಾಲು | ರಾಡ್ಜಿಕೊವಾಸ್ಕಿ ಮತ್ತು ಗಾಲೆ, 1984 |
| 11 | ಆಸ್ಟ್ರೇಲಿಯಾ | 1950 | ಹಾಲು | ದೇವದಾಸ್, 1983 |
| 12 | ಕೊರಿಯಾ | 1953 | ಸ್ಥಳೀಯ ಆಹಾರ | ದೇವದಾಸ್, 1983 |
| 13 | ಚೀನಾ | 1957 | ಗೋಧಿಹಿಟ್ಟು ಮತ್ತು ಹಾಲಿನಪ್ಡುಡಿ | ದೇವದಾಸ್, 1983 |
| 14 | ನೆದರ್‌ಲ್ಯಾಂಡ್ | 1960 | ಹಾಲು | ದೇವದಾಸ್, 1983 |
| 15 | ಇಂಡೋನೇಷ್ಯೇಸಿಯಾ | 1969 | ಸೋಯಾ ಮತ್ತು ಕಾರ್ನ್‌ನ ಖಾದ್ಯ | ದೇವದಾಸ್, 1983 |

**ಕೋಷ್ಟಕ 4.27 ಭಾರತ ದೇಶದಲ್ಲಿ ವಿವಿಧ ರಾಜ್ಯಗಳಲ್ಲಿ ಮಧ್ಯಾಹ್ನದ ಬಿಸಿಯೂಟ ಯೋಜನೆ**

| ಕ್ರ ಸಂ. | ರಾಜ್ಯಗಳು | ಆರಂಭವಾದ ವರ್ಷ | ಪ್ರತಿ ಮಗುವಿಗೆ ನಿಗಧಿಪಡಿಸಿದ ಆಹಾರ | ಇಲಾಖೆ |
|---|---|---|---|---|
| 1 | ತಮಿಳು ನಾಡು | 1925 | 360 ಗ್ರಾಂ ಅನ್ನ ಮತ್ತು 240 ಗ್ರಾಂ ಸಾಂಬರ್ | ಬಿಸಿಯೂಟ ಯೋಜನೆ ಇಲಾಖೆ |
| 2 | ಕೇರಳ | 1941 | ಅಕ್ಕಿ ಅಥವಾ ಗೋಧಿ ಗಂಜಿ ಜತೆಗೆ ಬೇಯಿಸಿದ ಬೇಳೆ ಅಥವಾ ಗೆಡ್ಡೆ ಗೆಣಸುಗಳು | ಶಿಕ್ಷಣ ಇಲಾಖೆ |
| 3 | ಮಹಾರಾಷ್ಟ್ರ | 1942 | ಕೆನೆರಹಿತ ಹಾಲಿನ ಪುಡಿ | ರಾಜ್ಯದ ಗ್ರಾಮೀಣ ಅಭಿವೃದ್ಧಿ ಇಲಾಖೆ ಮತ್ತು ಚಿಕ್ಕ ಉದ್ಯಮಗಳ ಅಭಿವೃದ್ಧಿ ಇಲಾಖೆ |
| 4 | ಕರ್ನಾಟಕ | 1946 | ಅನ್ನ–8 ಔನ್ಸ್ ಮತ್ತು ಮೊಸರು–4ಔನ್ಸ್ | ಶಿಕ್ಷಣ ಇಲಾಖೆ |
| 5 | ಪಾಂಡಿಚೇರಿ | 1947 | ಅನ್ನ ಮತ್ತು ಸಾಂಬರ್ | ಶಿಕ್ಷಣ ಇಲಾಖೆ |
| 6 | ಉತ್ತರ ಪ್ರದೇಶ | 1953 | ಮೊಳಕೆ ಭರಿಸಿದ ಕಾಳುಗಳು, ಕಡಲೆಬೀಜ, ಮಂಡಕ್ಕಿ, ಅನ್ನ, ಬೇಯಿಸಿದ ಆಲುಗಡ್ಡೆ ಅಥವಾ ಋತುಮಾನಕ್ಕನುಗುಣವಾಗಿ ದೊರೆಯುವ ಹಣ್ಣುಗಳು | Voluntary basis |
| 7 | ಲಕ್ಷದ್ವೀಪ್ | 1956 | ಅನ್ನ–130 ಗ್ರಾಂ ಮತ್ತು ಸಾರು | ಶಿಕ್ಷಣ ಇಲಾಖೆ |
| 8 | ಒರಿಸ್ಸಾ | 1959 | -- | ಸಮುದಾಯ ಅಭಿವೃದ್ಧಿ ಇಲಾಖೆ |
| 9 | ಹರಿಯಾಣ | 1961 | CARE supplement* | ಶಿಕ್ಷಣ ಇಲಾಖೆ |
| 10 | ರಾಜಸ್ಥಾನ | 1962 | CARE supplement* | ಶಿಕ್ಷಣ ಇಲಾಖೆ |
| 11 | ಪಂಜಾಬ್ | 1962 | ಹಾಲು | ಬ್ಲಾಕ್ ಅಭಿವೃದ್ಧಿ ಕಛೇರಿ ಮತ್ತು ಗ್ರಾಮ ಪಂಚಾಯತ್ |
| 12 | ಆಂದ್ರ ಪ್ರದೇಶ | 1962 | CARE supplement* | ಶಿಕ್ಷಣ ಇಲಾಖೆ |
| 13 | ಮದ್ಯ ಪ್ರದೇಶ | 1965 | CARE supplement* | ರಾಜ್ಯ ಸರ್ಕಾರದ ಬುಡಕಟ್ಟು ಮತ್ತು ಹರಿಜನ ಕಲ್ಯಾಣ ಇಲಾಖೆ |
| 14 | ಗೋವಾ, ದಿಯು ಮತ್ತು ದಾಮನ್ | 1965–66 | ಸ್ಥಳೀಯ ಲಭ್ಯ ಆಹಾರ, ಅನ್ನ, ಬಿಸ್ಕತ್ತು, ಬ್ರೆಡ್ ಕೇಕ್, ಬಾಳೆಹಣ್ಣು | ಶಿಕ್ಷಣ ಇಲಾಖೆ |
| 15 | ಪಶ್ಚಿಮ ಬಂಗಾಳ | 1965 | ಬ್ರೆಡ್ | ಶಿಕ್ಷಣ ಇಲಾಖೆ |
| 16 | ಸಿಕ್ಕಿಮ್ | 1976 | ಬ್ರೆಡ್, ಬಿಸ್ಕೆಟ್ಸ್ | ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ |
| 17 | ತ್ರಿಪುರಾ | 1980 | ಋತುಮಾನಕ್ಕನುಗುಣವಾಗಿ ಲಭ್ಯವಿರುವ ಹಣ್ಣುಗಳು ಮತ್ತು ಒಂದೊಂದು ಬಾರಿ ಕಚೋರಿ | ಶಿಕ್ಷಣ ಇಲಾಖೆ |
| 18 | ಗುಜರಾತ್ | -- | ಉಪಮಾ, ಸುಖಡಿ, ಶಿರಾ, ವಡಾ | ಶಿಕ್ಷಣ ಇಲಾಖೆ |

Note 1.CARE supplement*– ಬಲ್ಗರ್ ಗೋಧಿ, ಕಾರ್ನ್–ಸೋಯಾ ಮಿಶ್ರಿತ ಆಹಾರ, ಸಲಾಡ್ ಎಣ್ಣೆಯನ್ನು ಒಳಗೊಂಡಿದೆ

2. -- ಮಾಹಿತಿ ದೊರೆತಿಲ್ಲ

ನಮ್ಮ ದೇಶದಲ್ಲಿ ಈ ಯೋಜನೆಯನ್ನು ಮೊಟ್ಟಮೊದಲನೆಯದಾಗಿ ಆರಂಭಿಸಿದ ಖ್ಯಾತಿ ತಮಿಳುನಾಡಿಗೆ ಸಲ್ಲುತ್ತದೆ. 1925ರಲ್ಲಿ ಮದ್ರಾಸ್‌ನಲ್ಲಿ ಮೊದಲು ಪ್ರಾರಂಭಿಸಿತು. 1965ರಲ್ಲಿ CARE ಸಂಸ್ಥೆಯ ಸಹಾಯ ಮತ್ತು ಸಹಯೋಗದೊಂದಿಗೆ ರಾಜ್ಯದ 1.2 ದಶಲಕ್ಷ ಮಕ್ಕಳಿಗೆ ಯೋಜನೆಯನ್ನು ವಿಸ್ತರಿಸುವುದರ ಮೂಲಕ ತಮಿಳುನಾಡು ರಾಜ್ಯವು ಈ ಕಾರ್ಯಕ್ರಮದ ಯಶಸ್ಸಿಗೆ ದೇಶದಲ್ಲಿಯೇ ಉತ್ತಮ ಹೆಸರನ್ನು ಪಡೆಯಿತು. ಮಕ್ಕಳ ಶಾಲಾ ದಾಖಲಾತಿ ವೃದ್ಧಿಸುವುದು, ಶಾಲೆ ಬಿಡುವುದನ್ನು ತಪ್ಪಿಸುವುದು ಹಾಗೂ ಶಾಲಾ ಮಕ್ಕಳ ಪೌಷ್ಟಿಕ ಮಟ್ಟ ಸುಧಾರಣೆ ಮಾಡುವ ಉದ್ದೇಶಗಳೊಂದಿಗೆ ಪ್ರಾಥಮಿಕ ಶಿಕ್ಷಣದೊಂದಿಗೆ ಪೌಷ್ಟಿಕತೆ ಸುಧಾರಣೆಗೆ ಸಹಾಯವಾಗಬಲ್ಲ ರಾಷ್ಟ್ರೀಯ ಕಾರ್ಯಕ್ರಮವು 1995 ಆಗಸ್ಟ್ 15ರಂದು ಕಾರ್ಯಾರಂಭಿಸಿತು. ಆರಂಭಿಕ ಹಂತದಲ್ಲಿ ದೇಶದ ಒಟ್ಟು 2408 ಬ್ಲಾಕ್ ಗಳನ್ನು ಒಳಗೊಂಡಿದ್ದು 2002ರ ವೇಳೆಗೆ ಯೋಜನೆಯನ್ನು 1ರಿಂದ 5ನೇ ತರಗತಿಯಲ್ಲಿ ಓದುತ್ತಿರುವ ಎಲ್ಲ ಸರಕಾರಿ ಶಾಲೆಗಳು ಮತ್ತು ಸರಕಾರದಿಂದ ಮಾನ್ಯತೆ ಪಡೆದ ಎಲ್ಲ ಶಾಲೆಗಳಿಗೆ ವಿಸ್ತರಿಸಲಾಯಿತು.

ಪ್ರತಿ ಮಕ್ಕಳಿಗೆ 300 ಕಿಲೊ ಕ್ಯಾಲೊರಿ ಶಕ್ತಿ ಹಾಗೂ 8–12 ಗ್ರಾಂ ಪ್ರೊಟೀನ್ ಹೊಂದಿರುವಂತಹ ಸಿದ್ಧಪಡಿಸಿದ ಖಾದ್ಯವನ್ನು 1–5ನೇ ತರಗತಿಯಲ್ಲಿ ಓದುತ್ತಿರುವ ಮಕ್ಕಳಿಗೆ ವಿತರಿಸುವಂತೆ ಸರಕಾರವು ಪರಿಷ್ಕರಿಸಿದ ಯೋಜನೆಯನ್ನು 2004ರ ಸೆಪ್ಟಂಬರ್ ಮಾಹೆಯಲ್ಲಿ ಜಾರಿಗೊಳಿಸಿತು. ಪ್ರತಿ ಮಗುವಿಗೆ ಆಹಾರದ ಖರ್ಚು ರೂ. ಒಂದರಂತೆ ನಿಗಧಿಪಡಿಸಿತು ಮತ್ತು ಬರಗಾಲ ಪೀಡಿತ ಪ್ರದೇಶಗಳಲ್ಲಿನ ಮಕ್ಕಳಿಗೆ ಬೇಸಿಗೆ ರಜೆಯಲ್ಲಿಯೂ ಊಟ ಕೊಡಬೇಕೆಂದು ಸೂಚಿಸಿತು.

ಈ ಯೋಜನೆಯನ್ನು ಮತ್ತೆ ಅಕ್ಟೋಬರ್ 2007ರಲ್ಲಿ ಪುನರ್ ಪರಿಷ್ಕರಿಸಿ ಯೋಜನೆಯ ಲಾಭವನ್ನು 7ನೇ ತರಗತಿವರೆಗೆ ಓದುತ್ತಿರುವ ಮಕ್ಕಳಿಗೂ ವಿಸ್ತರಿಸುವಂತೆ ನಿರ್ದೇಶಿಸಿತು ಮತ್ತು ಹಿರಿಯ ಪ್ರಾಥಮಿಕ ಶಾಲಾ ಮಕ್ಕಳಿಗೆ ಒಂದು ದಿನಕ್ಕೆ ಒಂದು ಮಗುವಿಗೆ 700 ಕಿಲೊ ಕ್ಯಾಲೊರಿ ಶಕ್ತಿ ಹಾಗೂ 20ಗ್ರಾಂ ನಷ್ಟು ಪ್ರೋಟೀನ್ ಒದಗಿಸಲು ಪ್ರತಿ ಮಗುವಿಗೆ 150ಗ್ರಾಂ ಧಾನ್ಯವನ್ನು ನಿಗಧಿಪಡಿಸಿತು.

**ಯೋಜನೆಯ ಉದ್ಧೇಶಗಳು**

1. ದಾಖಲಾತಿ ಮತ್ತು ಹಾಜರಾತಿಯನ್ನು ಉತ್ತಮಪಡಿಸುವುದು
2. ಶಾಲೆಯನ್ನು ಮಧ್ಯದಲ್ಲಿ ತೊರೆಯುವುದನ್ನು ತಪ್ಪಿಸುವುದು
3. ಪೌಷ್ಟಿಕತೆಯನ್ನು ಹೆಚ್ಚಿಸುವುದರ ಮೂಲಕ ಮಕ್ಕಳ ಆರೋಗ್ಯ ವೃದ್ಧಿಸುವುದು
4. ಕಲಿಕೆಯ ಮಟ್ಟವನ್ನು ಉತ್ತಮಪಡಿಸುವುದು

**ಕೋಷ್ಟಕ 4.28 ಮಧ್ಯಾಹ್ನದ ಬಿಸಿಯೂಟ ಯೋಜನೆಯ ಫಲಾನುಭವಿಗಳು (ಲಕ್ಷಗಳಲ್ಲಿ)**

| ತರಗತಿ | ದಾಖಲಾತಿ | ಹಾಜರಾತಿ | ಫಲಾನುಭವಿಗಳು |
|---|---|---|---|
| **1–5** | 39.21 | 36.90 | 34.99 |
| **6–8** | 22.51 | 21.32 | 20.04 |
| **9–10** | 12.78 | 12.22 | 11.13 |
| ಒಟ್ಟು | 74.50 | 70.44 | 66.15 |

Source: www.dell.co.in/

**ಕೋಷ್ಟಕ 4.29 ಮಧ್ಯಾಹ್ನದ ಬಿಸಿಯೂಟ ಯೋಜನೆಯ ಫಲಾನುಭವಿಗಳಿಗೆ ದಿನಂಪ್ರತಿ ದೊರೆಯುವ ಆಹಾರ ಧಾನ್ಯದ ಪ್ರಮಾಣ**

| ಆಹಾರ ಪದಾರ್ಥಗಳು | ತರಗತಿ | | |
|---|---|---|---|
| | **1–5** | **6–8** | **9–10** |
| | ಪ್ರಮಾಣ (ಗ್ರಾಂ) | ಪ್ರಮಾಣ (ಗ್ರಾಂ) | ಪ್ರಮಾಣ (ಗ್ರಾಂ) |
| ಅಕ್ಕಿ | 100 | 150 | 150 |
| ಬೇಳೆ | 20 | 30 | 30 |
| ತರಕಾರಿ | 50 | 75 | 75 |
| ಎಣ್ಣೆ | 5 | 7.5 | 7.5 |
| ಉಪ್ಪು | 2 | 4 | 4 |

Source: www.dell.co.in/

**ಕೋಷ್ಟಕ 4.30 ಅರ್ಹ ಫಲಾನುಭವಿಗಳಿಗೆ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದಡಿ ನಿಗಧಿಪಡಿಸಿರುವ ಪೋಷಕಾಂಶಗಳು**

| ಪೋಷಕಾಂಶಗಳು | ಪ್ರಾಥಮಿಕ ಶಾಲಾ ಮಕ್ಕಳು | ಹಿರಿಯ ಪ್ರಾಥಮಿಕ ಶಾಲಾ ಮಕ್ಕಳು |
|---|---|---|
| ಶಕ್ತಿ (ಕಿ. ಕೆಲೊರಿ) | 450 | 700 |
| ಪ್ರೋಟೀನ್ (ಗ್ರಾಂ) | 12 | 20 |
| ಧಾನ್ಯಗಳ ಪ್ರಮಾಣ(ಗ್ರಾಂ) | 100 | 150 |
| ಸೂಕ್ಷ್ಮ ಪೋಷಕಾಂಶಗಳು: ಕಬ್ಬಿಣಾಂಶ, ಫಾಲಿಕ್ ಆಮ್ಲ ಮತ್ತು 'ಎ' ಜೀವಸತ್ವವುಳ್ಳ ಆಹಾರಗಳನ್ನು ಆಯ್ಕೆಮಾಡುವುದು | | |

Source: www.dell.co.in/

**ಮದ್ಯಾಹ್ನದ ಬಿಸಿಯೂಟ ಯೋಜನೆ ಕುರಿತು ವಿಜ್ಞಾನಿಗಳು ಹಾಗೂ ಸಂಸ್ಥೆಗಳು ಪರಿಶೀಲಿಸಿ ಮಂಡಿಸಿದ ವರದಿ :** ಶಾಲೆಗಳಲ್ಲಿ ಮಧ್ಯಾಹ್ನದ ಊಟ ಕೊಡುವುದರಿಂದ ಮಕ್ಕಳ ಶಾಲಾ ದಾಖಲಾತಿ ಮತ್ತು ಹಾಜರಾತಿಯಲ್ಲಿ ಗಣನೀಯ ಹೆಚ್ಚಳ ಕಂಡುಬಂದಿರುವುದರಿಂದ ಇದು ಪ್ರಾಥಮಿಕ ಶಿಕ್ಷಣವನ್ನು ಸಾರ್ವತ್ರಿಕಗೊಳಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತದೆಂದು 2005ರಲ್ಲಿ ಅಧ್ಯಯನ ಕೈಗೊಂಡ ಪ್ರೊಫೆಸರ್ ಅಮರ್ತ್ಯಸೇನ್ ತಂಡವು ಅಭಿಪ್ರಾಯ ಪಟ್ಟಿದೆ. ಅದರಲ್ಲಿಯೂ ಹೆಣ್ಣುಮಕ್ಕಳು ಹಾಗೂ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಮಕ್ಕಳು ಹೆಚ್ಚು ಹೆಚ್ಚು ದಾಖಲಾಗಿರುವುದು ಇವರ ಅಧ್ಯಯನ ತಿಳಿಸುತ್ತದೆ.

ರಾಜಸ್ಥಾನ ರಾಜ್ಯದಲ್ಲಿಯ ಬಿಸಿಯೂಟ ಯೋಜನೆಯ ವಸ್ತುಸ್ಥಿತಿ ವಿಶ್ಲೇಷಣೆ ಕುರಿತ ರಾಜಸ್ಥಾನ ವಿಶ್ವ ವಿದ್ಯಾನಿಲಯ ಹಾಗೂ ಗಬಖಅಇಈ 2005ರಲ್ಲಿ ಜಂಟಿಯಾಗಿ ಕೈಗೊಂಡ ಅಧ್ಯಯನವು ತಿಳಿಸುವಂತೆ ಎಲ್ಲ ಮಕ್ಕಳು ಜಾತಿ ಹಾಗೂ ಲಿಂಗ ಭೇದಭಾವವಿಲ್ಲದೆ ಎಲ್ಲರೂ ಒಟ್ಟಿಗೆ ಕುಳಿತು ಊಟಮಾಡುವುದರಿಂದ ಸಾಮಾಜಿಕ ನ್ಯಾಯ ಒದಗಿಸುವಲ್ಲಿ, ಲಿಂಗ ತಾರತಮ್ಯ ಮತ್ತು ಜಾತಿ ಭೇದಭಾವವನ್ನು ಹೋಗಲಾಡಿಸಲು ಸಹಕಾರಿಯಾಗಿದೆ ಹಾಗೂ ಬಿಸಿಯೂಟ ಅಡುಗೆ ತಯಾರಿಸಲು ಹೆಣ್ಣುಮಕ್ಕಳಿಗೆ ಅವಕಾಶ ನೀಡಿರುವುದರಿಂದ ಹೆಣ್ಣುಮಕ್ಕಳಿಗೆ ಹೆಚ್ಚಿನ ಉದ್ಯೋಗಾವಕಾಶ ಕಲ್ಪಿಸಿದೆ ಎಂದು ಅಭಿಪ್ರಾಯ ಪಟ್ಟದೆ.

ಮಧ್ಯಪ್ರದೇಶದ 70 ಹಿಂದುಳಿದ ಹಳ್ಳಿಗಳಲ್ಲಿ ಬಿಸಿಯೂಟ ಯೋಜನೆ ಆರಂಭಿಸಿದ ನಂತರ ಕೈಗೊಂಡ ಸರ್ವೆ ಸಮೀಕ್ಷೆಯಂತೆ ಮಕ್ಕಳ ಶಾಲಾ ದಾಖಲಾತಿಯು 15ಪ್ರತಿಶತದಷ್ಟು ಹೆಚ್ಚಿರುವುದನ್ನು ತಿಳಿಸುತ್ತದೆ. ಹಾಗೆಯೇ ಅದರಲ್ಲಿಯೂ ಸಮಾಜದ ಕೆಳಸ್ಥರದಲ್ಲಿರುವ ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡದ ಮಕ್ಕಳ ಶಾಲಾ ದಾಖಲಾತಿಯು ಶೇಕಡ 40ರಷ್ಟು ಹೆಚ್ಚಿದೆ ಎಂದು ಸಮಾಜ ಪ್ರಗತಿ ಸಹಯೋಗ ಸಂಸ್ಥೆ 2005ರಲ್ಲಿ ಪ್ರಕಟಿಸಿದ ವರದಿಯಲ್ಲಿ ತಿಳಿಸಿದೆ. ಅಕ್ಷರದಾಸೋಹ ಕಾರ್ಯಕ್ರಮ ಅನುಷ್ಠಾನವು ಗ್ರಾಮೀಣ ಭಾಗದ ಮಕ್ಕಳ ದಾಖಲೆಯಲ್ಲಿ ತೀವ್ರ ಏರಿಕೆಯಾಗಿರುವುದಾಗಿ ಮತ್ತು ಶಿಕ್ಷಕರ ಗೈರುಹಾಜರಿ ತಡೆಯುವಲ್ಲಿ ಯಶಸ್ವಿ ಕಂಡಿದೆ ಎಂದು ಕರ್ನಾಟಕದಲ್ಲಿ ಅಕ್ಷರದಾಸೋಹ ಕುರಿತಾಗಿ ಸಮಗ್ರ ಅಧ್ಯಯನ ಮಾಡಿದ ಪ್ರೊಫೆಸರ್ ರಮಾ ನಾಯಕ್ ಅಭಿಪ್ರಾಯ ಪಟ್ಟಿದ್ದಾರೆ.

**ಯೋಜನೆ ಕುರಿತ ತಜ್ಞರ ಅಭಿಪ್ರಾಯ ಇಂತಿದೆ.**

- ಯೋಜನೆಯ ಜಾರಿಯಿಂದಾಗಿ ಹೆಚ್ಚು ಹೆಚ್ಚು ಮಕ್ಕಳು ಶಾಲೆಗೆ ದಾಖಲಾಗುವುದರೊಂದಿಗೆ ನಿಯಮಿತವಾಗಿ ಶಾಲೆಗೆ ಹಾಜರಾಗುವುದು ಸಹ ಕಂಡುಬಂದಿತು.
- ಈ ಯೋಜನೆಯಿಂದಾಗಿ ಅನೇಕ ಮಕ್ಕಳು ಶಾಲೆಯಲ್ಲಿರುವಾಗ ಹಸಿವಿನಿಂದ ಬಳಲುತ್ತಿರುವುದನ್ನು ತಪ್ಪಿಸಿದಂತಾಯಿತು. ಅನೇಕ ಮಕ್ಕಳು ದೂರದ ಪ್ರದೇಶದಿಂದ ಶಾಲೆಗೆ ಬರುವಂತಹ ಮಕ್ಕಳು ಮನೆಯಲ್ಲಿ ತಂದೆ-ತಾಯಿಗಳಿಗೆ ಮಧ್ಯಾಹ್ನದ ಊಟ ಕಳುಹಿಸಲು ಸಾಧ್ಯವಿಲ್ಲದವರಿಗೆ, ಬೆಳಗಿನ

ತಿಂಡಿ ತಿನ್ನಲು ಸಾಧ್ಯವಿಲ್ಲದೆ ಹಸಿವಿನಿಂದಲೇ ಶಾಲೆಗೆ ಬಂದು ಪಾಠ ಕೇಳುವ ಮಕ್ಕಳಿಗೆ ಇದು ವರದಾನವಾಗಿದೆ.

- ನಿಯಮಿತವಾಗಿ ಹಾಗೂ ಕಡ್ಡಾಯವಾಗಿ ಮಕ್ಕಳಿಗೆ ಅವರ ದಿನದ ಅವಶ್ಯಕತೆಯ 1/3 ಭಾಗದಷ್ಟು ಪೋಷಕಾಂಶಗಳು ಲಭ್ಯವಿರುವ ಆಹಾರವನ್ನು ನೀಡುವುದರಿಂದ ಮಕ್ಕಳ ಆರೋಗ್ಯಕರ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿದೆ.
- ಆಹಾರ ನೀಡುವುದರ ಜತೆಗೆ ಮಕ್ಕಳಿಗೆ ಉತ್ತಮ ಹವ್ಯಾಸ ರೂಢಿಸಿಕೊಳ್ಳುವ ಶಿಕ್ಷಣ ಪ್ರಾಯೋಗಿಕವಾಗಿ ನೀಡಲು ಸಾಧ್ಯವಾಗಿಸಿದೆ. ಉದಾಹರಣೆಗೆ ಊಟದ ಮೊದಲು ಕೈ ತೊಳೆಯುವುದು.
- ಶಾಲೆಗೆ ಹಾಜರಾಗುವ ಎಲ್ಲ ಮಕ್ಕಳಿಗೂ ಒಟ್ಟಿಗೆ ಆಹಾರ ತಯಾರಿಸಿ ಒಂದೇ ಸೂರಿನಡಿ ಊಟ ಬಡಿಸುವುದರಿಂದ ಸಮಾನತೆಯ ಭಾವನೆ ಬೆಳೆಸಲು ಸಹಕಾರಿಯಾಗಿದೆ.
- ಒಟ್ಟಾರೆಯಾಗಿ ಈ ಯೋಜನೆಯು ಮಕ್ಕಳ ಬೌದ್ಧಿಕ, ಶಾರೀರಿಕ ಹಾಗೂ ಸಾಮಾಜಿಕ ಬೆಳವಣಿಗೆಗೆ ಸಹಕಾರಿಯಾಗಿದೆ.

3. **ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆ :** ಭಾರತ ದೇಶವು ಯುದ್ಧ ಸಮಯದಲ್ಲಿಯ ಆಹಾರದ ಅಭಾವವನ್ನು ನೀಗಿಸುವುದಕ್ಕೋಸ್ಕರವಾಗಿ 1939ನೇ ಇಸವಿಯಲ್ಲಿ ಪಡಿತರ ವ್ಯವಸ್ಥೆ ಜಾರಗೆ ತಂದಿತು. ಬ್ರಿಟೀಶ್ ಸರ್ಕಾರವು ಈ ಯೋಜನೆಯನ್ನು ಮಹಾರಾಷ್ಟ್ರದ ಬಾಂಬೆಯಲ್ಲಿ ಮೊಟ್ಟಮೊದಲು ಆರಂಭಿಸಿತು. ನಂತರ ದೇಶದ ಪ್ರಮುಖ ಆರು ನಗರಗಳಿಗೆ ವಿಸ್ತರಿಸಿತು. 1960–70ರ ದಶಕದಲ್ಲಿ ದೇಶವು ಎದುರಿಸಿದ ಬರ ಪರಿಸ್ಥಿತಿಯಿಂದಾಗಿ ಉಂಟಾದ ಆಹಾರದ ಅಭಾವವನ್ನು ತಡೆಗಟ್ಟಲು ಪಡಿತರ ವ್ಯವಸ್ಥೆಯನ್ನು ಸದೃಢಗೊಳಿಸಿ ಸಾರ್ವತ್ರಿಕಗೊಳಿಸುವುದು ಸರ್ಕಾರಕ್ಕೆ ಅವಶ್ಯಕತೆ ಎಂದೆನಿಸಿತು. ಆದ್ದರಿಂದ ದೇಶದ ಎಲ್ಲ ಭಾಗದ ಅವಶ್ಯಕತೆಯುಳ್ಳ ಜನತೆಗೆ ಆಹಾರ ಧಾನ್ಯವನ್ನು ಪೂರೈಸುವುದಕ್ಕಾಗಿ ಪಡಿತರ ವ್ಯವಸ್ಥೆಯನ್ನು ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯಾಗಿ 1970ರಲ್ಲಿ ಮರುರೂಪಿಸಲಾಯಿತು. ಆ ಮೂಲಕ ಪ್ರಮುಖ ನಗರಗಳನ್ನು ಮಾತ್ರ ಒಳಗೊಂಡಿದ್ದ ವ್ಯವಸ್ಥೆಯು ದೇಶದ ಎಲ್ಲ ಅವಶ್ಯಕ ಜನತೆಯನ್ನು ಒಳಗೊಳ್ಳುವ ಒಂದು ಬೃಹತ್ ಆಹಾರ ವಿತರಣೆ ಯೋಜನೆಯಾಗಿ ಕಾರ್ಯನಿರ್ವಹಿಸತೊಡಗಿತು. ಈ ವ್ಯವಸ್ಥೆ ಅಡಿಯಲ್ಲಿ ಕಡಿಮೆ ಬೆಲೆಗೆ ಅವಶ್ಯಕ ಆಹಾರ ಧಾನ್ಯಗಳನ್ನು ಒದಗಿಸುವ ಮೂಲಕ ಬಡತನವನ್ನು ನಿವಾರಿಸುವ ತಂತ್ರವಾಗಿಯೂ ಸಹ ಕಾರ್ಯನಿರ್ವಹಿಸುತ್ತಿದೆ.

**ಯೋಜನೆಯ ಉದ್ದೇಶಗಳು**

- ಬೆಲೆ ಸ್ಥಿರತೆಯನ್ನು ಕಾಪಡುವುದು
- ಬಡ ಜನರ ಕಲ್ಯಾಣ ಬಯಸುವುದು(ಅಶಕ್ತ ಜನರಿಗೆ ಆಹಾರ ಧಾನ್ಯವನ್ನು ಕಡಿಮೆ ಬೆಲೆಯಲ್ಲಿ ಒದಗಿಸುವ ಮೂಲಕ ಆಹಾರ ಲಭ್ಯತೆಯನ್ನು ಹೆಚ್ಚಿಸುವುದು).
- ಆಹಾರದ ತೀವ್ರ ಅಭಾವದಂತಹ ಪರಿಸ್ಥಿತಿಯಲ್ಲೂ ಆಹಾರ ಒದಗಿಸುವುದು.
- ಖಾಸಗಿ ದಾಸ್ತಾನುದಾರರ ಮೇಲೆ ಹಿಡಿತ ಸಾಧಿಸುವುದು.

1939ರಲ್ಲಿ ಆರಂಭಗೊಂಡ ಯೋಜನೆಯು ಇಂದಿನವರೆಗೆ ನಡೆದು ಬಂದ ಹಾದಿಯನ್ನು ವಿಶ್ಲೇಷಿಸಿ ಕೆಳಗಿನಂತೆ ವಿಂಗಡಿಸಲಾಗಿದೆ.

**ಮೊದಲನೆ ಅವಧಿ (1939–1960):** ಈ ಅವಧಿಯನ್ನು ವಿಸ್ತರಣೆ ಅವಧಿ ಎಂದು ಪರಿಗಣಿಸಲಾಗಿದ್ದು, ಈ ಸಮಯದಲ್ಲಿ ಇತರ ಪ್ರಮುಖ ನಗರಗಳಿಗೆ ವಿಸ್ತರಿಸಲಾಗಿದೆ. ಹಾಗೂ ಈ ಅವಧಿಯಲ್ಲಿ ಆಹಾರ ವಿತರಣೆಯು ಆಹಾರವನ್ನು ಇತರ ದೇಶಗಳಿಂದ ಆಮದು ಮಾಡಿಕೊಳ್ಳುವುದರ ಮೇಲೆ ಹೆಚ್ಚು ಅವಲಂಬಿತವಾಗಿತ್ತು.

**ಎರಡನೆಯ ಅವಧಿ (1960–1978):** ಈ ಅವಧಿಯಲ್ಲಿ ಯೋಜನೆಯು ಪ್ರಮುಖವಾಗಿ ಆಡಳಿತಾತ್ಮಕ ಬದಲಾವಣೆಗಳನ್ನು ಕಂಡಿದ್ದು, 1960ರ ದಶಕದಲ್ಲಿನ ಆಹಾರ ಅಭಾವದ ಸಂದಿಗ್ಧ ಸ್ಥಿತಿಯನ್ನು ನಿಭಾಯಿಸುವಲ್ಲಿ ಕಾರ್ಯೋನ್ಮುಖವಾಗಿತ್ತು.

**ಮೂರನೆಯ ಅವಧಿ (1979–1991):** ಈ ಅವಧಿಯನ್ನು ವಿಸ್ತರಣೆ ಅವಧಿ ಎಂದು ಹೇಳಬಹುದು. ಯೋಜನೆ ವ್ಯಾಪ್ತಿಗೆ ಬಹಳಷ್ಟು ಕುಟುಂಬಗಳನ್ನು ಒಳಗೊಳ್ಳುವುದರ ಮೂಲಕ ಕೌಟುಂಬಿಕವಾಗಿ ಪಡಿತರ ಕೊಂಡುಕೊಳ್ಳವ ಸಾಮರ್ಥ್ಯವನ್ನು ಮತ್ತು ಸಂಗ್ರಹಿಸಿಡುವ ಸಾಮರ್ಥ್ಯವನ್ನು ಹೆಚ್ಚಿಸಿತು.

**ನಾಲ್ಕನೆಯ ಅವಧಿ (1992–ಇಂದಿನವರೆಗೆ):** ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯನ್ನು ಗುರಿಪಡಿಸಿದ ಆಹಾರ ವಿತರಣೆ ವ್ಯವಸ್ಥೆಯಾಗಿ ಪರಿವರ್ತಿಸಲಾಗಿದ್ದು ಆ ಮೂಲಕ ಆರ್ಥಿಕ ಉದಾರತೆ ಒದಗಿಸುವ ಉದ್ದೇಶಗಳನ್ನೊಳಗೊಂಡಿತ್ತು.

ಒಟ್ಟಾರೆಯಾಗಿ ಹೇಳುವುದಾದರೆ, 1939ರಲ್ಲಿ ಕೆಲವೇ ಕೆಲವು ನಗರಗಳಲ್ಲಿ ಆಹಾರವನ್ನು ಒದಗಿಸುವ ವ್ಯವಸ್ಥೆಯಾಗಿ ಆರಂಭಗೊಂಡ ಯೋಜನೆಯು ತದನಂತರ ಸಾರ್ವಜನಿಕ ಆಹಾರ ವಿತರಣೆ ವ್ಯವಸ್ಥೆಯಾಗಿ ನಂತರ ಬಡ ಜನತೆಗೆ ಹೆಚ್ಚು ಪ್ರಯೋಜನವಾಗುವ ರೀತಿಯಲ್ಲಿ ಕಾರ್ಯೋನ್ಮುಖವಾಯಿತು.

**ಕೋಷ್ಟಕ 4.31 ಸಾರ್ವತ್ರಿಕ ಆಹಾರ ವಿತರಣೆ ಕಾರ್ಯಕ್ರಮದ ವಿವಿಧ ಯೋಜನೆಗಳು**

| ಕ್ರ ಸಂ. | ಸಾರ್ವತ್ರಿಕ ಆಹಾರ ವಿತರಣೆ ಕಾರ್ಯಕ್ರಮದ ವಿವಿಧ ಯೋಜನೆಗಳ ವಿಧ | ಆರಂಭವಾದ ವರ್ಷ | ಫಲಾನುಭವಿಗಳು | ವಿತರಿಸುವ ಪ್ರಮಾಣ |
|---|---|---|---|---|
| 1 | ಗುರಿಪಡಿಸಿದ ಪಡಿತರ ವ್ಯವಸ್ಥೆ | ಜೂನ್ 1997 | ಕೃಷಿ ಕಾರ್ಮಿಕರು, ಸಣ್ಣ ಹಿಡುವಳಿದಾರರು, ಗ್ರಾಮೀಣ ಕುಶಲಕರ್ಮಿಗಳು, ಕೊಳಚೆ ಪ್ರದೇಶದ ನಿವಾಸಿಗಳು, ದಿನಗೂಲಿ ನೌಕರರು | – |
| 2 | ಅಂತ್ಯೋದಯ ಅನ್ನ ಯೋಜನೆ(ದೇಶದ ಶೇಕಡ ಐದು ಪ್ರತಿಶತ ಜನರು ದಿನದ ಎರಡು ಹೊತ್ತಿನ ಊಟ ದೊರೆಯದೆ ದಿನವನ್ನು ಮುಂದೂಡುತ್ತಿದ್ದು ಇಂತಹವರಿಗಾಗಿ ಅತೀ ಕಡಿಮೆ ಬೆಲೆಯಲ್ಲಿ ಆಹಾರ ಧಾನ್ಯ ವಿತರಿಸುವುದು | ಡಿಸೆಂಬರ್ 2000 | ಕಡುಬಡವರು, ಕುಟುಂಬದ ಮುಖ್ಯಸ್ಥರು ವಿಧವೆಯಾಗಿದ್ದರೆ, ಅಂಗವಿಕಲರಗಿದ್ದರೆ, 60ವರ್ಷ ಮೇಲ್ಪಟ್ಟಿದ್ದು ಆರ್ಥಿಕವಾಗಿ ಹಾಗೂ ಸಾಮಜಿಕವಾಗಿ ಯಾವುದೇ ಅನುಕೂಲತೆಗಳು ಇಲ್ಲದವರು | 2002 ರ ಇಸವಿಯವರೆಗೆ 25ಕಿಲೋ/ಕುಟುಂಬಕ್ಕೆ ವಿತರಿಸುತ್ತಿದ್ದುದನ್ನು 2002 ಎಪ್ರೀಲ್ ನಿಂದ ಪ್ರತಿ ಕುಟುಂಬಕ್ಕೆ 35 ಕಿಲೋ ಧಾನ್ಯವನ್ನು ವಿತರಿಸಲಾಗುತ್ತಿದೆ. |
| 3 | ಅನ್ನಪೂರ್ಣ ಯೋಜನೆ | | 65ವರ್ಷ ಮೇಲ್ಪಟ್ಟ ಹಿರಿಯ ನಾಗರೀಕರಿಗೆ | 10ಕಿಲೋ/ತಿಂಗಳಿಗೆ |
| 4 | ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ ವಿಶೇಷ ಘಟಕ | | ನೈಸರ್ಗಿಕ ವಿಕೋಪ ಸ್ಥಿತಿಯಲ್ಲಿ ಆದಾಯ ಒದಗಿಸುವುದರೊಂದಿಗೆ ಆಹಾರ ಭದ್ರತೆ ಒದಗಿಸುವುದು | |

**4. ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ಇಲಾಖೆ :** 1956ರ ಕಂಪನಿ ಕಾಯಿದೆಯ ನಿಯಮದ ಪ್ರಕಾರ ಕರ್ನಾಟಕ ರಾಜ್ಯದಲ್ಲಿ 7ನೇ ಸೆಪ್ಟಂಬರ್ 1973 ರಲ್ಲಿ, ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತ ಇಲಾಖೆಯು ಆಹಾರ ಸಾಮಗ್ರಿಗಳನ್ನು ಸಾರ್ವಜನಿಕರಿಗೆ ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುವ ಉದ್ದೇಶದಿಂದ ಸ್ಥಾಪಿಸಲಾಯಿತು. ಪ್ರಸ್ತುತ ಈಗ ಇದು 26 ಜಿಲ್ಲಾ ಕಛೇರಿಗಳನ್ನು, 187 ಸಗಟು ಮಳಿಗೆಗಳನ್ನು ಮತ್ತು 194 ಚಿಲ್ಲರೆ ಅಂಗಡಿಗಳನ್ನು ಹೊಂದಿದೆ.

ಸಗಟು ನಾಮಿನಿದಾರರಾಗಿ ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತವು ಭಾರತ ಆಹಾರ ನಿಗಮದ ಗೋದಾಮುಗಳಿಂದ ಶೇಕಡ 65 ರಷ್ಟು ಆಹಾರ ದಾಸ್ತಾನಿನ ಎತ್ತುವಳಿ ವಹಿವಾಟು ನಡೆಸುತ್ತಾ, ಮಿಕ್ಕ ಭಾಗವನ್ನು ಟಿ.ಎ.ಪಿ.ಸಿ.ಎಂ.ಎಸ್.ಗೆ ಬಿಟ್ಟು ಕೊಡಲಾಗಿದೆ. ಸರ್ಕಾರದ ವಿಶೇಷ ಕಾರ್ಯಕ್ರಮಗಳಾದ ಕೂಲಿಗಾಗಿ ಕಾಳು, ಎಸ್.ಜಿ.ಆರ್.ವೈ ಮತ್ತು

ಶಾಲಾ ಮಕ್ಕಳಿಗೆ ಮಧ್ಯಾಹ್ನ ಉಪಾಹಾರ ಯೋಜನೆ ಮುಂತಾದವುಗಳಿಗೆ ಪಡಿತರ ಒದಗಿಸುವ ಪ್ರಧಾನ ಏಜೆಂಟ್‌ನಂತೆ ಕೆಲಸ ಮಾಡುತ್ತಿದೆ.

ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತವು ಮಾರುಕಟ್ಟೆಯಲ್ಲಿ ಆಹಾರ ಪದಾರ್ಥಗಳ ಬೆಲೆಗಳನ್ನು ನಿಯಂತ್ರಿಸಿ, ಅದರ ಸ್ಥಿರತೆಯನ್ನು ಕಾಪಾಡಿಕೊಂಡು ಬರುವ ನಿಟ್ಟಿನಲ್ಲಿ ಬೆಳೆಗಾರರಿಂದ ನೇರವಾಗಿ ಭತ್ತ ಮತ್ತು ಇತರ ಧಾನ್ಯಗಳನ್ನು ಕೊಳ್ಳುತ್ತಾ, ಅವರಿಗೆ ಕನಿಷ್ಠ ಬೆಂಬಲ ಬೆಲೆ ಕೊಡುತ್ತಾ ಅವರ ಹಿತಾಸಕ್ತಿಯನ್ನು ಕಾಪಾಡುತ್ತಾ ಬಂದಿದೆ. ಸಾಮಾನ್ಯ ಜನಗಳ ದಿನ ನಿತ್ಯದ ಅಗತ್ಯಗಳನ್ನು ಕೈಗೆಟುಕುವ ಬೆಲೆಯಲ್ಲಿ ಪೂರೈಸುವ ನಿಟ್ಟಿನಲ್ಲಿ, ಆಹಾರ ಮತ್ತು ನಾಗರೀಕ ಸರಬರಾಜು ನಿಗಮ ನಿಯಮಿತವು ಎಣ್ಣೆ, ಕಾಳು, ಸಂಬಾರ ಪದಾರ್ಥಗಳು ಮತ್ತು ಇತರೆ ವಸ್ತುಗಳನ್ನು ಚಿಲ್ಲರೆ ಅಂಗಡಿಗಳ ಮೂಲಕ ಮಾರಾಟ ಮಾಡುತ್ತಾ ಬಂದಿದೆ.

**ಉದ್ದೇಶಗಳು**

- ❖ ಗೋಧಿ, ಸಕ್ಕರೆ ಇತ್ಯಾದಿಗಳನ್ನು ಸಂಗ್ರಹಿಸಿ, ಅದನ್ನು ಗ್ರಾಹಕರಿಗೆ ಸಾರ್ವಜನಿಕ ವಿತರಣಾ ಪದ್ಧತಿಯ ಮೂಲಕ ವಿತರಣೆ ಮಾಡುವುದು
- ❖ ಇತರೆ ಅಗತ್ಯ ವಸ್ತುಗಳಾದ ಎಣ್ಣೆ, ಕಾಳು, ಸಂಬಾರ ಪದಾರ್ಥಗಳು, ಸೀಮೆಎಣ್ಣೆ, ಇತ್ಯಾದಿಗಳನ್ನು ಸಾಮಾನ್ಯ ಮನುಷ್ಯರಿಗೆ ಎಟುಕುವ ದರಗಳಲ್ಲಿ ಒದಗಿಸುವುದು
- ❖ ಸಗಟು ಮತ್ತು ಚಿಲ್ಲರೆ ಮಳಿಗೆಗಳನ್ನು ಎಲ್ಲಾ ಕಡೆಗಳಲ್ಲೂ ತೆರೆದು, ವಿತರಣಾ ವ್ಯವಸ್ಥೆಯನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗುವುದು
- ❖ ಬೆಲೆಗಳ ಸ್ಥಿರತೆಯನ್ನು ಕಾಪಾಡಿಕೊಳ್ಳಲು ಮಾರುಕಟ್ಟೆಯಲ್ಲಿ ಮಧ್ಯ ಪ್ರವೇಶಿಸಿ ಬೆಳೆಗಾರರು ಬೆಳೆದ ಭತ್ತ ಮತ್ತು ಇತರ ಕಾಳುಗಳನ್ನು ಕನಿಷ್ಠ ಬೆಂಬಲ ಬೆಲೆ ಕೊಟ್ಟು ಅವರನ್ನು ಮಧ್ಯವರ್ತಿಗಳಿಂದ ಕಾಪಾಡುವುದು
- ❖ ಸರ್ಕಾರ ಹೊರಡಿಸುವ ಅದೇಶದನ್ವಯ ಕಾಲ ಸೂಚಿತ ಯೋಜನೆಗಳಾದ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ, ಕೂಲಿಗಾಗಿ ಕಾಳು, ಅಕ್ಷರ ದಾಸೋಹ ಯೋಜನೆ ಇವುಗಳನ್ನು ಜಾರಿಗೊಳಿಸುವುದು

ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಆಯುಕ್ತರಿಂದ ಪ್ರತಿ ತಿಂಗಳು ಆಹಾರ ಧಾನ್ಯ ಮತ್ತು ಸಕ್ಕರೆಯನ್ನು ಜಿಲ್ಲಾವಾರು ಹಂಚಿಕೆ ಮಾಡಲಾಗುತ್ತದೆ. ಆದಕ್ಕನುಗುಣವಾಗಿ ಇಲಾಖೆಯ ಉಪ ಆಯುಕ್ತರಿಂದ ಅದನ್ನು ತಾಲ್ಲೂಕುವಾರು ಮರು ಹಂಚಿಕೆಯನ್ನು ಮಾಡಲಾಗುತ್ತದೆ.

ಈ ಹಂಚಿಕೆಯ ಆಧಾರದ ಮೇಲೆ ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮದ ಜಿಲ್ಲಾ ವ್ಯವಸ್ಥಾಪಕರು, ಭಾರತ ಆಹಾರ ನಿಗಮಕ್ಕೆ ಹಣ ಪಾವತಿ ಮಾಡಿ, ಅವರಿಂದ

ಬಿಡುಗಡೆ ಪತ್ರವನ್ನು ಪಡೆದು, ಆಹಾರ ಧಾನ್ಯಗಳನ್ನು ಅಧಿಕೃತ ಸಾಗಾಣಿಕೆದಾರರ ಮೂಲಕ ತಮ್ಮ ಮಳಿಗೆಗಳಿಗೆ ಸಾಗಿಸಲಾಗುತ್ತದೆ. ಆಹಾರ ಧಾನ್ಯಗಳ ಗುಣಮಟ್ಟವನ್ನು ನಿರ್ಧರಿಸಲು, ಸಾಧಾರಣ ಸರಾಸರಿ ಗುಣಮಟ್ಟದಲ್ಲಿ ಪರೀಕ್ಷಿಸಲಾಗುವುದು. ಕೋಷ್ಟಕ 4.32ದಲ್ಲಿ ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮಕ್ಕೆ ಪ್ರತಿತಿಂಗಳು ಹಂಚಲಾದ ಆಹಾರ ಧಾನ್ಯಗಳ ವಿವರವನ್ನು ನೀಡಲಾಗಿದೆ.

**ಕೋಷ್ಟಕ 4.32 ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮಕ್ಕೆ ಪ್ರತಿ ತಿಂಗಳು ಹಂಚಲಾದ ಆಹಾರ ಧಾನ್ಯಗಳು**

| **ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮಕ್ಕೆ ಪ್ರತಿ ತಿಂಗಳು ಹಂಚಲಾದ ಆಹಾರ ಧಾನ್ಯಗಳು** | |
|---|---|
| **ಅಕ್ಕಿ** | ಪ್ರಮಾಣ ಕ್ವಿಂಟಾಲ್‌ಗಳಲ್ಲಿ |
| ಬಡತನ ರೇಖೆಗಿಂತ ಮೇಲಿರುವವರು(ಪೋಲೀಸ್) | 8348 |
| ಬಡತನ ರೇಖೆಗಿಂತ ಕೆಳಗಿರುವವರು(ಅಕ್ಷಯ) | 3,54,350 |
| ಆರ್ಥಿಕವಾಗಿ ಬಡತನ ರೇಖೆಗಿಂತ ಕೆಳಗಿರುವವರು(ಅಕ್ಷಯ) | 2,06850 |
| ಅಂತ್ಯೋದಯ | 245268 |
| **ಒಟ್ಟು** | **814816** |
| **ಗೋಧಿ** | |
| ಬಡತನ ರೇಖೆಗಿಂತ ಮೇಲಿರುವವರು(ಪೋಲೀಸ್) | 1536 |
| ಬಡತನ ರೇಖೆಗಿಂತ ಕೆಳಗಿರುವವರು(ಅಕ್ಷಯ) | 74831 |
| ಆರ್ಥಿಕವಾಗಿ ಬಡತನ ರೇಖೆಗಿಂತ ಕೆಳಗಿರುವವರು(ಅಕ್ಷಯ) | 28020 |
| **ಅಂತ್ಯೋದಯ** | **51230** |
| **ಒಟ್ಟು** | **155617** |

**ಕನಿಷ್ಠ ಬೆಂಬಲ ಬೆಲೆಯ ಕಾರ್ಯಾಚರಣೆ (ಎಂಎಸ್‌ಪಿಓ):** ಕನಿಷ್ಠ ಬೆಂಬಲ ಬೆಲೆಯನ್ನು ರಾಜ್ಯದಲ್ಲಿ ಜಾರಿಗೊಳಿಸುವ ಸಲುವಾಗಿ, ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವು, ಭಾರತ ಆಹಾರ ನಿಗಮದ ಏಜೆಂಟಿನಂತೆ ಕೆಲಸ ಮಾಡುತ್ತಿದೆ. ಈ ಯೋಜನೆಯ ಪ್ರಕಾರ ನಿಗಮವು ರೈತರಿಂದ ಭತ್ತ ಮತ್ತು ಇತರೆ ಕಾಳುಗಳನ್ನು ಕನಿಷ್ಠ ಬೆಂಬಲ ಬೆಲೆ ಯೋಜನೆಯಡಿಯಲ್ಲಿ ಸಂಗ್ರಹಿಸಿ ಅವರನ್ನು ಸಂಕಷ್ಟಕಾಲದಲ್ಲಿ ಸಂರಕ್ಷಿಸುವುದು. ಇದಕ್ಕಾಗಿ ಎ.ಪಿ.ಎಂ.ಸಿ. ಜಾಗಗಳಲ್ಲಿ ಕನಿಷ್ಠ ಬೆಂಬಲ

ಬೆಲೆಯ ಪದ್ಧತಿಯಲ್ಲಿ ಖರೀದಿ ಕೇಂದ್ರಗಳನ್ನು ತೆರೆದು ಮತ್ತು ಅದರ ಅನುಕೂಲದ ಬಗ್ಗೆ ಹೆಚ್ಚು ಪ್ರಚಾರ ಕೊಡಲಾಗುತ್ತದೆ. ಧಾನ್ಯದ ಮತ್ತು ಖಾಲಿ ಚೀಲದ ಬೆಲೆಯನ್ನು ಕಾಲಕಾಲಕ್ಕೆ ಭಾರತ ಸರ್ಕಾರ ನಿಗದಿಪಡಿಸಿದ ಬೆಲೆಯ ಮೇರೆಗೆ ರೈತರಿಗೆ ಧವಸ ಮಾರಿದ ಐದು ದಿನದೊಳಗಾಗಿ ಹಣ ಸಂದಾಯವಾಗುತ್ತದೆ. ಹೀಗೆ ರೈತರಿಂದ ಸಂಗ್ರಹಿಸಿದ ಆಹಾರ ಧಾನ್ಯವನ್ನು ಭಾರತ ಆಹಾರ ನಿಗಮವು ಹರಾಜು ಮಾಡುವ ಮೂಲಕ ವಿಲೇವಾರಿ ಮಾಡಲಾಗತ್ತದೆ

**ಅಕ್ಷರ ದಾಸೋಹ ಯೋಜನೆ** : ಅಕ್ಷರ ದಾಸೋಹ ಯೋಜನೆ ಕರ್ನಾಟಕ ಸರ್ಕಾರದ ಶಿಕ್ಷಣ ಇಲಾಖೆಯಿಂದ 2002–03ನೇ ಶೈಕ್ಷಣಕ ವರ್ಷದಲ್ಲಿ ಆರಂಭವಾದಾಗಿನಿಂದ ಕರ್ನಾಟಕ ಆಹಾರ ಮತ್ತು ನಾಗರೀಕ ಸರಬರಾಜು ನಿಗಮವನ್ನು ತೊಗರಿಬೇಳೆ, ಖಾದ್ಯತೈಲ ಹಾಗೂ ಅಯೋಡಿನ್ ಯುಕ್ತ ಉಪ್ಪು ಸರಬರಾಜಿಗೆ ಪ್ರತಿನಿಧಿಯನ್ನಾಗಿ ನೇಮಕ ಮಾಡಲಾಯಿತು. ಅಂದಿನಿಂದ ಇಲಾಖೆಯು ತೊಗರಿಬೇಳೆ, ತಾಳೆಎಣ್ಣೆ ಹಾಗೂ ಅಯೋಡಿನ್‌ಯಕ್ತ ಉಪ್ಪನ್ನು ಈ ಯೋಜನೆಯಡಿಯಲ್ಲಿ ಸರಬರಾಜು ಮಾಡುತ್ತಿದೆ. ಕೋಷ್ಟಕ 4.33 ಆಹಾರ ಮತ್ತು ನಾಗರೀಕ ಇಲಾಖೆಯು ಬಿಸಿಯೂಟ ಯೋಜನೆಯ ಫಲಾನುಭವಿಗಳಿಗೆ ವಿತರಿಸುವ ಆಹಾರ ಪದಾರ್ಥಗಳ ಪ್ರಮಾಣವನ್ನು ನೀಡಿದೆ.

**ಕೋಷ್ಟಕ 4.33 ಆಹಾರ ಮತ್ತು ನಾಗರೀಕ ಇಲಾಖೆಯು ಬಿಸಿಯೂಟ ಯೋಜನೆಯ ಫಲಾನುಭವಿಗಳಿಗೆ ವಿತರಿಸುವ ಆಹಾರ ಪದಾರ್ಥಗಳ ಪ್ರಮಾಣ**

| ಕ್ರ.ಸಂ. | ಆಹಾರ ಪದಾರ್ಥ | 1 ರಿಂದ 5ನೇ ತರಗತಿಯವರೆಗೆ ಗ್ರಾಂಗಳಲ್ಲಿ | 6 ರಿಂದ 10ನೇ ತರಗತಿಯವರೆಗೆ ಗ್ರಾಂಗಳಲ್ಲಿ |
|---|---|---|---|
| 1 | ಅಕ್ಕಿ /ಗೋಧಿ | 100 | 150 |
| 2 | ತೊಗರಿಬೇಳೆ | 20 | 25 |
| 3 | ತಾಳೆಎಣ್ಣೆ | 03 | 06 |
| 4 | ಅಯೋಡಿನ್‌ಯುಕ್ತ ಉಪ್ಪು | 02 | 02 |

ವೈವಿಧ್ಯಮಯವಾದ ಆಹಾರ ಭದ್ರತೆಯ ಯೋಜನೆಗಳು, ಕಾರ್ಯಕ್ರಮಗಳು ಎಲ್ಲವೂ ಆಹಾರ ಹಂಚಿಕೆಯ ಪಡಿತರ ವ್ಯವಸ್ಥೆಯ ಮೂಲಕ ಜಾರಿಯಲ್ಲಿವೆ. ಕೆಲವು ಉದ್ಯೋಗ ಖಾತ್ರಿ ಯೋಜನೆಯ ಮಾದರಿಯಲ್ಲಿರಬಹುದು. ಇವು ಮೂಲತಃ ಬುಡಕಟ್ಟು ಸಮುದಾಯದ ಆಹಾರದ ಆಸಕ್ತಿ ಹಾಗೂ ಆಯ್ಕೆಯಿಂದ ಭಿನ್ನವಾದುವು. ಆಹಾರ ಮತ್ತು ಕೃಷಿ ಸಂಸ್ಥೆಯು(FAO) ಕೂಡ ತನ್ನ ಬುಡಕಟ್ಟು ಆಹಾರ ಭದ್ರತೆಯ ನೀತಿಯಲ್ಲಿ ಆಯಾ ಸಮುದಾಯಗಳು ತಮ್ಮ ಪರಂಪರೆ ಹಾಗೂ ಆಯ್ಕೆಯ (ಇಷ್ಟಪಡುವ) ಆಹಾರವನ್ನು ಪಡೆಯುವಂತಾಗಬೇಕು ಎನ್ನುತ್ತದೆ. ಇದಕ್ಕೆ ನೆರವಾಗಬಹುದೆಂದರೆ ಕೇವಲ ಸ್ಥಳೀಯ ಆಹಾರ ಪರಂಪರೆಯ ಮೂಲಕ ಆಹಾರ ಭದ್ರತೆಯನ್ನು ಗಟ್ಟಿಗೊಳಿಸುವುದಷ್ಟೆ. ಈ ದೃಷ್ಟಿಯಲ್ಲಿ ಸದ್ಯದ ಕಾರ್ಯಯೋಜನೆಗಳೂ ಸಹ ಬುಡಕಟ್ಟು

ಸಮುದಾಯದ ಉಪಯೋಗದಲ್ಲಿಲ್ಲ. ಇದರಿಂದಾಗಿಯೇ, ಇನ್ನೂ ಅವರ ಆಹಾರ ಹಾಗೂ ಆಹಾರ ಸಂಬಂಧಿತ ಸ್ಥಿತಿಯು ಹೇಳಿಕೊಳ್ಳುವಷ್ಟು ಸುಧಾರಿಸಿಲ್ಲ. ಜತೆಯಲ್ಲಿ ಒಂದು ಸಂಸ್ಕೃತಿಯು ಬೆಳೆಸಿಕೊಂಡು ಬಂದ ಆಹಾರ ಪರಂಪರೆಯೂ ಸಹ ಕ್ಷೀಣಿಸುತ್ತಾ ತನ್ನತನವನ್ನು ಕಳೆದು ಹೋಗುವಂತಾಗುತ್ತದೆ.

ಬುಡಕಟ್ಟುಗಳು ಆಚರಿಸಿಕೊಂಡು ಬಂದಿರುವ ವಿವಿಧ ಹಬ್ಬ ಆಚರಣೆಗಳು ಒಟ್ಟಾರೆಯಾಗಿ ಸಮುದಾಯದ ಎಲ್ಲ ಜನರನ್ನು ಒಳಗೊಂಡಿರುತ್ತವೆ. ಇವರ ಹಬ್ಬಗಳಲ್ಲಿ ಎಲ್ಲರೂ ಸೇರಿ ಆಹಾರ ಸೇವಿಸುವುದನ್ನು ಕಾಣುತ್ತೇವೆ. ಈ ಸಂಸ್ಕೃತಿಯು ಸಮುದಾಯದಲ್ಲಿ ಆಹಾರದ ಹಂಚಿಕೆಯಲ್ಲಿನ ಸಮತೆಯನ್ನು ಉಳಿಸಿ ಬೆಳೆಸಿಕೊಂಡುಬಂದಿವೆ. ಈ ರೀತಿಯ ಒಂದು ಮಾನವೀಯ ಗುಣವು ನಾಗರೀಕ ಸಮುದಾಯದಲ್ಲೂ ಕಾಣುವುದಕ್ಕೆ ಈ ಬಗೆಯ ಬುಡಕಟ್ಟುಗಳ ಆಚರಣೆಯು ಮೂಲ ಪ್ರೇರಣೆ ಒದಗಿಸಿವೆ.

## 4.7. ಮಾದರಿ ಅಧ್ಯಯನಗಳು

ಬುಡಕಟ್ಟು ಸಮುದಾಯಗಳ ಆಹಾರ ಭದ್ರತೆ, ಜೀವನೋಪಾಯ ಇತ್ಯಾದಿ ವಿಚಾರಗಳನ್ನು ಒಳಗೊಂಡಂತೆ ವಿವಿಧ ವಸತಿ ಪ್ರದೇಶಗಳಲ್ಲಿನ ಬುಡಕಟ್ಟು ಸಮುದಾಯಗಳ ಮಾದರಿ ಅಧ್ಯಯನಗಳನ್ನು ಮಾಡಿದೆ.

ಈ ಮೂರು ಅಧ್ಯಯನಗಳು ಅರಣ್ಯದೊಳಗೆ ವಾಸಿಸುವ ಬುಡಕಟ್ಟು ಸಮುದಾಯ, ಅರಣ್ಯದಂಚಿನಲ್ಲಿ ವಾಸಿಸುವ ಸಮುದಾಯ ಹಾಗೂ ಅರಣ್ಯದಾಚೆ ವಾಸಿಸುವ ಸಮುದಾಯ ಎಂದು ಗುರುತಿಸಿ ಈ ಮಾದರಿ ಅಧ್ಯಯನಗಳನ್ನು ಈ ಮುಂದೆ ವಿವರಿಸಿದೆ.

### ಮಾದರಿ ಅಧ್ಯಯನ (Case Study) –1

### ಅರಣ್ಯದೊಳಗೆ ವಾಸಿಸುವ ಬುಡಕಟ್ಟು ಸಮುದಾಯ (ಬಳ್ಳೆ ಹಾಡಿ)

ಮೈಸೂರಿನಿಂದ ಹೆಗ್ಗಡದೇವನಕೋಟೆಯ ದಾರಿಯತ್ತ ಸಾಗುತ್ತಿದ್ದಂತೆ, ಬೇರೆಯದೇ ಲೋಕಕ್ಕೆ ಕೊಂಡೊಯ್ಯುವ ಸೂಚನೆಗಳು ಎದುರಾಗುತ್ತವೆ. ಸಂಸ್ಕೃತಿಯ ರಾಜಧಾನಿ ತನ್ನ ಗಾಂಭೀರ್ಯದಿಂದ ವೈಭವಗಳನ್ನೆಲ್ಲ ತೆರೆದು ಪ್ರದರ್ಶಿಸುವ ಮುಖವೊಂದು ಮರೆಯಾಗತೊಡಗುತ್ತದೆ. ಕಾಡಿನ ಕಡೆಗೆ ಸಾಗುತ್ತಿದ್ದೇವೆಂಬ ಅನಿಸಿಕೆಯು ಮನದಲ್ಲಿ ಮೊದಲೇ ಹೊಕ್ಕಂತೆ, ಅದೇ ಭಾವ ದಟ್ಟವಾಗುತ್ತಾ ದಾರಿಯ ಜತೆಯಲ್ಲೆ ಸಾಗುತ್ತದೆ. ಹೇಗೋ ಅಪರೂಪವಾಗುವಂತಹ ಸಂಗತಿಗಳೊಂದಿಗೆ ಹೆಗ್ಗಡದೇವನಕೋಟೆಯನ್ನು ಹೊಕ್ಕದೆ ದಾರಿಯಗುಂಟ ಸಾಗಿದರೆ ಕಾಕನಕೋಟೆ ಪ್ರದೇಶದ ಕಡೆ ದಾರಿಯೇ ಕೊಂಡೊಯ್ಯುತ್ತದೆ. ಕಬಿನಿಯು ನಿಧಾನವಾಗಿ ಹರಿಯುತ್ತ ಕಾಡಿನ ಸೀಮೆಯ ದಾಟಿ ಹೊರಟ ನದಿಯ ಜಲಾಶಯದ ಮಾರ್ಗ ಬಿಟ್ಟು ಮಗ್ಗಲು ಹಾಯ್ದು ಹೊರಟರೆ ಆಗಾಧ ಸಂಸ್ಕೃತಿಯೊಂದರ ಸಂಕೀರ್ಣ ಸಮಾಜದಲ್ಲಿ ಹೊಕ್ಕಿರುತ್ತೇವೆ. ಕನ್ನಡನಾಡಿಯ ತುದಿಯು

ಮಲಬಾರ್‌ನತ್ತ ಸಾಗುವ ಸೂಕ್ಷ್ಮ ಸನ್ನಿವೇಶಗಳು ಎಚ್ಚರಿಸತೊಡಗುತ್ತವೆ. ಮಾನಂದವಾಡಿಯ ದಾರಿಯು ಕೇರಳಕ್ಕೆ ಕೊಂಡೊಯ್ಯುತ್ತದೆ. ಇದೇ ಪರಿಸರವು ದಟ್ಟ ಕಾನನದ ಒಳಗೊಂದು ಸಂಸ್ಕೃತಿಯ ಬೇರಿದೆ ಎನ್ನುವುದನ್ನು ತಕ್ಷಣವೇ ಬಿಟ್ಟು ಕೊಡುವುದಿಲ್ಲ. ನಿಧಾನವಾಗಿಯೇ ಈ ಸಂಗತಿಯು ತೆರೆದುಕೊಳ್ಳಲು ಒಂದಷ್ಟು ದೂರ ಕ್ರಮಿಸುವುದು ಅನಿವಾರ್ಯ. ದಾರಿಯುದ್ದಕ್ಕೂ ಈ ಸಂಗತಿಯ ಅರೆ–ಬರೆ ಛಾಯೆಗಳ ಕುರುಹುಗಳು, ಮುಂದಿನ ಸಂಕೀರ್ಣ ಪರಿಸರವೊಂದನ್ನು ಸಾಬೀತುಗೊಳಿಸುತ್ತವೆ.

ಕಾನನದ ಕಡೆಗೆ ಸಮುದಾಯ ಒಂದನ್ನು ಅರಸಿ ಹೊರಟವರಿಗೆ ದಾರಿಯಲ್ಲಿ ಒಂಟೊಂಟಿಯಾಗಿ ಅಲೆವ ಸಮುದಾಯದ ಸದಸ್ಯರು, ಒಂದಷ್ಟು ಸಾಧ್ಯತೆಗಳ ಆಸೆಯನ್ನು ತೋರುವುದೇನೋ, ಕಬಿನಿಯ ಬೆನ್ನ ಹಿಂದೆ ನೆಲೆಕಂಡ ಸಮಾಜವೊಂದು ಕಾನನದ ಒಳಗೇ ತನ್ನ ನೆಲವನ್ನು ಗಟ್ಟಿಗೊಳಿಸಿ ಸಮುದಾಯ ರಚಿಸಿ ಬದುಕನ್ನು ಭದ್ರಗೊಳಿಸಿಕೊಂಡದ್ದನ್ನು ಕಾಣುತ್ತೇವೆ. ಅದೇ ಬಳ್ಳೆ ಹಾಡಿ. ಜೇನುಕುರುಬರು ಇಲ್ಲಿ ತಮ್ಮ ವಸತಿಗಾಗಿ ಅರಣ್ಯದೊಳಗಣ ನೆಲೆಯನ್ನು ಕಂಡುಕೊಂಡಿದ್ದಾರೆ. ಚಿತ್ರ 4.15ರಲ್ಲಿ ಅರಣ್ಯ ಪರಿಸರದೊಳಗಿನ ಬಳ್ಳೆ ಹಾಡಿ ನೋಡಬಹುದು. ಏನೂ ಒಲ್ಲದ, ಹೆಚ್ಚೇನು ಇಲ್ಲದ ಗ್ರಾಮವೊಂದು ಕಾನನದ ಪರಿಸರದೊಳಗೇ ಅರಳಿದೆ. ಮಾನಂದವಾಡಿ ರಸ್ತೆಯ ಬದಿಗೆ ಒಂದೆರಡು ಗುಡಿಸಲು ಬಿಟ್ಟರೆ, ಉಳಿದವು ಹತ್ತಾರು ಗುಂಪುಗಳೆಲ್ಲ ಕಾಡೊಡಲೊಳಗೆ.

ಬುಡಕಟ್ಟು ಸಮುದಾಯಗಳು ಸಹಜ ನಿಸರ್ಗ ಪ್ರೇಮಿಗಳು. ಸರಳ ಬದುಕಿನೊಳಗೇ ಎಲ್ಲವನ್ನೂ ನುಂಗಿಕೊಂಡ ಕೇವಲ ಜೀವನದ ಆಶಯ ಉಳ್ಳವರು. ದಾರಿಯು ತಂದ ಆಧುನಿಕತೆಯು ಅದರ ಜೀನ್ಸ್ ಪ್ಯಾಂಟಿನ ಮೂಲಕವೋ ಬಣ್ಣದ ಟೀ–ಶರ್ಟಿನ ಮೂಲಕವೋ ಕಾಣಿಸಿಕೊಳ್ಳುತ್ತದೆ. ತಮ್ಮ ಕನಿಷ್ಠ ಉಡುಪೊಂದು, ಬಣ್ಣದ ಮೋಹಕತೆಗೆ ಒಳಗಾಗಿ ಅದೇ ನಾಗರೀಕತೆಯ ಬೆಳಕು ಎಂದು ಅನೇಕರಿಗೆ ಅನಿಸುತ್ತದೆ. ಹಾಗೆಂದೇ ಅವರ ನಿಚ್ಚಳ ಪ್ರತಿಬಿಂಬವು ನಾಗರೀಕತೆಗೆ ಉತ್ತರದಂತೆ ಕಂಡಿದೆ. ಎಲ್ಲವೂ ಈ ಬಣ್ಣದೊಳಗೇನು ಮುಳುಗಿಲ್ಲ. ಮಾಸಿದ ಬದುಕೊಂದು ಅವರನ್ನು ದಟ್ಟವಾಗಿಯೇ ಆವರಿಸಿದೆ. ಬಹುಪಾಲು ಮಂದಿಯ ಹಿರಿಯರಲ್ಲಿ ನೆಮ್ಮದಿಯ ಸೆಲೆಯೊಂದು, ನೆಲೆಯಲ್ಲಿ ಕಂಡಿದ್ದರೆ, ಅದಕ್ಕೆಂದೇ "ನಮ್ಮ ಉದ್ದಕ್ಕೂ ದುಡ್ಡು ಸುರಿದರೂ ನಾವಿಲ್ಲಿಂದ ಹೊರಬರಲು ಒಲ್ಲೆವು" ಎಂಬುದು ಅವರ ನಿಷ್ಠೂರವಾದ ಮಾತು. ಹೊರಗಿನವರು ಹತ್ತಿರ ಬಂದರೆಂದರೆ, ತಮ್ಮನ್ನು ಹೊರಹಾಕಲು ಬಂದವರೇ ಎಂಬ ಗುಮಾನಿಯು ಹಾಡಿಯೊಳಗೆಲ್ಲ ತಟ್ಟನೆ ಹಬ್ಬುತ್ತದೆ. ಈಗಂತೂ ನಾಗರೀಕ ಮಂದಿಯ ಭಯ ಸಾಮಾನ್ಯವಾಗಿದೆ. ಕಾಡೊಳಗಣ ನಿಟ್ಟುಸಿರು ಎಲ್ಲ ಹೊರಪ್ರಪಂಚಕ್ಕೆ ತಾಗಿ, ತನ್ನನ್ನೇ ಸುಟ್ಟಿತೋ ಎಂಬ ಭೀತಿಯೊಳಗೆ ಮುರುಟಿದೆ. ತಕ್ಷಣಕ್ಕೆ ಹೊರಜಗತ್ತಿಗೆ ತೆರೆಯದ ಮನಸ್ಸು ಅವರದ್ದು. ಏನು ಕೇಳಿದರೂ, ಇಲ್ಲ. ಹೌದು. ಎಂಬೆರಡಕ್ಷರದ ಮಾತುಗಳಿಂದ ದೂರ ಹಾಕಲು ಯತ್ನಿಸುವ ಜನರು ತಮ್ಮದೇ ಕನಸುಗಳನ್ನು ನೆರೆಕೆಯೊಳಗೇ ಮುದುರಿಟ್ಟು ಬೆಚ್ಚನೆಯ ಬದುಕಿಗೆ ಪ್ರಾಣವನ್ನೇ ಒತ್ತೆಯಿಟ್ಟ ಮಂದಿ. ಕಾಡಿನ ಬದುಕಿನ ಭಯದ ಅಭಯ ಅವರ ನೆರವಿಗೆ.

ನೀರು–ನೆಲವೆಂಬ ಎರಡರಿಂದ ಬದುಕಿಗೆ ಆರಂಭಗೊಂಡ ಅವರಲ್ಲಿ ಒಡೆತನವಿಲ್ಲದ ಭೂಮಿಯೂ ಸೇರಿದೆ. ರಾಗಿ, ಜೋಳ, ಒಂದಷ್ಟು ಕಾಯಿಪಲ್ಯ, ಬೆಳೆದುಕೊಂಡರೆ ಮುಗಿಯಿತು, ಅವರ ಖುಷಿಗೆ ಕೃಷಿಯ ಸೊಗಸು. 4–6 ಮಂದಿಯ ಸದಸ್ಯರ ಕುಟುಂಬಗಳು ಬಹು ಪಾಲು ಜೀವನಕ್ಕೆ ಸಂಪೂರ್ಣವಾಗಿ ಕಾಡನ್ನೇ ನಂಬಿದವರು. ಅಲ್ಪ ಸ್ವಲ್ಪ ಅರಣ್ಯ ಇಲಾಖೆಯ ಕೂಲಿ ಕೆಲಸದ ಕಾಳು ಮನೆಗಳ ಹೊಕ್ಕರೆ ಅದೇ ಉನ್ನತ ಬದುಕೆಂಬ ನಿಲುವು ಅವರದ್ದು. ಇತ್ತೀಚಿಗೆ ಚಿಕ್ಕಪುಟ್ಟ ಅರಣ್ಯ ಜತನದ ಕೆಲಸಗಳು ಅವರ ಪಾಲಿಗೆ ಬಂದಿವೆ. ಅರಣ್ಯ ಪಾಲನೆಯ ಜಾಣತನದ ಅರಿವು ಅವರನ್ನು ಸಂಪೂರ್ಣ ಬಳಸಿಕೊಳ್ಳಲು ಅರಣ್ಯ ಇಲಾಖೆಯ ಯತ್ನದಲ್ಲಿದೆ. ಆಧುನಿಕ ಸಮಾಜದ ಕೆಲಸಕ್ಕೆ ಬೇಕಾದ ಶಿಕ್ಷಣದ ಮಾರ್ಗದತ್ತ ಇತ್ತೀಚಿಗೆ ಕೆಲವರು ಮುಖಮಾಡಿದ್ದಾರೆ. ಕೆಲವು ಮನೆಗಳ ಹಿರಿಯರದ್ದೂ ಅದೇ ಆಶಯ. ನಮ್ಮ ಮಕ್ಕಳು ಹೊಸ ಬದುಕನ್ನು ಅರಸಲಿ ಎಂಬುದಿವರ ಧ್ಯೇಯವೂ ಆಗಿದೆ.

ಬಳ್ಳೆ ಹಾಡಿಯು ಅರಣ್ಯದ ಒಳಗಿದ್ದೂ ಸುಮಾರು 90ಕ್ಕೂ ಹೆಚ್ಚು ಕುಟುಂಬಗಳ ಸಲಹುತ್ತಿದೆ. 8–10 ಕುಟುಂಬಗಳ ಸಣ್ಣ ಗುಂಪುಗಳಾಗಿ ವಸತಿಗಳನ್ನು ನಿರ್ಮಿಸಿಕೊಂಡ ದೃಶ್ಯವನ್ನು ಕಾಣಬಹುದು. ದೈನಂದಿನ ಆಹಾರ ವ್ಯವಸ್ಥೆಗೆ ಅವರು ಕಂಡುಕೊಂಡ ವಿಧಾನಗಳು ಕಾಡಲ್ಲೇ ದೊರಕುವ ಹಣ್ಣು ಹಂಪಲು, ಸಣ್ಣಪುಟ್ಟ ಬೇಟೆ, ತಾವೇ ಬೆಳೆದ ಬೆಳೆ ಇದ್ದೂ, ಅದರ ಅವಲಂಬನೆ ಸಂಪೂರ್ಣವಾಗಿಸಲು ಸಾಧ್ಯವಾಗಿಲ್ಲ. ನಿರಂತರವಾಗಿ ವನ್ಯ ಜೀವಿಗಳು ಎದುರಾಗುವ ಇವರ ಬೆಳೆಗಳಿಗೆ, ಅವುಗಳಿಂದ ರಕ್ಷಣೆಯು ಇಲ್ಲ. ಹಾಗಾಗಿ ಬೆಳೆಯ ಉತ್ತಮ ಕಟಾವಿನ ನಿರೀಕ್ಷೆಯೇ ಇವರಿಗೆ ಇರುವುದಿಲ್ಲ. ಹಾಕುತ್ತೇವೆ ಬಂದರೆ ಬಂದೀತು, ಇಲ್ಲವಾದರೆ, ಇಲ್ಲ. ಆನೆಗಳ ಕಾಟ, ಅವುಗಳು ಜಮೀನಿಗೆ ನುಗ್ಗಿ ತಿಂದು ಹೋಗುತ್ತವೆ ಎಂದು ಹೇಳುವ ಅವರಿಗೆ ಕೃಷಿಯು ಆಸಕ್ತಿಯ ಕಸುಬಾಗಿಲ್ಲ. ಸೋಲಿಗರು ಇವರಿಗೆ ಹೋಲಿಸಿದಲ್ಲಿ ಕೃಷಿಯಲ್ಲಿ ಆಸಕ್ತರಾಗಿದ್ದಾರೆ. ಮುಖ್ಯವಾಗಿ ಬೆಳೆದ ಬೆಳೆಯನ್ನು ಸಂಗ್ರಹಿಸಿಟ್ಟುಕೊಳ್ಳುವುದೂ ಕಷ್ಟವೇ. ಅವರ ವಸತಿ ವಿಧಾನಗಳೂ ಅತ್ಯಂತ ಸರಳವೇ (ಚಿತ್ರ 4.16) ಕೇವಲ ಮೇಲೊಂದು ಸೂರು, ಅದೂ ಹುಲ್ಲಿನ ಹಾಸು. ತುಂಬಾ ಕನಿಷ್ಠ ಅಗತ್ಯಗಳಲ್ಲಿ ಬದುಕು ಸಾಗಿಸುವ ಅವರಿಗೆ ಸಂಗ್ರಹದಲ್ಲಿ ಅಂತಹ ಹೆಚ್ಚಿನ ಆಸಕ್ತಿಗಳು ಇಲ್ಲ. ಇವರದು ಬಹು ಸಂಕೋಚದ ಸ್ವಭಾವ. ತಮ್ಮ ಜೀವನ ಕ್ರಮವೇ ಇಷ್ಟು ನಾವೇಕೆ ಹೆಚ್ಚಿನದನ್ನು ಬಯಸುವುದು ಎಂಬ ನಿಲುವುಳ್ಳ ಮಂದಿ.

ನಾಗರೀಕ ಆಹಾರ ಪೂರೈಕೆಯು ಇಲ್ಲಿಗೂ ತಲುಪಿದೆ. ಅದೂ ಸಹ ಇವರ ಆಹಾರದ ಅಗತ್ಯಕ್ಕೆ ನೆರವು ನೀಡಿದೆ. ರಸ್ತೆಯ ಬದಿಯ ಕೊಳವೆ ಬಾವಿಯು ನೀರಿನ ಆಸರೆಯನ್ನು ಒದಗಿಸಿದೆ.

ಅಧುನಿಕ ಶಿಕ್ಷಣದ ಒಲವು ಹೇಳಿಕೊಳ್ಳುವಂತಹದ್ದಲ್ಲ. ಹಳ್ಳಿಗೆ ಹೊಂದಿಕೊಂಡಂತೆ ಅಂಗನವಾಡಿ ಶಾಲೆಯಿದೆ. ಪ್ರಾಥಮಿಕ ಶಾಲೆಗೆ ಸಮೀಪದ ಹಳ್ಳಿಗೆ ಕಳುಹಿಸುತ್ತಾರೆ. ಮಕ್ಕಳು ಶಿಕ್ಷಣ ಪಡೆಯಲಿ ಎಂಬುದು ಇವರಲ್ಲಿದೆ. ಬಹು ಮುಖ್ಯವಾಗಿ ಇತ್ತೀಚಿಗೆ ಇವರಲ್ಲಿ ಕೆಲವರನ್ನು ಅರಣ್ಯ ಇಲಾಖೆಯು ಗುರುತಿಸಿ ಕೆಲವು ಜವಾಬ್ದಾರಿಗಳನ್ನು ಕೊಟ್ಟಿದೆ. ಅದರಿಂದ ಒಂದಷ್ಟು ಆಸಕ್ತಿಗೆ

ಕಾರಣವಾಗಿದೆ. ಉಳಿದಂತೆ ಅವರಿವರ ಪಕ್ಕದ ಹಳ್ಳಿಗಳಲ್ಲಿ ಹೋಗಿ ಕೆಲಸಕ್ಕಿದ್ದು ಬರುವುದು ಇದ್ದೆ ಇದೆ.

ಮುಖ್ಯವಾಗಿ ಈ ಜೇನುಕುರುಬರು ಕಾಡೊಡಲೊಳಗಿನ ಜೀವನ ಸೌದರ್ಯವನ್ನೂ, ಅದರ ಕಷ್ಟಗಳನ್ನೂ ಒಟ್ಟೊಟ್ಟಿಗೆ ಅರಿತವರು. ಹಾಗಾಗಿ ಕಾಡಿನ ರಕ್ಷಣೆ-ಅರಿವಿನ ಬಳಕೆಯಲ್ಲಿ ಇವರನ್ನು ಇತ್ತೀಚಿಗೆ ಕೆಲವು ಅರಣ್ಯ ಇಲಾಖೆಯಲ್ಲಿ ನೇಮಿಸಿಕೊಂಡಿರುವುದಿದೆ. ಕೆಲವರು ಮಾವಟಿಗರೆಂದೂ, ಮತ್ತೆ ಕೆಲವರು ಕಾವಲುಗಾರರೆಂದೂ ಗುರುತಿಸಿದೆ. ಆನೆ ಹಾಗೂ ಮಾನವ ಸಂಘರ್ಷದ ಸಾಮಾನ್ಯ ಮುಖ ಹೆಗ್ಗಡದೇವನಕೋಟೆಯ ಕಾಡಲ್ಲಿ ಕಾಣುತ್ತದೆ. ಊರಿನಲ್ಲೆ ಕೆಲವು ಮಾವಟಿಗರಿದ್ದಾರೆ. ಜತೆಯಲ್ಲಿ ಆನೆಗಳ ಚಲನವಲನಗಳ ಜಾಡು ಹಿಡಿಯಬಲ್ಲವರಾಗಿದ್ದಾರೆ ಸಹ. ಸಸ್ಯಹಾರಿ ಪ್ರಾಣಿಗಳಾದ ಆನೆಗಳು ಮಾನವನ ಜತೆಗೆ ಸಂಘರ್ಷಕ್ಕೆ ಇಳಿಯುವುದೆಂದರೆ, ಆತನ ಬೆಳೆಗಳ ಮೇಲನ ದಾಳಿಯ ಮಾಲಕ ಕಾಡಿನಲ್ಲಿ. ಹುಲ್ಲು ಮತ್ತಿತರ ಸಹಜವಾದ ಆನೆಗಳ ಆಹಾರ ಕಡಿಮೆಯಾದಾಗ. ಅಲ್ಲದೆ, ಹಸಿರಾದ ಬೆಳೆಗಳ ಕಂಡಾಗ ಆಹಾರಕ್ಕೆಂದು ಅವು ಹೊಲಗಳಿಗೆ ದಾಳಿ ಇಡುತ್ತವೆ. ಬೆಂಕಿ ಮತ್ತು ಶಬ್ದದ ಬಲದಿಂದ ಬೆಳೆ ಮತ್ತು ತಮ್ಮ ರಕ್ಷಣೆಗೆ ಪ್ರಯತ್ನಿಸುತ್ತಾರೆ. ಬಿದಿರಿನಿಂದ ಸದ್ದು ಮಾಡುವ ಮೂಲಕವೋ, ಸಣ್ಣ ಬೆಂಕಿ ಹಾಕುವ ಮೂಲಕವೋ ರಕ್ಷಣೆಗೆ ಮುಂದಾಗುತ್ತಾರೆ.

ಏನಾದರೊಂದು ಕೆಲಸ, ಅದರಿಂದ ಒಂದು ದುಡಿಮೆ ಎಂಬುದೆಲ್ಲ ಅವರಿಗೆ ಇತ್ತೀಚಿಗಿನದು. ಉಳಿದಂತೆ ಏನಿದ್ದರೂ, ಶಿಕಾರಿ, ಸಣ್ಣಪುಟ್ಟ ಆಯ್ದ ಕೊಯ್ಲು, ಬಿಟ್ಟರೆ, ಮತ್ತೇರಿಸುವಂತಹ ಚಟಗಳು, ನಿದ್ರೆ. ಅವರಾಯ್ತು ಅವರ ಪಾಡಾಯ್ತು. ಕಾಡಲ್ಲೇನು ಕಡಿಮೆ, ನಿದ್ರಿಸಲು ಧೈರ್ಯ ಬೇಕಷ್ಟೆ. ಕಾಡುವಾಸಿ ಕುರುಬರಿಗೆ ಧೈರ್ಯಕ್ಕೇನು?

ಇವರ ಆಹಾರವೂ ಸರಳ, ಆರೋಗ್ಯವೇನೂ ಅಂತಹ ಸುಖಕರವಾದದ್ದಲ್ಲ. ಸಾಧಾರಣ ಮೈಕಟ್ಟಿನ, ನ್ಯೂನ್ಯ ಪೋಷಣೆಯನ್ನು ಅನುಭವಿಸುವ ಜನರು ಇವರು. ನಿರೀಕ್ಷೆಯ ಬೆಳೆಯೂ ಇಲ್ಲದ, ಕಾಡನ್ನೇ ನಂಬಿದ ಆಹಾರ ಪರಿಸ್ಥಿತಿ ನಿರಂತರವಾಗಿ ಒಂದೇ ಸಮನಾಗಿರುವಂತಹದ್ದಲ್ಲ. ಹಾಗಾಗಿ ನಿರಂತರ ಏರಿಳಿತಗಳನ್ನು ಅನುಭವಿಸುತ್ತಲೇ ಇರುತ್ತಾರೆ. ಹೆಚ್ಚಿನ ಆಹಾರದ ಲಭ್ಯತೆ ಇದ್ದಾಗಲೂ ಸಂಗ್ರಹನೆಯ ಸಾಧ್ಯವಾಗುವುದಿಲ್ಲ. ಆದ್ದರಿಂದ ಆಹಾರದ ಬೇಡಿಕೆ ಮತ್ತು ಪೂರೈಕೆ ಪೂರಕವಾದ ಪರಿಸ್ಥಿತಿಯಲ್ಲಿಲ್ಲ. ಇದರಿಂದ ನಿಸರ್ಗದೊಳಗಿದ್ದೂ ಸಹ ವರ್ಷದ ಎಲ್ಲ ದಿನಗಳಲ್ಲಿ ಹಸಿವಿನಿಂದ ಸಂಪೂರ್ಣ ಹೊರಬರುವ ಪರಿಸ್ಥಿತಿ ಸಾಧ್ಯವಾಗುವುದಿಲ್ಲ. ಆದರೆ, ಇತ್ತೀಚಿಗಿನ ಪಡಿತರ ಆಹಾರ ಪೂರೈಕೆಯಿಂದ ದಿನನಿತ್ಯದ ಆಹಾರದ ಅವಶ್ಯಕತೆಯನ್ನು ಸ್ವಲ್ಪ ಮಟ್ಟಿಗೆ ಅದರೂ ತಲುಪುತ್ತಿದೆ.



ಚಿತ್ರ 4.15. ಅರಣ್ಯ ಪರಿಸರದೊಳಗಿನ ಜೇನುಕುರುಬರ ಬಳ್ಳೆ ಹಾಡಿ



ಚಿತ್ರ 4.16 ಬಳ್ಳೆ ಹಾಡಿಯ ಜೇನುಕುರುಬರು ವಾಸಕ್ಕಾಗಿ ನಿರ್ಮಿಸಿಕೊಂಡಿರುವ ಮನೆ

ತನ್ನ ಮೂಲಭೂತ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವಷ್ಟು ದೈಹಿಕ ಸ್ಥಿತಿಯನ್ನು ಕಪಾಡಕೊಳ್ಳುವುದು ಒಂದು ಜೀವಿಯ ಲಕ್ಷಣ. ಇಂತಹ ಸ್ಥಿತಿಯಿಂದ ದೂರವಾದಾಗ ತನ್ನ ಜೀವನ ಕ್ರಮವನ್ನು ಬದಲಾಯಿಸಿಕೊಳ್ಳುವುದರ ಮೂಲಕ ರಿಪೇರಿ ಮಾಡಲು ಪ್ರಯತ್ನಿಸುತ್ತಾರೆ. ಈ ತೆರನಾದ ಜೈವಿಕ ಜ್ಞಾನವು ಅರಣ್ಯವಾಸಿಗಳಲ್ಲೂ ಸಹಜ. ಇವರು ತಮ್ಮ ಆರೋಗ್ಯದಲ್ಲಿನ ಏರುಪೇರುಗಳನ್ನು ಆಹಾರ ಬದಲಾವಣೆ ಕ್ರಮ, ನಾಟಿ ಔಷಧಿ ಪದ್ಧತಿ ಮೂಲಕ ಸುಧಾರಿಸಿಕೊಳ್ಳುವುದರ ಪ್ರಯತ್ನದಲ್ಲಿ ಜೀವನ ಸಾಗಿಸಿಕೊಂಡು ನಡೆದಿದ್ದಾರೆ.

ಕಾಡಿನೊಳಗಿನ ಸಮುದಾಯಕ್ಕೆ ಹೊರ ಪ್ರಪಂಚದ ದಾರಿ ಬಂದಿದೆ. ಇದು ಹೊರ ಪ್ರಪಂಚದ ಬೇರೆ, ಬೇರೆ ಬದುಕಿನ ದಾರಿಗಳನ್ನು ತೋರಿಸುತ್ತದೆ. ಸಹಜವಾಗಿದ್ದವರನ್ನು ದಾರಿ ತಪ್ಪಿಸುವ ಹಾಗೂ ಉತ್ತಮ ದಾರಿ ತೋರಿಸುವ ಎರಡೂ ಸಾಧ್ಯತೆಗಳಿವೆ. ಸಧ್ಯಕ್ಕೆ ಅವರಿಗೆ ಹೆಚ್ಚಿನ ಆಸೆ, ಆಕಾಂಕ್ಷೆ, ನಿರೀಕ್ಷೆಗಳು ಇದ್ದಂತೆ ಕಾಣುತ್ತಿಲ್ಲ. ಆದರೆ, ಆಧುನಿಕತೆ ಎಡೆಗೆ ಸಾಗಿದ ಮನುಷ್ಯ ಆಸೆಯ ಕಡೆಗೂ ಹೋಗುತ್ತಿರುವುದರಿಂದ ಇವರಿಗೂ ಸಹ ಆಧುನಿಕ ಸಮಾಜದ ಆಸೆಗಳು ಅಂಟಬಹುದು. ಇಷ್ಟೆಲ್ಲದರ ಮಧ್ಯೆಯೂ ಅವರ ಪಾಡಿಗೆ ಅವರೇ ಇರುವುದನ್ನು ಇಷ್ಟ ಪಡುವ ಸಮುದಾಯ ಅವರದ್ದಾಗಿದೆ.

## ಮಾದರಿ ಅಧ್ಯಯನ (Case Study) –2

## ಅರಣ್ಯದ ಅಂಚಿನಲ್ಲಿ ವಾಸಿಸುವ ಬುಡಕಟ್ಟು ಸಮುದಾಯ (ಕರಲಕಟ್ಟೆ ದೊಡ್ಡಿ)

**ಸೋಲಿಗರ ಪೋಡಿಯ ಪರಿಸರ – ಕರಲಕಟ್ಟೆ ದೊಡ್ಡಿ**

ಕರಲಕಟ್ಟೆದೊಡ್ಡಿಯು ಸೋಲಿಗರ ವಸತಿಗಾಗಿರುವ ಪ್ರಾತಿನಿಧಿಕ ಹಳ್ಳಿ/ಪೋಡು. ಕೊಳ್ಳೆಗಾಲ ತಾಲ್ಲೂಕಿನ ಮುಖ್ಯ ಸ್ಥಳದಿಂದ ಸುಮಾರು 12 ಕಿಲೊ ಮೀಟರ್ ದೂರದಲ್ಲಿದೆ. ಕುರುಬನ ಕಟ್ಟೆಗೆ ಹೋಗುವ ಮಾರ್ಗದಲ್ಲಿ ಕುರುಬನಕಟ್ಟೆಗಿಂತ 2.1/2 ಕಿಲೊ ಮೀಟರ್ ಮೊದಲು ಎಡಕ್ಕೆ ಇರುವ ತಿರುವು ರಸ್ತಯಲ್ಲಿ ಮುಖ್ಯ ರಸ್ತೆಯಿಂದ 1.1/2 ಕಿಲೊ ಮೀಟರ್ ದೂರದಲ್ಲಿದೆ. ಹಳ್ಳಿಯ ಹಿಂದೆ 1–2 ಕಿಲೊ ಮೀಟರ್ ಅಂತರದಲ್ಲಿ ಅರಣ್ಯ ಪರಿಸರದ ತಪ್ಪಲು ಹೊಂದಿದೆ (ಚಿತ್ರ 4.17). ಈ ಹಳ್ಳಿಯಲ್ಲಿ ಸುಮಾರು 40 ಕುಟುಂಬಗಳು ವಾಸಿಸುತ್ತಿದ್ದು ಪ್ರತೀ ಕುಟುಂಬದಲ್ಲಿ 4–10 ಸದಸ್ಯರಿದ್ದಾರೆ. ಸರ್ಕಾರವು ಇವರನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕೊಸ್ಕರ ಅವರಿಗೆ 2ರಿಂದ 2.1/2 ಎಕರೆ ಜಮೀನನ್ನು ನೀಡಿದ್ದಾರೆ. ಆದರೆ ಇದುವರೆಗೆ ಕೃಷಿ ಭೂಮಿಯ ಪಟ್ಟಾ ಅವರ ಹೆಸರಿಗೆ ನೋಂದಣಿಯಾಗಿಲ್ಲ. ಕೆಲವು ಕುಟುಂಬಗಳು ಜಮೀನು ವ್ಯವಸಾಯಕ್ಕೆ ಬಳಸುತ್ತಿದ್ದು ಇದು ವಸತಿಯ ಸಮೀಪದಲ್ಲಿದೆ. ಹೆಚ್ಚು ಉತ್ಪಾದಕತೆ ಹೊಂದಿರದ ಜಮೀನುಗಳಾಗಿವೆ ಎಂಬುದು ಅವರ ಮಾತುಗಳಿಂದ ತಿಳಿದು ಬರುತ್ತದೆ. ಹಾಗಾಗಿ ಕೃಷಿಯನ್ನೇ ಅಲ್ಲದೆ ಯಾವುದೇ ಕೂಲಿ ಕೆಲಸವನ್ನು ಜೀವನಕ್ಕಾಗಿ ಅವಲಂಬಿಸಿಕೊಂಡದ್ದಾರೆ. ಬೆಟ್ಟದಿಂದ ಮೈದಾನ ಪ್ರದೇಶದ ಕಡೆ ಜೀವನೋಪಾಯಕ್ಕಾಗಿ ಬಂದು ಈ ಬದುಕಿನಲ್ಲಿ ತೊಡಗಿದ್ದಾರೆ.

**ಬೆಳೆಗಳು:** ರಾಗಿ, ಮುಸುಕಿನಜೋಳ, ಅವರೆ ಮತ್ತು ಅಲಸಂದಿ ಇವರು ಬೆಳೆಯುವ ಪ್ರಮುಖ ಬೆಳೆಗಳಾಗಿವೆ. ಬಿತ್ತನೆಗೆ ಬೇಕಾದ ಬೀಜಗಳನ್ನು ಇವರೇ ಸಂಗ್ರಹಿಸಿಟ್ಟುಕೊಂಡು ಬಳಸುತ್ತಾರೆ. ಮತ್ತು ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಲಭ್ಯವಿರುವ ಯಾವುದೇ ರಾಸಾಯನಿಕಗಳಿಗೆ ಮೊರೆ ಹೋಗದೇ ತಾವೇ ತಯಾರಿಸಿದ ಕಾಂಪೋಸ್ಟ್ ಗೊಬ್ಬರಗಳನ್ನು ಬಳಸುತ್ತಿದ್ದಾರೆ. ಬೆಳೆದ ಬೆಳೆಯನ್ನು ಮಾರಾಟ ಮಾಡದೇ ಸಂಪೂರ್ಣವಾಗಿ ತಮ್ಮ ಮನೆ ಬಳಕೆಗಾಗಿ ಮಾತ್ರ ಉಪಯೋಗಿಸುತ್ತಾರೆ.

**ಆಹಾರ ಧಾನ್ಯಗಳ ಸಂಗ್ರಹಣೆ:** ರಾಗಿ ಮತ್ತು ಮುಸುಕಿನ ಜೋಳವನ್ನು ಕಟಾವು ಮಾಡಿದ ನಂತರ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಗೋಣಿ ಚೀಲಗಳಲ್ಲಿ ಸಂಗ್ರಹಿಸಿಡುತ್ತಾರೆ. ಹೀಗೆ ಸಂಗ್ರಹಿಸಿದ ಧಾನ್ಯಗಳನ್ನು ಒಂದು ವರ್ಷದವರೆಗೆ ಬಳಸುತ್ತಾರೆ. ಅಲಸಂದಿ ಮತ್ತು ಅವರೆಯನ್ನು ಸಾದ್ಯವಾದಷ್ಟು ಹಸಿ ತರಕಾರಿಯಾಗಿ ಬಳಸಿ ಮಿಕ್ಕವುಗಳನ್ನು ಚೆನ್ನಾಗಿ ಬಿಸಿಲಿನಲ್ಲಿ ಒಣಗಿಸಿ ಬೂದಿ ಮತ್ತು ಬೇವಿನ ಸೊಪ್ಪನ್ನು ಬೆರಸಿ ಸಂಗ್ರಹಿಸಿಡುತ್ತಾರೆ.

ಹಳ್ಳಿಯ ಪರಿಸರವು ನೀರಿನ ಅನುಕೂಲಗಳನ್ನು ನಿರ್ಮಿಸಿಕೊಂಡಿದ್ದು, ಮಳೆ ನೀರಿನ ಸಂಗ್ರಹಣೆಗೆ ಒಂದು ಸಣ್ಣ ಕೆರೆಯನ್ನು ಹೊಂದಿದೆ. (ಚಿತ್ರ 4.18 )ಸಮುದಾಯದ ಅನುಕೂಲಕ್ಕಾಗಿ ಕೊಳವೆ ಬಾವಿಯನ್ನು ನಿರ್ಮಿಸಲಾಗಿದೆ. ಪೋಡಿಗೆ ವಿದ್ಯುಶ್ಚಕ್ತಿ ಸಂಪರ್ಕವನ್ನು ಕಲ್ಪಿಸಲಾಗಿದೆ. ಪಕ್ಕಾ



ಚಿತ್ರ 4.17 ಅರಣ್ಯದ ಅಂಚಿನಲ್ಲಿರುವ ಸೋಲಿಗರ ಹಾಡಿ-ಕರಲಕಟ್ಟೆ ದೊಡ್ಡಿ



ಚಿತ್ರ 4.18 ಮಳೆಯ ನೀರಿನ ಸಂಗ್ರಹಣೆಗೆ ನಿರ್ಮಿಸಿಕೊಂಡಿರುವ ಕೆರೆ

ರಸ್ತೆಯನ್ನು ನಿರ್ಮಿಸಲಾಗಿಲ್ಲ. ಊರಿನಲ್ಲಿ ಅಂಗನವಾಡಿ ಮತ್ತು ಪ್ರಾಥಮಿಕ ಶಾಲೆ ಇದೆ (ಚಿತ್ರ.4.19) ಹೆಚ್ಚಿನ ಮಕ್ಕಳ ವಿದ್ಯಾಭ್ಯಾಸವು ಕೇವಲ ಊರಿನಲ್ಲಿರುವ ಶಾಲೆಯನ್ನು ಮಾತ್ರ ಅವಲಂಬಿಸಿದ್ದು ನಂತರದ ಯಾವುದೇ ಶಿಕ್ಷಣಕ್ಕೆ ಆಸಕ್ತರಾಗಿಲ್ಲ. ಹೆಚ್ಚಿನ ವಿದ್ಯಭ್ಯಾಸಕ್ಕೆ ಸುಮಾರು 5–6 ಕಿಲೊ ಮೀಟರ್ ಹೆಚ್ಚು ದೂರ ಹೋಗಬೇಕಾದ ಪರಿಸ್ಥಿತಿ ಇದೆ.

**ಆಹಾರ ಸಂಸ್ಕೃತಿ :** ಈ ಸಮುದಾಯದ ಆಹಾರ ಸಂಸ್ಕೃತಿಯು ರಾಗಿ, ಸೊಪ್ಪು ತರಕಾರಿಗಳನ್ನು ಪ್ರಮುಖವಾಗಿ ಒಳಗೊಂಡಿದೆ. ರಾಗಿ ಬೀಸುವ ಬೀಸುಕಲ್ಲುಗಳು ಅನೇಕ ಮನೆಗಳಲ್ಲಿ ಬಳಕೆಯಲ್ಲಿವೆ. ಮುಸುಕಿನ ಜೋಳ, ಅವರೆ, ಅಲಸಂದಿಗಳು ನಿತ್ಯ ಬಳಕೆಮಾಡುವ ಆಹಾರ ಪದಾರ್ಥಗಳಾಗಿವೆ. ಇವರದು ದಿನದಲ್ಲಿ ಎರಡು ಹೊತ್ತು ಊಟ ಮಾಡುವ ಸಂಪ್ರದಾಯ. ದಿನನಿತ್ಯದ ಬಳಕೆಗಾಗಿ ಇವರ ಪ್ರಮುಖ ಆಹಾರವಾದ ರಾಗಿ ಮುದ್ದೆ ಜತೆ ಬಳಸಲು ಅಗತ್ಯ ಸಾರು ಮುಂತಾದ ತಯಾರಿಗೆ ಅನುವಾಗುವ ಕೆಲವು ಸೊಪ್ಪು ತರಕಾರಿಗಳಾದ ಕುಂಬಳ ಸೊಪ್ಪು, ಕೊತ್ತಂಬರಿಸೊಪ್ಪು, ನುಗ್ಗೆಸೊಪ್ಪು, ಚಪ್ಪರದವರೆ ಮುಂತಾದವುಗಳನ್ನು ಮನೆಯ ಮುಂದೆ ಅಥವಾ ಹಿಂದೆ ಬೆಳೆಸಿರುತ್ತಾರೆ. ಜತೆಗೆ ಮಳೆಗಾಲದಲ್ಲಿ ಸುತ್ತಮುತ್ತಲಿನ ಅರಣ್ಯದಲ್ಲಿ ಸಿರುವ ಸೀಗೆಸೊಪ್ಪು, ಅರಣ್ಯಸೊಪ್ಪು, ಕಿರಿಬಿದಿರು/ಕಳಲೆ, ಡಗಳಿಸೊಪ್ಪು, ಕಿಲಕಿರೆಸೊಪ್ಪು, ಹೊನ್ನೆಸೊಪ್ಪು, ಅಣ್ಣೆಸೊಪ್ಪು, ಗೊರಜಿಸೊಪ್ಪು, ಹಾಲೆಸೊಪ್ಪು ಮುಂತಾದವುಗಳನ್ನು ತಂದು ಬಳಸುತ್ತಾರೆ. ಮತ್ತು ಇವರು ಹೇಳುವ ಪ್ರಕಾರ ಹೆಚ್ಚು ಶಕ್ತಿ ನೀಡುವ ಹೆಚ್ಚು ಆರೋಗ್ಯ ನೀಡುವ ವಿವಿಧ ಬಗೆಯ ಗೆಣಸುಗಳಲ್ಲಿ ನಾರೆಗೆಣಸು, ನೂರೆಗೆಣಸು ಮತ್ತು ಮುಳ್ಳು ಗೆಣಸುಗಳು ಪ್ರಮುಖವಾದವುಗಳು (ಚಿತ್ರ 4.20).

ರಿಯಾಯಿತಿ ದರದಲ್ಲಿ ಬಡವರಿಗಾಗಿ ಇರುವ ಸರ್ಕಾರದ ಬಹುದೊಡ್ಡ ಯೋಜನೆಯಾದ ಪಡಿತರ ಯೋಜನೆಯ ಸೌಲಭ್ಯವು ಇವರಿಗೆ ದೊರೆತದ್ದರಿಂದ ಪ್ರತಿ ಕುಟುಂಬಗಳು ಈ ಪಡಿತರ ಅಂಗಡಿಗಳ ಮೂಲಕ ಪ್ರತಿ ತಿಂಗಳು ಅಕ್ಕಿ, ಗೋಧಿ, ಮತ್ತು ಸಕ್ಕರೆಯನ್ನು ಪಡೆಯುತ್ತಿದ್ದಾರೆ. ಇದರಿಂದಾಗಿ ಸಾಂಪ್ರದಾಯಿಕವಾಗಿ ಸೇವಿಸುತ್ತಿರುವ ರಾಗಿ ಮುದ್ದೆ ಜತೆ ಅಕ್ಕಿ ಮತ್ತು ಗೋಧಿಯಿಂದ ತಯಾರಿಸಿದ ತಿಂಡಿಗಳು ಸೇರತೊಡಗಿವೆ.

ಇಂದಿನ ಪರಿಸ್ಥಿತಿಯಲ್ಲಿ ಅನೇಕ ಬುಡಕಟ್ಟು ಸಮುದಾಯಗಳು ತಮ್ಮ ಜೀವನ ನಿರ್ವಹಣೆಗಾಗಿ ತಲೆಮಾರುಗಳಿಂದ ರೂಢಿಸಿಕೊಂಡು ಬಂದಿರುವ ವೃತ್ತಿಗಳಿಂದ ಸಂಪೂರ್ಣವಾಗಿ ಹೊರ ಬರಲಾಗದ ಮತ್ತು ನಾಗರಿಕ ಸಮಾಜದ ಜೊತೆ ಸಂಪೂರ್ಣ ಒಗ್ಗಿಕೊಳ್ಳದೆ ಒಂದು ರೀತಿಯ ಗೊಂದಲಕ್ಕೆ ಸಿಲುಕಿಕೊಂಡಿದ್ದಾರೆ.



ಚಿತ್ರ 4.19 ಕರಲಕಟ್ಟೆ ದೊಡ್ಡಿಯ ಪ್ರಾಥಮಿಕ ಶಾಲೆ



ಚಿತ್ರ 4.20 ಸೋಲಿಗರು ಅರಣ್ಯದಿಂದ ಸಂಗ್ರಹಿಸುವ ಮುಳ್ಳು ಗೆಣಸು

ಇವರು ಬೆಟ್ಟದಿಂದ ಮೈದಾನ ಪ್ರದೇಶದ ಕಡೆ ಬಂದು ಜೀವನೋಪಾಯಕ್ಕಾಗಿ ಕೃಷಿಯಲ್ಲಿ ತೊಡಗಿದ್ದಾರೆ. ಬುಡಕಟ್ಟು ಕುಟುಂಬಗಳ ಹಿರಿಯರಿಗೆ ತಮ್ಮ ಸಂಸ್ಕೃತಿ ಕಳೆದು ಹೋಗುತ್ತಿರುವುದರ ಕುರಿತು ವಿಷಾದ ಮತ್ತು ಪಶ್ಚಾತ್ತಾಪವಿದೆ. ಆದರೆ ಯುವಕರು, ಹುಡುಗರು ಸ್ವಲ್ಪ ಮಟ್ಟಿಗೆ ದುಡ್ಡನ್ನು ಕಂಡವರು ನಾಗರೀಕ ಸಮಾಜ ಎಂದು ಕರೆಸಿಕೊಂಡಿರುವ ಜನರನ್ನು ನೋಡಿದಾಗ ತಾವೂ ಸಹ ಅವರ ಹಾಗೆ ಬದುಕಬಹುದಾಗಿತ್ತು ಎನ್ನುವ ಆಪೇಕ್ಷೆಯಲ್ಲಿ ತಮ್ಮ ಪರಂಪರೆ, ತಮ್ಮ ಸಂಅಸ್ಕೃತಿ ಕುರಿತು ವಿಸ್ಮೃತಿ ಬೆಳೆಸಿಕೊಳ್ಳುತ್ತಿದ್ದಾರೆ.

ಭೂತಕಾಲದ ಬಗ್ಗೆ ಚಿಂತೆಯಿಲ್ಲದ, ದುಃಖವಿಲ್ಲದ, ನೋವಿಲ್ಲದ ಭವಿಷ್ಯದ ಬಗ್ಗೆ ಆತಂಕ, ಕುತೂಹಲವಿಲ್ಲದ ವರ್ತಮಾನವನ್ನೇ ಬಹಳ ದೊಡ್ಡ ಭಾಗ ಎಂದು ಭಾವಿಸಿ ಜೀವಿಸುತ್ತಿದ್ದಾರೆ.

# ಮಾದರಿ ಅಧ್ಯಯನ (Case Study) –3

## ಅರಣ್ಯದ ಆಚೆ ವಾಸಿಸುವ ಬುಡಕಟ್ಟು (ಸೋಲಿಗರ ಕಾಲೋನಿ)

### ಸೋಲಿಗರ ಕಾಲೋನಿಯ ವಿವರಗಳು

| ಸೋಲಿಗರ ಕಾಲೋನಿ, ಜಯಪುರ ಹೋಬಳಿ, ಮೈಸೂರು ತಾಲ್ಲೂಕು | |
|---|---|
| ತಾಲ್ಲೂಕು ಕೇಂದ್ರದಿಂದ ದೂರ | 27ಕಿ.ಮೀ. |
| ರಸ್ತೆ ಸಂಪರ್ಕ | ಕಾಲ್ಲೂಕು ಕೇಂದ್ರದಿಂದ ಗ್ರಾಮದವರೆಗೆ ಟಾರ್ ರಸ್ತೆ ಇದೆ |
| ವಿದ್ಯುತ್ ಸಂಪರ್ಕ | ಪ್ರತೀ ಮನೆ ವಿದ್ಯುತ್ ಸಂಪರ್ಕ ಹೊಂದಿದೆ |
| ನೀರಿನ ವ್ಯವಸ್ಥೆ | ಮನೆ ಮನೆಗೂ ನಲ್ಲಿ ನೀರಿನ ಸರಬರಾಜು ವ್ಯವಸ್ಥೆ ಇದೆ |
| ಮನೆಗಳ ಸಂಖ್ಯೆ | 100 |
| ಗ್ರಾಮದ ಒಟ್ಟು ಜನಸಂಖ್ಯೆ | 500 |
| ಅಂಗನಾಡಿ ಕೇಂದ್ರ | ಇದೆ |
| ಶಾಲೆ | ಇದೆ(1–6ನೇ ತರಗತಿವರೆಗೆ) |
| ವಸತಿನಿಲಯ | ಇದೆ |
| ಆಸ್ಪತ್ರೆ | ಗ್ರಾಮಕ್ಕೆ 2 ಕಿ.ಮೀ. ದೂರವಿರುವ ಕಲ್ಲಳ್ಳಿ ಗ್ರಾಮದಲ್ಲಿ ಸರಕಾರಿ ಆಸ್ಪತ್ರೆ ಇದೆ |
| ಉದ್ಯೋಗ | ಕೃಷಿ, ಕೂಲಿ, ವಸ್ತುಗಳ ಹೊತ್ತುಮಾರುವುದು |
| ಬೆಳೆಗಳು | ರಾಗಿ, ಜೋಳ, ಹತ್ತಿ, ಹುರುಳಿ, ಅಲಸಂದೆ, ತೊಗರಿ, ಅವರೆ, ಮೆಣಸಿನಕಾಯಿ, ಟೊಮ್ಯಾಟೊ ಇತ್ಯಾದಿ |

ಸೋಲಿಗರು ಅರಣ್ಯ ಪ್ರದೇಶದಿಂದ ಬೇರೆ ಬೇರೆ ಕಾಲದಲ್ಲಿ ವಿವಿಧ ಸ್ಥಳಗಳಿಗೆ ಹೋಗಿ ನೆಲೆಸಿದ್ದಾರೆ. ಬಿಳಿಗಿರಿರಂಗನ ಬೆಟ್ಟದಿಂದ ಯಾವುದೊ ಕಾರಣಕ್ಕೆ ಸುಮಾರು 80ವರ್ಷಗಳ ಹಿಂದೆ ಮೈಸೂರು ತಾಲ್ಲೂಕಿನಲ್ಲಿ ಬಂದು ನೆಲೆಸಿದ್ದಾರೆ. ಮೈಸೂರಿನಿಂದ ಹೆಗ್ಗಡದೇವನಕೋಟೆಗೆ ಹೋಗುವ ದಾರಿಯಲ್ಲಿ ಅಂತಹ ಒಂದು ಸೋಲಿಗರ ಕಾಲೋನಿ ನಿರ್ಮಾಣವಾಗಿದೆ. ಸೋಲಿಗರ ಕಾಲೋನಿ ಎಂದೇ ಗುರುತಿಸಲ್ಪಟ್ಟ ಈ ಗ್ರಾಮ ಇಂದು ಅದೇ ಹೆಸರಿನಿಂದ ಪುನರ್‌ವಸತಿ ಕೇಂದ್ರವಾಗಿದೆ.

ಪುನರ್‌ವಸತೀಕರಣಗೊಂಡ ಈ ಗ್ರಾಮವು ಸೋಲಿಗರ ಪೋಡಿ ಎಂದು ಕರೆಸಿಕೊಳ್ಳದೆ 'ಕಾಲೋನಿ' ಎಂಬುದಾಗಿಯೇ ಕರೆಸಿಕೊಳ್ಳುವುದರ ಜತೆಗೆ ಒಂದು ಆಧುನಿಕ ಗ್ರಾಮದಂತೆ ಕಾಣುತ್ತದೆ (ಚಿತ್ರ 4.21 ಸೋಲಿಗರ ಕಾಲೋನಿ). ಸುಮಾರು 100 ಮನೆಗಳುಳ್ಳ ಈ ಗ್ರಾಮವು ಸುಮಾರು 500

ಜನಸಂಖ್ಯೆಯನ್ನು ಹೊಂದಿದೆ. ಬಹುಪಾಲು ಇಲ್ಲಿನ ಎಲ್ಲ ಜನರು ನಾಗರೀಕ ಸಂಪರ್ಕ ಹೊಂದಿದ್ದು ಸಾಮಾನ್ಯ ಜೀವನವನ್ನು ಅನುಭವಿಸುತ್ತಿದ್ದಾರೆ. ಊರಿಗೆ ವಿದ್ಯುತ್ ಸಂಪರ್ಕ, ಮನೆ ಮನೆಗೆ ನೀರಿನ ವ್ಯವಸ್ಥೆ ಪುನರ್‌ವಸತೀಕರಣ ಯೋಜನೆಯಡಿಯಲ್ಲಿ ಬಹುಪಾಲು ಸೌಲಭ್ಯವನ್ನು ಒದಗಿಸಿಕೊಂಡ ಈ ಹಳ್ಳಿಯು ಸೋಲಿಗರನ್ನು ಆಧುನಿಕ ಸಮಾಜಕ್ಕೆ ಸಂಪೂರ್ಣ ಒಗ್ಗಿಸಿದೆ.

ಸುಮಾರು 8–10 ದಶಕಗಳ ಕಾಲ ಇಲ್ಲಿ ನೆಲೆ ಕಂಡವರು ಇತ್ತೀಚಿಗಿನ ಅನುಕೂಲತೆಗಳನ್ನು ಪಡೆದುಕೊಳ್ಳುವಲ್ಲಿ ಸಾಕಷ್ಟು ಮುನ್ನಡೆ ಸಾಧಿಸಿದ್ದಾರೆ. ಸುಮಾರು ಶೇಕಡ 60–70ರಷ್ಟು ಜನಗಳು ಕೃಷಿ ಭೂಮಿಯನ್ನು ಪಡೆದುಕೊಂಡಿದ್ದಾರೆ. ಹಾಗಾಗಿಯೇ ಹೆಚ್ಚಿನ ಜನ ಕೃಷಿಯನ್ನೇ ಅವಲಂಬಿಸಿದ್ದಾರೆ.

**ಕೃಷಿ:** ಸೋಲಿಗರ ಸಾಂಸ್ಕೃತಿಕ ಯಾತ್ರೆಯ ವಿಕಾಸದಲ್ಲಿ ಕೃಷಿಗೆ ಪ್ರಮುಖ ಸ್ಥಾನ. ಅರಣ್ಯವಾಸಿಗಳಾಗಿದ್ದು ಕಾಡಿನೊಳಗೇ ನೆಲವನ್ನು ಹಸನು ಮಾಡಿ ಕುಮರಿ ಬೇಸಾಯ ಮಾಡುತ್ತಾ ಸಂಚಾರದಲ್ಲಿದ್ದವರು, ಈಗ ಒಂದೆಡೆ ನೆಲೆ ಕಂಡ ಕೃಷಿ ಆರಂಭಿಸಿದ್ದಾರೆ. ಮಿಶ್ರ ಬೇಸಾಯವೇ ಮೂಲ ಆಸರೆಯಾಗಿದ್ದ ಇವರಿಗೆ ಬಹುಬೆಳೆಗಳನ್ನು ಒಟ್ಟೊಟ್ಟಿಗೆ ಬೆಳೆವ ರೂಢಿಯೇ ಹೆಚ್ಚು.

ರಾಗಿ ಹಾಗೂ ಮುಸುಕಿನ ಜೋಳ ಇವರು ಬೆಳೆಯುವ ಪ್ರಮುಖ ಬೆಳೆಗಳಾಗಿದ್ದು ದ್ವಿದಳ ಧಾನ್ಯಗಳಾದ ತೊಗರಿ ಹಾಗೂ ಅವರೆ ಮತ್ತು ಎಣ್ಣೆಕಾಳುಗಳಾದ ಔಡಲ ಹಾಗೂ ಸಾಸಿವೆ ತರಕಾರಿಗಳಾದ ಕುಂಬಳ, ಸೌತೆ, ಹುರುಳಿಕಾಯಿ ಇವರು ಬೆಳೆಯುವ ಇತರೆ ಬೆಳೆಗಳು. ರಾಗಿ ಮತ್ತು ಮುಸುಕಿನ ಜೋಳದ ಜತೆ ದಂಟಿನ ಬೀಜವನ್ನು ಮಿಶ್ರ ಬೆಳೆಯಾಗಿ ಬೆಳೆಯುವುದು ರೂಢಿಯಲ್ಲಿದೆ.

**ಆಹಾರ ಪದ್ದತಿ:** ಒಂದು ಪರಂಪರೆಯಲ್ಲಿ ಸಾಮಾನ್ಯವಾದ ಪದ್ಧತಿಗಳು ಬದಲಾದ ಸನ್ನಿವೇಶಗಳಲ್ಲಿ ಕೇವಲ ಸಂಪ್ರದಾಯಗಳಾಗಿ ಉಳಿದುಕೊಳ್ಳುತ್ತವೆ. ನಾವು ಕೂಡ ಅನೇಕ ಪದ್ದತಿಗಳನ್ನು ಶಾಸ್ತ್ರ ಸಂಪ್ರದಾಯಗಳನ್ನು ನಮ್ಮ ಸಂಪ್ರದಾಯಕ್ಕೆ ಸೀಮಿತಗೊಳಿಸಿದ್ದೇವೆ. ಸಹಜ ಬದುಕಿನಲ್ಲಿದ್ದ ನಡುವಳಿಕೆಗಳ ಉಳಿಕೆಗಳು ಹಾಗೇ ಎನ್ನುವುದಕ್ಕೆ ಅಭಿವೃದ್ಧಿ ಹೊಂದುತ್ತಿರುವ ಸೋಲಿಗ ಸಮುದಾಯದಲ್ಲಿ ಕಾಣಬಹುದು.

ಹಿಂದಿನಿಂದಲೂ ಸೋಲಿಗರು ಸಹಜವಾಗಿ ಸಿಗುವ ಆಹಾರವನ್ನು ಬಳಸುತ್ತಿದ್ದವರು ಈಗೀಗ ಸಾಕಷ್ಟು ಬದಲಾವಣೆಗಳನ್ನು ಕಂಡುಕೊಂಡಿದ್ದಾರೆ. ಸಾಮಾನ್ಯವಾಗಿ ತಾವು ಉಣ್ಣುವ ಬಹುಪಾಲು ಆಹಾರ ಬೆಳೆಗಳನ್ನು ತಮ್ಮ ಕಟಾವಿನಿಂದಲೇ ಮಾಡುತ್ತಿದ್ದಾರೆ. ರಾಗಿ, ಸೊಪ್ಪು ತರಕಾರಿಗಳು ಇವರ ಆಹಾರದಲ್ಲಿ ಸಾಮಾನ್ಯವಾಗಿವೆ. ಆದರೂ ತಾವು ಬಳಸುತ್ತಿದ್ದ ಹಲವಾರು ಗೆಡ್ಡೆ ಗೆಣಸುಗಳನ್ನು ಸೀಮಿತಗೊಳಿಸಿದ್ದರೂ ಬಳಸುವುದುಂಟು. ಆಹಾರ ಪೂರೈಕೆ ಸೇವಾ ನಿಯಮದಡಿ ವಿತರಿಸುವ ಧಾನ್ಯಗಳು ಇವರನ್ನು ಸೇರುತ್ತಿವೆ. ಆ ಮೂಲಕ ಅಕ್ಕಿಯಿಂದ ತಯಾರಾಗುವ ದೋಸೆ ಇಡ್ಲಿಗಳು ಸೋಲಿಗರ ಮನೆ ಹೊಕ್ಕಿವೆ. ತಾವೇ ಬೆಳೆಯುವ ಆಹಾರ ಧಾನ್ಯಗಳನ್ನು ನಿಸರ್ಗ ಪೂರಕ ಬೇಸಾಯದಿಂದ ಪಡೆಯುತ್ತಿರುವುದು ಕಂಡುಬರುತ್ತದೆ. ಪುನರ್ ವಸತಿ ಪ್ರದೇಶಗಳಲ್ಲಿಯೂ ಸಹ

ಕೈತೋಟಗಳನ್ನು ಮಾಡಿಕೊಂಡು ಸೊಪ್ಪು ತರಕಾರಿಗಳ ನಿರಂತರ ತಾಜಾ ಪೂರೈಕೆಯನ್ನು ರೂಢಿಯಲ್ಲಿಟ್ಟುಕೊಂಡಿದ್ದಾರೆ (ಚಿತ್ರ 4.22 ಕೈತೋಟ). ವನ್ಯಪ್ರದೇಶದಲ್ಲಿ ಆಯಾ ಕಾಲಕ್ಕನುಗುಣವಾಗಿ ಸ್ವಾಭಾವಿಕವಾಗಿ ಸಿಗುವ ಅಣ್ಣೆಸೊಪ್ಪು, ಸೀಗೆಸೊಪ್ಪು, ಹಾಲೆಸೊಪ್ಪು, ಬಡ್ಡನಿಗೆಸೊಪ್ಪು, ನುಗ್ಗೆಸೊಪ್ಪು, ಅಗಸೆಸೊಪ್ಪು, ಗುರಗಿಸೊಪ್ಪು, ಹೊನಗೊನೆಸೊಪ್ಪು ಮುಂತಾದ ಸುಮಾರು 10–15 ಬಗೆಯ ಸೊಪ್ಪುಗಳು ಮತ್ತು ಕಾಡಲ್ಲಿ ಆಯಾ ಕಾಲಕ್ಕೆ ಸಿಗುವಂತಹ ನೇರಳೆಹಣ್ಣು, ಕುಕ್ಕಲಕೆಹಣ್ಣು, ನಗರ್ಲೆಹಣ್ಣು, ಕಂಬಿಹಣ್ಣು, ಸೊಳ್ಳೆಹಣ್ಣು, ಎಲಚಿಹಣ್ಣು ಮುಂತಾದ 8–10 ಬಗೆಯ ಹಣ್ಣುಗಳು ಹಾಗೂ ಮರಗೆಣಸು, ನೂರೆಗೆಣಸು, ನಾರೆಗೆಣಸುಗಳಂತಹ 4–5 ವಿವಿಧ ಬಗೆಯ ಗೆಣಸುಗಳು ಇವರ ಪೂರಕ ಆಹಾರಗಳಾಗಿವೆ.

ಮೂಲತಃ ಅರಣ್ಯವಾಸಿಗಳಾದ ಸೋಲಿಗರು ತಮ್ಮ ಅಗತ್ಯಗಳಿಗೆ ಅರಣ್ಯವನ್ನೇ ನಂಬಿಕೊಂಡಿದ್ದವರಾದರೂ ಈಗಿನ ಬದುಕನ್ನು ಅರಣ್ಯದಾಚೆ ನಡೆಸುತ್ತಿದ್ದಾರೆ. ಕೆಲವು ಉತ್ಪನ್ನಗಳಿಗೆ ಅರಣ್ಯವನ್ನು ಈಗಲೂ ಅವಲಂಭಿಸಿದ್ದಾರೆ. ಉದಾಹರಣೆಗೆ ಹುಣಸೆಹಣ್ಣು, ಕಸಬರಿಗೆ ಕಡ್ಡಿ, ಉರುವಲು ಕಟ್ಟಿಗೆ ಮುಂತಾದವುಗಳು.

**ವೃತ್ತಿ:** ವಿದ್ಯೆ ಬದುಕಿನ ಅವಕಾಶವನ್ನೇ ಬದಲಾಯಿಸುತ್ತದೆ ವೃತ್ತಿಯನ್ನು ಬೆಳೆಸುತ್ತದೆ. ಒಟ್ಟಾರೆ ಜೀವನ ನಿರೀಕ್ಷೆಯನ್ನು ಎತ್ತರಕ್ಕೆ ಕೊಂಡೊಯುತ್ತದೆ. ಸೋಲಿಗರಲ್ಲಿ ಈ ನಿರೀಕ್ಷೆಯೇನು ಭಿನ್ನವಾಗಿಲ್ಲ. ತಮ್ಮ ಅಭಿವೃದ್ಧಿಯ ಏಳಿಗೆಯಲ್ಲಿ ಎತ್ತರಕ್ಕೆ ಹೋಗುವ ಪಯಣದಲ್ಲಿ ಬೆಟ್ಟದಿಂದ ಬಯಲಿಗೆ ಇಳಿಯುವ ಹಾದಿಯಲ್ಲಿ ಕಲಿಯುತ್ತಿರುವ ವಿದ್ಯೆ ಪೂರಕವಾಗಿದೆ. ಅಂಗನವಾಡಿ ಕೇಂದ್ರದ ಆಯಾಗಳಿಂದ ಮೊದಲಗೊಂಡು ಶಾಲಾ ಉಪಾದ್ಯಾಯರುಗಳು, ದಾದಿಯರು, ಯಂತ್ರಕರ್ಮಿಗಳು, ವ್ಯಾಪಾರಸ್ಥರು ಆಗಿ ರೂಪಗೊಂಡಿದ್ದಾರೆ.

ಮಾನವರ ಅಭಿವೃದ್ಧಿಯ ನಿರೀಕ್ಷೆಯಲ್ಲಿ ವೃತ್ತಿಯ ಅಥವಾ ಕಸುಬುಗಳಲ್ಲಿ ಎತ್ತರಕ್ಕೇರುವ ಆಸೆ ಸಹಜವಾದದ್ದು. ಇದು ಈ ಸಮುದಾಯವನ್ನೂ ಒಳಗೊಂಡಿದೆ. ತಮ್ಮ ಏಳಿಗೆಯ ಅವಕಾಶಗಳಿಗಾಗಿ ವೃತ್ತಿಯ ನಿರೀಕ್ಷೆಗಳನ್ನು ಹೆಚ್ಚಿಸಿಕೊಳ್ಳುತ್ತಾ ಹೊಸ ಹೊಸ ಮಾರ್ಗೋಪಾಯಗಳನ್ನು ಕಂಡುಕೊಳ್ಳುತ್ತಿದ್ದಾರೆ. ಇದರ ಫಲವಾಗಿಯೇ ಹೊತ್ತು ಮಾರುವ ವ್ಯಾಪಾರದಿಂದ ಮೊದಲ್ಗೊಂಡು ಆಧುನಿಕ ಸಮುದಾಯಗಳು ನಿರ್ವಹಿಸುವ ಅನೇಕ ಚಟುವಟಿಕೆಗಳಲ್ಲಿ ತೊಡಗಿಸಿಕೊಂಡಿದ್ದಾರೆ.



ಚಿತ್ರ 4.21 ಅರಣ್ಯದಾಚೆ ವಾಸಿಸುತ್ತಿರುವ ಸೋಲಿಗರ ಕಾಲೋನಿ



ಚಿತ್ರ 4.22 ಸೋಲಿಗರ ಕಾಲೋನಿಯ ನಿವಾಸಿಗಳ ಮನೆಯ ಮುಂದಿನ ಕೈತೋಟ

ಈ ಇಡೀ ಫಲಿತಾಂಶ ಮತ್ತು ವಿಶ್ಲೇಷಣೆಯನ್ನು ಒಟ್ಟಂದದಲ್ಲಿ ಕ್ರೋಢಿಕರಿಸಿ ಅಂತಿಮ ರೂಪದಲ್ಲಿ ಈ ಮಂದಿನಂತೆ ಕಂಡುಕೊಳ್ಳಬಹುದು.

- ಆಹಾರ ಭದ್ರತೆಯು ಭೂಮಿಯ ಮೇಲಿನ ಎಲ್ಲ ಜೀವಿಗಳ ಹಾತೊರಿಕೆಯಾಗಿದೆ. ಈ ಹಾತೊರಿಕೆಯ ನಿರಂತರತೆಯು ವಿವಿಧ ದೃಷ್ಟಿಕೋನಗಳನ್ನು ಒಳಗೊಂಡಿದ್ದು ನಿಸರ್ಗ, ವಾಸ್ತವತೆ ಮತ್ತು ಅಭಿವೃದ್ಧಿ ಮಾರ್ಗಗಳ ನಡುವೆ ಕಾರ್ಯೋನ್ಮುಖವಾಗಿದೆ.

- ಆಹಾರ ಭದ್ರತೆಯ ಸಾಧನೆಗಾಗಿ ವಿವಿಧ ಕ್ರಮಗಳನ್ನು ಅನುಸರಿಸುತ್ತಿರುವ ಯೋಜನೆಗಳನ್ನು ಆಯಾ ಕಾಲಘಟ್ಟದ ಸಾಮಾಜಿಕ, ರಾಜಕೀಯ ಹಾಗೂ ಆರ್ಥಿಕ ಪರಿಸ್ಥಿತಿಗನುಗುಣವಾಗಿ ರೂಪಿಸಿದೆ. ಪ್ರತಿ ಹಂತದಲ್ಲೂ ಹೆಚ್ಚಿನ ನಿರೀಕ್ಷೆ ಮತ್ತು ನೆಮ್ಮದಿಯ ವಿಕಾಸಕ್ಕೆ ಪ್ರತಿ ಸಾಧ್ಯತೆಗಳನ್ನು ಕಂಡುಕೊಳ್ಳುವ ಪ್ರಯತ್ನಗಳನ್ನು ಮಾಡಲಾಗಿದೆ. ಚಲನಶೀಲ ಸಮಾಜ ಮತ್ತು ಸಂಸ್ಕೃತಿಯ ಪ್ರತಿ ಹಂತದಲ್ಲೂ ಈ ಬಗೆಯ ಹುಡುಕಾಟಕ್ಕೆ ಕಾರಣವಾಗಿದೆ.

- ಬುಡಕಟ್ಟು ಸಮುದಾಯಗಳು ಮುಖ್ಯವಾಗಿ ನಿಸರ್ಗಾವಲಂಬಿ ವ್ಯವಸ್ಥೆಗಳು. ಜೈವಿಕ ವೈವಿಧ್ಯತೆ, ನಿಸರ್ಗ ಜೀವನ ಕ್ರಮ ಇವುಗಳನ್ನು ಅನುಸರಿಸಿ ಬದುಕು ರೂಪಿಸಿರುವ ಬಗೆಗಳು ತಮ್ಮ ಆಹಾರ ಭದ್ರತೆಯ ಹುಡುಕಾಟಕ್ಕೆ ನಿಸರ್ಗದ ಜೈವಿಕ ವೈವಿಧ್ಯತೆಯೊಳಗೆ ಸ್ವತಂತ್ರವಾದ ಅನುಭವ ಕ್ರಮದ ವಿಕಾಸಗಳು ಇವುಗಳನ್ನು ಮುಖ್ಯವಾಹಿನಿಗೆ ತರುವಲ್ಲಿ ಅವರ ಸ್ವತಂತ್ರ ಜೀವನ ಕ್ರಮದಿಂದ ಒತ್ತಾಯದ ಅವಲಂಬನೆಯ ಜೀವನ ಕ್ರಮ ಹಾಗೂ ಹೊಸ ಪರಿಸರಕ್ಕೆ ಹೊಂದಿಕೊಳ್ಳಬೇಕಾಗಿದೆ.

- ನಿಸರ್ಗವಾಸಿ ಸಮುದಾಯವು ಆಧುನಿಕ ಸಮಾಜಮುಖಿಯಾದಾಗ ಪ್ರಮುಖವಾಗಿ ಎರಡು ಬಗೆಯ ತೀವ್ರತೆಯನ್ನು ಅನುಭವಿಸಬೇಕಾಗುತ್ತದೆ. ಒಂದು ತಮ್ಮ ಜೀವನ ಕ್ರಮಕ್ಕೆ ಗಳಿಸಿದ ಕೌಶಲ್ಯವನ್ನು ಕಳೆದುಕೊಳ್ಳುವುದು ಹಾಗೂ ಹೊಸ ಪರಿಸರದ ಜೀವನ ಮಾರ್ಗಕ್ಕೆ ಬೇಕಾದ ಕುಶಲತೆಯನ್ನು ಗಳಿಸುವಲ್ಲಿ ಕಷ್ಟ ಪಡುವುದು.

- ಅಲ್ಪ ಸಂಖ್ಯೆಯಲ್ಲಿರುವ ಈ ಸಮುದಾಯವನ್ನು ಆಧುನಿಕ ಸಮುದಾಯವು ಸ್ವಾಗತಿಸಬೇಕಾದಲ್ಲಿ ಕೆಲವು ಪ್ರಮುಖ ಹೊಂದಾಣಿಕೆಗಳ ಅವಶ್ಯಕತೆ ಇದೆ. ಉತ್ತಮ ಪರಿಸರ ನಿಸರ್ಗವನ್ನು ಉಳಿಸಿಕೊಳ್ಳಲು ಅಗತ್ಯವಾದ ಜ್ಞಾನವನ್ನು ಪೋಷಿಸಿಕೊಂಡಿರುವ ಬುಡಕಟ್ಟು ಸಮುದಾಯದ ಕುಶಲತೆಗಳನ್ನು ಗೌರವದಿಂದ ಅಗತ್ಯ ಪ್ರೋತ್ಸಾಹಗಳೊಂದಿಗೆ ಕಾಣಬೇಕಾಗಿದೆ.

- ಅರಣ್ಯದ ಒಳಗಿನಿಂದ ಹೊರಬಂದು ನಾಗರೀಕ ಸಮಾಜದೊಂದಿಗೆ ಬೆರೆತು ಬಾಳಲು ಬೇಕಾದ ಅವಶ್ಯಕತೆಗಳನ್ನು ನಿರ್ಮಿಸಿಕೊಳ್ಳುವುದು ಹಾಗೂ ಕೌಶಲ್ಯಗಳನ್ನು ಬೆಳೆಸುವುದರಿಂದ ನೆಮ್ಮದಿಯ ಬದುಕಿಗೆ ಬೇಕಾದಂತಹ ಸ್ವಾತಂತ್ರ, ಸಾರ್ವಭೌಮತ್ವ, ಅಧಿಕಾರ ಮುಂತಾದವುಗಳನ್ನು ನೀಡಬೇಕಾಗಿದೆ.

## 4.8 ಭವಿಷ್ಯತ್ತಿನಲ್ಲಿ ನಡೆಸಬಹುದಾದ ಅಧ್ಯಯನಗಳು

- ಬುಡಕಟ್ಟು ಅರಿವಿನ ಅಧ್ಯಯನವನ್ನು ಅವರ ಅರಿವಿನ ಪರಿಧಿಯಲ್ಲೆ ವಿವಿಧ ಭೌಗೋಳಿಕ ಹಾಗೂ ಸಂಬಂಧಿಸಿದ ಬುಡಕಟ್ಟುಗಳ ಅಧ್ಯಯನಗಳ ಅವಶ್ಯಕತೆ ಕಾಣಬರುವುದು.

- ಅರಣ್ಯವಾಸಿ ಬುಡಕಟ್ಟುಗಳಿಗೆ ಹೊರಪ್ರಪಂಚದ ಜನತೆಯಿಂದ ಭಿನ್ನವಾದ ಅವರದೇ ಆದ ರೀತಿ ರಿವಾಜುಗಳನ್ನು ಒಪ್ಪುವಂತಹ ಬುಡಕಟ್ಟು ನೀತಿಯ ಅವಶ್ಯಕತೆ ಸದ್ಯಕ್ಕೆ ಇದೆ.

- ಬುಡಕಟ್ಟು ಜನತೆಯ ಆರೋಗ್ಯ, ಪೌಷ್ಟಿಕ ಸ್ಥಿತಿ, ಜೀವನ ಶೈಲಿ ಹಾಗೂ ಜೀವನ ಚಕ್ರದ ವೈಜ್ಞಾನಿಕ ಅರಿವಿನ ಅಧ್ಯಯನದ ಅವಶ್ಯಕತೆ ಇದೆ.

# ಅಧ್ಯಾಯ 5. ಸಾರಾಂಶ

ಕೃಷಿ ಸಂಸ್ಕೃತಿ, ಆಹಾರ ಉತ್ಪಾದನೆ, ಆಹಾರ ಸಾಮಗ್ರಿಗಳ ಶೇಖರಣೆ ಇತ್ಯಾದಿಗಳೊಂದಿಗೆ ವಿಕಾಸದಲ್ಲಿ ವಿವಿಧ ಹಂತಗಳನ್ನು ಗುರುತಿಸಿಕೊಂಡು ಸಾಗುತ್ತಿರುವ ನಾಗರೀಕ ಸಮಾಜ ಒಂದೆಡೆಯಾದರೆ, ನಾಗರೀಕ ಸಮಾಜದಿಂದ ದೂರವೇ ಉಳಿದು ನಿಸರ್ಗಕ್ಕೆ ತುಂಬ ಹತ್ತಿರವಾಗಿ ಬದುಕುತ್ತಾ ಜೀವನ ಸಾಗಿಸುತ್ತಿರುವ ಬುಡಕಟ್ಟು ಸಮುದಾಯವು ಆಹಾರದ ಭದ್ರತೆಗಾಗಿ ತಮ್ಮದೇ ಆದ ಪರಂಪರೆ, ಜ್ಞಾನ, ವಿಶೇಷ ವಿಧಾನಗಳನ್ನು ಅಳವಡಿಸಿಕೊಂಡಿರುವುದನ್ನು ಗಮನಿಸಬಹುದು. ಕೃಷಿಯಲ್ಲಿ ಬಹುಬೆಳೆ ಪದ್ಧತಿ ಅಳವಡಿಕೆ, ನೈಸರ್ಗಿಕ ಸಂಪನ್ಮೂಲಗಳ ಸದ್ಬಳಕೆಯ ಜ್ಞಾನ, ಸಂಗ್ರಹಿಸಿದ ಆಹಾರ ಪದಾರ್ಥಗಳನ್ನು ಹಂಚಿಕೊಂಡು ಸೇವಿಸುವ ಪದ್ಧತಿ, ಸಂಗ್ರಹಿಸಿದ ಆಹಾರದಲ್ಲಿ ಸ್ವಲ್ಪ ಭಾಗವನ್ನು ಮುಂದಿನ ದಿನಕ್ಕಾಗಿ ಸಂಗ್ರಹಿಸಿಡುವ ಪದ್ಧತಿಯನ್ನು ಸಹ ರೂಢಿಸಿಕೊಂಡಿರವುದನ್ನು ಕಾಣಬಹುದು. ಈ ಅಭ್ಯಾಸಗಳಿಂದ ಸ್ವಾಭಾವಿಕ ಸಂಪನ್ಮೂಲಗಳ ಜೋಪಾನವಾಗಿ ಕಾಯ್ದುಕೊಳ್ಳುವುದನ್ನು ಇವರಲ್ಲಿ ಗಮನಿಸಿಬಹುದಾಗಿದೆ. ಆದರೆ ಇಂದಿನ ಪರಿಸ್ಥಿತಿಯಲ್ಲಿ ಅನೇಕ ಬುಡಕಟ್ಟು ಸಮುದಾಯಗಳು ತಮ್ಮ ಜೀವನ ನಿರ್ವಹಣೆಗಾಗಿ ತಲೆಮಾರುಗಳಿಂದ ರೂಢಿಸಿಕೊಂಡು ಬಂದಿರುವ ವೃತ್ತಿಗಳಿಂದ ಸಂಪೂರ್ಣವಾಗಿ ಹೊರ ಬರಲಾಗದ ಮತ್ತು ನಾಗರಿಕ ಸಮಾಜದ ಜೊತೆ ಸಂಪೂರ್ಣ ಒಗ್ಗಿಕೊಳ್ಳದೆ ಒಂದು ರೀತಿಯ ಗೊಂದಲಕ್ಕೆ ಸಿಲುಕಿಕೊಂಡಿದ್ದಾರೆ.

ಅನಾದಿಕಾಲದಿಂದಲೂ ಮನುಷ್ಯ ತನ್ನ ಆಹಾರಕ್ಕಾಗಿ ಜೈವಿಕ ಸಂಪತ್ತಿನ ಮೇಲೆ ಅವಲಂಬಿತನಾಗಿದ್ದಾನೆ ಆದ್ದರಿಂದ ಜೈವಿಕ ಜಗತ್ತಿನೊಂದಿಗೆ ಅವಿನಾಭಾವ ಸಂಬಂಧ ಬೆಳಿಸಿಕೊಂಡು ಬಂದಿದ್ದಾನೆ. ಇಂತಹ ಒಂದು ಅನ್ಯೋನ್ಯ ಸಂಬಂಧವನ್ನು ಇಂದಿಗೂ ಸಹ ನಿಸರ್ಗಕ್ಕೆ ಹತ್ತಿರವಾಗಿ ಬದುಕುತ್ತಿರುವ ಬುಡಕಟ್ಟು ಕುಟುಂಬಗಳಲ್ಲಿ ಕಾಣಬಹುದಾಗಿದೆ. ನಿಸರ್ಗದ ಮಡಿಲಲ್ಲಿ ಹುಟ್ಟಿ ನಿಸರ್ಗದ ಜತೆ ಆಡಿ ಬೆಳೆದು ನಿಸರ್ಗವನ್ನೇ ಪೂಜಿಸಿ ಬದುಕುತ್ತಿರುವ ಬುಡಕಟ್ಟು ಸಮುದಾಯವು ಸಸ್ಯ ಸಂಪತ್ತಿನ ಬಳಕೆ ಮತ್ತು ಸಂರಕ್ಷಣೆ ವಿಧಾನಗಳನ್ನು ಕಂಡುಕೊಂಡಿದ್ದಾನೆ. ಅವರು ಆಹಾರ ಭದ್ರತೆಗಾಗಿ ಕಂಡುಕೊಂಡ ವಿವಿಧ ಆಯಾಮಗಳ ಕುರಿತು ಅಭ್ಯಸಿಸಲು ನಿಸರ್ಗಕ್ಕೆ ಹತ್ತಿರವಾಗಿ ವಾಸಿಸುತ್ತಿರುವ ಸೋಲಿಗ ಮತ್ತು ಬುಡಕಟ್ಟು ಜನರ ಜೀವನ ಶೈಲಿ, ಸಾಮಾಜಿಕ, ಆರ್ಥಿಕ, ಪೌಷ್ಟಿಕ ಸ್ಥಿತಿಗತಿ ಆಹಾರದ ಬಗೆಗಿನ ಪಾರಂಪರಿಕ ಜ್ಞಾನ, ಆಹಾರದ ಭದ್ರತೆಗಾಗಿ ಅವರು ರೂಢಿಸಿಕೊಂಡು ಬಂದಿರುವ ಸಂಪ್ರದಾಯಗಳು, ಆಚಾರ ವಿಚಾರಗಳು ಆಚರಣೆಗಳು ಅನುಸರಿಸುತ್ತಿರುವ ವಿಧಾನಗಳು ಮುಂತಾದುವುಗಳನ್ನು ವಿವಿಧ ದೃಷ್ಟಿಕೋನಗಳ ಹಿನ್ನಲೆಯಿಂದ ಅಧ್ಯಯನ ಮಾಡಲಾಗಿದೆ.

ಈಗಾಗಲೆ ಅನೇಕ ಸಂಶೋಧನೆಗಳಲ್ಲಿ ಕಂಡುಕೊಂಡ ಪರಿಕಲ್ಪನೆಗಳನ್ನು ಒಟ್ಟುಗೂಡಿಸಿ ನೋಡುವುದು ಅಂದರೆ ಆಹಾರ ಉತ್ಪಾದನೆಯಿಂದ ಹಿಡಿದು ಆಹಾರ ಸಂಗ್ರಹಣೆ, ಸಂಸ್ಕರಣೆ, ಸರಬರಾಜು, ಹಂಚಿಕೆಗಾಗಿ ರೂಪಿಸಿ ಕಾರ್ಯನಿರ್ವಹಿಸುತ್ತಿರುವ ವಿವಿಧ ಯೋಜನೆಗಳು, ಕಾರ್ಯಕ್ರಮಗಳು, ಪಾರಂಪರಿಕ ವಿಧಾನಗಳ ಕುರಿತಾದ ಲಭ್ಯವಿರುವ ಆಕರಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು. ಜೊತೆಗೆ ಸಮಕಾಲೀನ ಸಂದರ್ಭದ ಆಹಾರ ಭದ್ರತೆಯ ಅವಲೋಕನ.

ನಿಸರ್ಗ ಕಟ್ಟಿಕೊಟ್ಟ ಭದ್ರತೆಯಲ್ಲಿ ನಾಗರೀಕ ಸಮಾಜಕ್ಕಾಗಬಹುದಾದ ಅನುಕೂಲಗಳ ಪರಾಮರ್ಶೆ. ಮನುಷ್ಯರು ಆಹಾರ ಭದ್ರತೆಗಾಗಿ ಅನುಸರಿಸುತ್ತಿರುವ ಅನೇಕ ವಿಧಾನಗಳಂತೆ ನಿಸರ್ಗದಲ್ಲಿಯೂ ಸಹ ಆಹಾರ ಭದ್ರತೆಗಾಗಿ ನಡೆಯುತ್ತಿರುವ ವಿವಿಧ ವಿಧಾನಗಳನ್ನು ನಾವು ಕಾಣುತ್ತಿದ್ದೇವೆ. ಇಂತಹ ವಿಧಾನಗಳ ಮತ್ತು ತಂತ್ರಗಳ ಕುರಿತಾಗಿ ಉದಾಹರಣೆಗಾಗಿ ಆಹಾರ ಚಕ್ರ, ನಿಸರ್ಗದ ಚಟುವಟಿಕೆಗಳು ಮುಂತಾದವುಗಳ ಆಕರಗಳನ್ನು ಸಂಗ್ರಹಿಸಿ ವಿಶ್ಲೇಷಿಸುವುದು ಮತ್ತು ಇಂತಹ ಒಂದು ಸಾಧ್ಯತೆಗೆ ನಿಸರ್ಗದ ಭಾಗವಾಗಿ ಜೀವಿಸುವ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಮತ್ತು ಭದ್ರತೆಯ ಅಧ್ಯಯನ. ಪ್ರಸಕ್ತ ಅಧ್ಯಯನಕ್ಕೆ ಅಗತ್ಯವಾದ ಪೂರಕ ಸಾಹಿತ್ಯವನ್ನು ಅವಲೋಕಿಸಿ ಈ ಸಂಶೋಧನೆಗೆ ಅಗತ್ಯವಾದ ಬೆಂಬಲವನ್ನು ವಿಶ್ಲೇಷಣೆ ಮತ್ತು ತರ್ಕಕ್ಕೆ ಬಳಸಲಾಗಿದೆ.

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯಗಳ ಆಹಾರ ವೈವಿಧ್ಯತೆ ಮತ್ತು ಭದ್ರತೆ ಅಧ್ಯಯನವನ್ನು, ಈ ಎರಡು ಬುಡಕಟ್ಟು ಸಮುದಾಯಗಳು ವಾಸಿಸುತ್ತಿರುವ ಚಾಮರಾಜನಗರ ಮತ್ತು ಮೈಸೂರು ಜಿಲ್ಲೆಯ ಹಾಡಿಗಳಲ್ಲಿ ಸಂದರ್ಶನ ಮಾರ್ಗದರ್ಶಿಯ ಮೂಲಕ ಮಾಹಿತಿಯನ್ನು ಸಂಗ್ರಹಿಸಿ ನಡೆಸಲಾಯಿತು. ಇದರೊಂದಿಗೆ ಆಹಾರ ಭದ್ರತೆಯ ವೈವಿಧ್ಯಮಯ ದೃಷ್ಟಿಕೋನಗಳ ಕುರಿತು ವಿವಿಧ ಆಕರಗಳ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಸಂಶೋಧನಾ ಅಧ್ಯಯನದ ಉದ್ದೇಶಗಳಿಗೆ ಅನುಗುಣವಾಗಿ ತರ್ಕಬದ್ಧವಾಗಿ ವಿಂಗಡಿಸಿಕೊಂಡು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ದಾಖಲಿಸಿದ ಫಲಿತಾಂಶಗಳ ಸಾರಾಂಶವು ಈ ಕೆಳಗಿನಂತಿದೆ.

ಅಧ್ಯಯನ ಪ್ರದೇಶವನ್ನೊಳಗೊಂಡ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿನ ಅರಣ್ಯವು ನಮ್ಮ ರಾಜ್ಯದ ಒಟ್ಟು ಅರಣ್ಯ ಪ್ರದೇಶದ 10.68 ಪ್ರತಿಶತ ಅರಣ್ಯವನ್ನು ಹೊಂದಿದೆ. ಇಲ್ಲಿನ ಅರಣ್ಯ ಪ್ರದೇಶವು ವೈವಿಧ್ಯತೆಮಯವಾಗಿದ್ದು, ಇದು ತನ್ನ ಆವಾಸ ಹಿರಿಮೆಯಿಂದ ಅನೇಕ ಬುಡಕಟ್ಟುಗಳ ವಾಸಯೋಗವನ್ನು ಕರುಣಿಸಿದ್ದು, ರಾಜ್ಯವನ್ನು ಅರಣ್ಯವಾಸಿ ಬುಡಕಟ್ಟುಗಳ ಹಿನ್ನೆಲೆಯಿಂದ, ಮಾನವ್ಯಶಾಸ್ತ್ರೀಯ ನೆಲೆಯಿಂದ ಇತಿಹಾಸವನ್ನು ಸೃಜಿಸಿದೆ.

ಇಲ್ಲಿನ ಅರಣ್ಯವು ಮಾನವರ ಕ್ರಿಯಾಶೀಲ ನೆಲೆಯಾಗಿ ತನ್ನದೇ ಛಾಪು ಮೂಡಿಸಿದ್ದು, ಮಾನವೀಯ ಇತಿಹಾಸದಲ್ಲಿ ಅರಣ್ಯ ಮತ್ತು ಮಾನವ ಸಂಬಂಧಗಳ ಸಂಕೀರ್ಣತೆಯನ್ನು ತೆರೆದಿಡುವಲ್ಲಿ ನೆರವಾಗಿದೆ. ಅರಣ್ಯವು ಒಮ್ಮೆ ಆ ಪ್ರದೇಶದಲ್ಲಿ ವಾಸಿಸುವ ಎಲ್ಲ ಸಮುದಾಯಗಳ ಆಸ್ತಿಯಾಗಿತ್ತು. ಕ್ರಮೇಣ ಆಡಳಿತಾತ್ಮಕ ಬೆಳವಣಿಗೆಗಳಿಂದ ಅದನ್ನು ಮಾನವ ನೆಲೆಯಿಂದ ಸಮುದಾಯಗಳನ್ನು ಅರಣ್ಯದಿಂದ ದೂರ ತಳ್ಳುವಂತಹ ಪರಿಸ್ಥಿತಿಯನ್ನು ಎದುರಿಸುವಂತಾಯಿತು. ನೆಲೆಯಲ್ಲಾದ ಸಾಂಸ್ಕೃತಿಕ, ಸಾಮಾಜಿಕ, ಪರಿಸರದ ಬದಲಾವಣೆಗಳು ಬುಡಕಟ್ಟುಗಳ ಬದುಕಿನ ಮೇಲೆ ಅಗಾಧ ಪರಿಣಾಮವನ್ನು ತಂದೊಡ್ಡಿದವು.

ಬಿಳಿಗಿರಿರಂಗನ ಬೆಟ್ಟದಲ್ಲಿ ವಿವೇಕಾನಂದ ಗಿರಿಜನ ಕಲ್ಯಾಣಕೇಂದ್ರ ಸ್ಥಾಪನೆಯ ನಂತರ ಸೋಲಿಗರಲ್ಲಿ ಅನೇಕ ಬದಲಾಣೆಗಳು ಕಾಣಬರುತ್ತವೆ. ಈ ಬದಲಾವಣೆಗಳು ಈ ಸಮುದಾಯವನ್ನು

ಮುಖ್ಯವಾಹಿನಿಗೆ ತರುವ ಪ್ರಯತ್ನದಲ್ಲಿ ಹಲವು ಯಶಸ್ಸುಗಳನ್ನು ಕಂಡುಕೊಂಡಿದೆ. ಅಲ್ಲದೆ, ಇತರ ಸಂಸ್ಥೆಗಳೂ ಈ ಪ್ರಯತ್ನದಲ್ಲಿ ಕೈ ಜೋಡಿಸಿವೆ.

ಅಧ್ಯಯನಕ್ಕಾಗಿ ಭೇಟಿ ನೀಡಿದ ಚಾಮರಾಜನಗರ ಜಿಲ್ಲೆ ಮತ್ತು ಮೈಸೂರು ಜಿಲ್ಲೆಯಲ್ಲಿರುಯವ ಸೋಲಿಗ ಮತ್ತು ಜೇನುಕುರುಬರು ವಾಸಿಸುತ್ತಿರುವ ಪರಿಸರದ ಆಧಾರದ ಮೇಲೆ ಅರಣ್ಯದೊಳಗೆ ವಾಸಿಸುತ್ತಿರುವವರು, ಅರಣ್ಯದಂಚಿನಲ್ಲಿ ವಾಸಿಸುತ್ತಿರುವವರು ಮತ್ತು ಅರಣ್ಯದಾಚೆ ವಾಸಿಸುತ್ತಿರುವವರು ಎಂದು ವಿಂಗಡಿಸಿ ಅಭ್ಯಸಿಸಲಾಗಿದೆ.

ಇವರು ವಾಸಿಸುತ್ತಿರುವ ಎಲ್ಲ ಪ್ರದೇಶಗಳು ತಾವು ಹಿಂದೆ ವಾಸಿಸುತ್ತಿದ್ದ ಅರಣ್ಯ ಪ್ರದೇಶದ ಸನಿಹವೇ ಇದ್ದು, ಅರಣ್ಯ ಜೀವನದ ಅನುಭವವನ್ನು ಉಳಿಸುವ ಮಾದರಿಯದ್ದಾಗಿವೆ. ಹಲವಾರು ವಸತಿ ಪ್ರದೇಶಗಳು ಇತರೆ ಪ್ರದೇಶಗಳಿಗೆ ನೇರ ಸಂಪರ್ಕವನ್ನು ಹೊಂದಿರದ ಸ್ಥಳಗಳಾಗಿವೆ. ಸರ್ಕಾರದ ಸಹಾಯದಿಂದ ಬಹುಪಾಲು ಮನೆಗಳು ನಿರ್ಮಿತವಾಗಿದ್ದರೂ ತಮ್ಮ ಹಳೆಯ ಸಂಪ್ರದಾಯದ ಶೈಲಿಗಳನ್ನು ವಿಸ್ತರಿಸಿದ ಮನೆಗಳನ್ನು ಕಟ್ಟಿಕೊಳ್ಳುವುದರ ಮೂಲಕ ಉಳಿಸಿಕೊಂಡಿದ್ದಾರೆ.

ಈ ಬಗೆಯ ಸೋಲಿಗರ ಮತ್ತು ಜೇನುಕುರುಬರ ನಡೆಯನ್ನು ಕಂಡಹಾಗೆ ತಿಳಿಯುವ ಅಂಶವೆಂದರೆ, ಕಾಡಿನೊಳಗಿಂದ ನಾಗರೀಕ ಜೀವನದ ಕಡೆಗೆ ಹೆಜ್ಜೆ ಇಟ್ಟಿರುವ ಇವರು ಮುಖ್ಯವಾಗಿ ಈ ನಾಗರೀಕತೆಯಡೆಗಿನ ಅವರ ಸಾಂಸ್ಕೃತಿಕ ಹೆಜ್ಜೆಗುರುತುಗಳು ಗೋಚರವಾಗುತ್ತವೆ. ಮುಖ್ಯವಾಹಿನಿಯತ್ತ ಸಾಗುತ್ತಿರುವ ಅವರ ಜೀವನ ವಿಧಾನವನ್ನು ವಸತಿ ಸ್ಥಳಗಳ ಬದಲಾವಣೆಯಲ್ಲೂ, ನೆಲೆಯಲ್ಲೂ ಗುರುತಿಸುವುದು ಸುಲಭವೇ ಇದೆ. ಇದರ ಬಹುವಾದ ಕಾರಣಗಳನ್ನು ಅವರ ಸಾಮಾಜಿಕ ಸ್ಥಿತಿ, ಆಡಳಿತ ನಿರ್ಧಾರಗಳು ಮುಂತಾದ ಸಂಗತಿಗಳಿಂದ ಹೆಚ್ಚಿನ ವಿವರಗಳನ್ನು ಹೊಂದಲು ಶಕ್ಯವಿದೆ.

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿ ಸಾಮಾನ್ಯವಾಗಿ 3–6 ಸದಸ್ಯರನ್ನು ಒಳಗೊಂಡ ಕುಟುಂಬಗಳಿವೆ. ಸೋಲಿಗ ಕುಟುಂಬಗಳಲ್ಲಿಯ ಸರಾಸರಿ ಸದಸ್ಯರ ಸಂಖ್ಯೆ 6 ಇದ್ದರೆ ಜೇನುಕುರುಬರ ಕುಟುಮಬಗಳಲ್ಲಿಯ ಸರಾಸರಿ ಸದಸ್ಯರ ಸಂಖ್ಯೆ 4.90 ಇದೆ. ಗಂಡ, ಹೆಂಡತಿ ಮತ್ತು ಮಕ್ಕಳು ಬಹುತೇಕ ಕುಟುಂಬಗಳಲ್ಲಿ ಕಾಣಬರುವ ಸದಸ್ಯರಾಗಿರುತ್ತಾರೆ.

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳಲ್ಲಿಯ ಸಾಕ್ಷರರ ಪ್ರಮಾಣವು ನಮ್ಮ ರಾಜ್ಯದ ಸರಾಸರಿ ಸಾಕ್ಷರರ ಪ್ರಮಾಣದ (66.6/2001ರ ಗಣತಿಯಂತೆ)ಅರ್ದಕ್ಕಿಂತಲೂ ಕಡಿಮೆಯೇ ಇದೆ. ಸೋಲಿಗರಲ್ಲಿ ಸರಾಸರಿ ಸಾಕ್ಷರರ ಪ್ರಮಾಣ 20.35 ಇದ್ದರೆ, ಜೇನುಕುರುಬರಲ್ಲಿ ಕೇವಲ 15.87 ರಷ್ಟು ಮಾತ್ರ ಸಾಕ್ಷರರಿದ್ದಾರೆ. ಬುಡಕಟ್ಟು ಜನಾಂಗದ ಶಿಕ್ಷಣ ಸ್ಥಿತಿಯು ಆಧುನಿಕ ಶಿಕ್ಷಣದ ಪ್ರಾಥಮಿಕ ಹಂತಕ್ಕಷ್ಟೇ ಸೀಮಿತವಾಗಿದೆ.

ಕೃಷಿ, ಕೂಲಿ ಕೆಲಸ, ಅರಣ್ಯ ಉತ್ಪನ್ನಗಳ ಸಂಗ್ರಹಣೆ, ಪಶು ಸಂಗೋಪನೆ ಇವು ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಜೀವನೋಪಾಯಕ್ಕಾಗಿ ಪ್ರಮುಖವಾಗಿ ನಿರ್ವಹಿಸುತ್ತಿರುವ ಉದ್ಯೋಗಗಳಾಗಿವೆ. ಸೋಲಿಗ ಮತ್ತು ಜೇನುಕುಬ ಬುಡಕಟ್ಟುಗಳು ಬೆಟ್ಟದಿಂದ ಮೈದಾನ ಪ್ರದೇಶದ ಕಡೆ ಬಂದು ನೆಲೆ ಕಂಡುಕೊಂಡಾಗ ಜೀವನೋಪಾಯಕ್ಕಾಗಿ ಕೃಷಿಯಲ್ಲಿ ತೊಡಗಿದರು. ಇವರು ಕೃಷಿಯಲ್ಲಿ ಕುಮರಿ ಬೇಸಾಯ ಪದ್ಧತಿಯನ್ನು ಅನೇಕ ವರ್ಷಗಳಿಂದ ರೂಢಿಸಿಕೊಂಡಿದ್ದವರು. ಅರಣ್ಯ ನೀತಿಯ ಜಾರಿ ನಂತರ ಸ್ಥಿರ ಬೇಸಾಯ ಪದ್ಧತಿಗೆ ಬದಲಾಗುತ್ತಿದ್ದಾರೆ. ಸರ್ಕಾರವು ಈ ಸಮುದಾಯವನ್ನು ಸಮಾಜದ ಮುಖ್ಯವಾಹಿನಿಗೆ ತರುವುದಕ್ಕೊಸ್ಕರ ಅವರಿಗೆ 2ರಿಂದ 2.1/2 ಎಕರೆ ಜಮೀನನ್ನು ನೀಡಿದ್ದಾರೆ.

ರಾಗಿ, ಮುಸುಕಿನಜೋಳ, ಅವರೆ ಮತ್ತು ಅಲಸಂದಿ ಬೆಳೆಗಳು, ಸೋಲಿಗ ಮತ್ತು ಜೇನುಕುರುಬ ಬುಡಕಟ್ಟುಗಳು ಬೆಳೆಯುವ ಪ್ರಮುಖ ಬೆಳೆಗಳಾಗಿವೆ. ಬಿತ್ತನೆಗೆ ಬೇಕಾದ ಬೀಜಗಳನ್ನು ಇವರೇ ಸಂಗ್ರಹಿಸಿಟ್ಟುಕೊಂಡು ಬಳಸುತ್ತಾರೆ. ಮತ್ತು ಬೆಳೆಗಳಿಗೆ ಮಾರುಕಟ್ಟೆಯಲ್ಲಿ ಲಭ್ಯವಿರುವ ಯಾವುದೇ ರಾಸಾಯನಿಕಗಳಿಗೆ ಮೊರೆ ಹೋಗದೆ ತಾವೇ ತಯಾರಿಸಿದ ಕಾಂಪೋಸ್ಟ್ ಗೊಬ್ಬರಗಳನ್ನು ಬಳಸುತ್ತಿದ್ದಾರೆ. ಬೆಳೆದ ಬೆಳೆಯನ್ನು ಸಂಪೂರ್ಣವಾಗಿ ಮಾರಾಟ ಮಾಡದೇ ಮುಖ್ಯವಾಗಿ ತಮ್ಮ ಮನೆ ಬಳಕೆಗಾಗಿ ಉಪಯೋಗಿಸುತ್ತಾರೆ.

ಅರಣ್ಯದಲ್ಲಿ ವಾಸವಾಗಿರುವ ಬಹುತೇಕ ಕುಟುಂಬಗಳಿಗೆ ಅರಣ್ಯ ಉತ್ಪನ್ನಗಳ ಸಂಗ್ರಹಣೆಯು ದಿನನಿತ್ಯದ ಅವಶ್ಯಕತೆಗಳಾದ ಉರುವಲು, ಮರಮುಟ್ಟು, ಗೆಡ್ಡೆ-ಗೆಣಸು, ಸೊಪ್ಪು ತರಕಾರಿ ಮತ್ತು ಹಣ್ಣುಗಳನ್ನು ಒದಗಿಸುವುದಲ್ಲದೇ ಅನೇಕ ಕಿರುಉತ್ಪನ್ನಗಳಾದ ಜೇನು, ಮೇಣ, ಸೀಗೆಕಾಯಿ, ಧೂಪ, ಅಳಲೆಕಾಯಿ, ನೆಲ್ಲಿಕಾಯಿ ಮುಂತಾದವುಗಳನ್ನು ಸಂಗ್ರಹಿಸಿ ತಂದು ಹತ್ತಿರದ ಮಾರುಕಟ್ಟೆ ಮತ್ತು ಲ್ಯಾಂಪ್ ಸೊಸೈಟಿಗೆ ಮಾರುವುದರಿಂದ ಇವರ ಆರ್ಥಿಕತೆಗೆ ಕಿರು ಅರಣ್ಯ ಉತ್ಪನ್ನಗಳ ಸಂಗ್ರಹಣೆಯು ಪೂರಕವಾಗಿದೆ.

ಸೋಲಿಗ ಮತ್ತು ಜೇನುಕುರುಬ ಬುಡಕಟ್ಟು ಸಮುದಾಯವು ಪಶು ಸಂಗೋಪನೆಯಲ್ಲಿ ಹೆಚ್ಚು ಆಸಕ್ತರಾಗಿಲ್ಲ. ತಮ್ಮ ಆಹಾರದ ಉಪಯೋಗ ಮತ್ತು ಗೊಬ್ಬರದ ಉತ್ಪಾದನೆಗಾಗಿ ಮಾತ್ರ ಇವರಲ್ಲಿ ಪಶುಸಂಗೋಪನೆಯ ಆಸಕ್ತಿ ಕಂಡುಬರುತ್ತದೆ. ಅದಕ್ಕಾಗಿ ಕೆಲವು ದನಕರುಗಳು, ಆಡು, ಕೋಳಿಗಳನ್ನು ಸಾಕಿಕೊಂಡಿದ್ದಾರೆ.

ರಾಗಿಯು ಇವರ ಆಹಾರ ಪದ್ಧತಿಯಲ್ಲಿ ಪ್ರಮುಖ ಭಾಗವನ್ನು ಆವರಿಸಿದೆ. ತೊಗರಿ, ಅವರೆ, ಅಲಸಂದೆ, ಹುರಳಿ ಇವು ಇವರ ದೈನಂದಿನ ಆಹಾರದಲ್ಲಿ ಬಳಕೆಯಲ್ಲಿರುವ ಪ್ರಮುಖ ದ್ವಿದಳ ಧಾನ್ಯಗಳು. ಇವರ ಆಹಾರ ಪದ್ಧತಿಯು ತುಂಬಾ ಸರಳವಾಗಿದ್ದು, ಅಷ್ಟೇನು ವೈವಿಧ್ಯಮಯವಾಗಿರದೇ ಏಕರೂಪದ್ದಾಗಿರುತ್ತದೆ. ಸಾಮಾನ್ಯವಾಗಿ ಬೆಳಗಿನ ಸಮಯದ ತಿಂಡಿ ಅಥವಾ ಊಟಕ್ಕೆ ರಾಗಿ ಮುದ್ದೆ ಜತೆಗೆ ನೆಂಚಿಕೊಳ್ಳಲು ಯಾವುದಾದರೊಂದು ಬೇಳೆ ಜತೆಗೆ ಸೊಪ್ಪು ಅಥವಾ ತರಕಾರಿ ಬೆರಸಿದ ಸಾರು ಇರುತ್ತದೆ. ಆದರೆ ಪ್ರತಿನಿತ್ಯ ಬಳಸುವ ಸೊಪ್ಪುಗಳಲ್ಲಿ ವೈವಿಧ್ಯತೆಯನ್ನು ಕಾನಬಹುದು.

